

ಶ್ರೀ

ಆನಂದವನ

# ಕಾಲ ಸರ್ಪ

(ಪತ್ತೇದಾರಿ ಕತೆ.)

೦

ಭಿ ಪ. ಕಾಳೆ.

೧-೮-೦ ರೂ

ಶ್ರೀ ಶೇಷಾಚಲ ಗ್ರಂಥಮಾಲಾ, ಆನಂದವನ

# ಕಾಲಸರ್ಪ

( ಅತ್ಯುತ್ತಮ ಪತ್ತೇದಾರಿ ಕತೆ )



ಸಂಗ್ರಾಹಕ, ಮುದ್ರಕ, ಪ್ರಕಾಶಕ.

**ಭಿ. ಪ. ಕಾಳೆ,**

ಶ್ರೀ ಶೇಷಾಚಲ ಪ್ರೆಸ್ಸ,

ಆನಂದವನ (ಅಗಡಿ)

—(§)—

ಸಪ್ಟಂಬರ ೧೯೪೩

೧—೮—೦



# ಅನುಕ್ರಮಣಿಕೆ





——

# ಕಾಲಸರ್ಪ.



(ಪತ್ತೇದಾರಿ ಕತೆ.)



## ಹರಕೋರ್ಟನ ಸಂತಾಪ!

ಶರತ್ಕಾಲದ ರಾತ್ರಿ. ಚಳಿ ಹಾಗು ಇಬ್ಬನ್ನಿ ಹೆಚ್ಚಾಗಿ ಬಿದ್ದಿವೆ. ನಾವು ಯಾವ ಕಾಲದ ಸಂಗತಿ ತಿಳಿಸುತ್ತಿರುವೆವೋ ಆಗ ಯುರೋಪದಲ್ಲಾದ ಗತ ಮಹಾಯುದ್ಧವು ಸಂಭವಿಸಬಹುದೆಂಬ ವಿಷಯದ ಕಲ್ಪನೆ ಕೂಡ ಅದಾರಿಗೂ ಇರಲಿಲ್ಲ. ಸಂಧ್ಯಾಕಾಲದಲ್ಲಿ ಲಂಡನ್ನಿನ ರಾಜಬೀದಿಗಳು ಉಜ್ವಲ ವಿದ್ಯುದ್ದೀಪ ಮಾಲೆಗಳಿಂದ ಒಪ್ಪುತ್ತಿದ್ದವು. ಪ್ರಮೋದ ವನಗಳಲ್ಲೆಲ್ಲ ಆಮೋದದ ಉತ್ಸವಗಳು ಉತ್ಸಾಹಭರದಿಂದ ನಡೆದಿದ್ದವು. ಬೀದಿ-ಬೀದಿಗಳಿಂದ ಬರುತ್ತಿದ್ದ ಉತ್ತಮ ಉಡುಪಿನ ಸ್ತ್ರೀ-ಪುರುಷರ ಸಮೂಹಗಳು ಆ ಉದ್ಯಾನಗಳನ್ನು ಹರ್ಷೋತ್ಸಾಹದಿಂದ ಸೇರುತ್ತಿದ್ದವು. ಪ್ರತಿ ಮನೆಗಳಲ್ಲೂ ಆನಂದದ ಕೋಲಾಹಲವೆದ್ದಿತ್ತು! ಇಡೀ ಲಂಡನ್ನ ಪಟ್ಟಣವೇ ಉತ್ಸವಮಗ್ನವಾಗಿರುವಂತೆ ಭಾಸವಾಗತಲಿತ್ತು.

'ಹೇ' ಮಾರ್ಕೇಟಿನ ತಲೆಬಾಗಿಲ ಬಳಿಗೇ ಇಂಪೀರಿಯಲ್ ಥೇಟರಿನ ಪ್ರಚಂಡವಾದ ಕಟ್ಟಡ. ಆ ದಿನ ಆ ನಾಟಕ ಶಾಲೆಯ ಹೊರಮುಗ್ಗಲು ಬಹು ದೊಡ್ಡ ವಿದ್ಯುದ್ದೀಪಗಳು ಪ್ರಕಾಶಿಸುತ್ತಿದ್ದು, ಅವು ಪೂರ್ಣಚಂದ್ರನ ಬೆಳಕನ್ನು ಸಹ ಮೀರುತ್ತಿದ್ದವು. ಆ ಥೇಟರಿನ ಪ್ರವೇಶದ್ವಾರದಲ್ಲಿಯ ಆ ಚಂದ್ರಾತಪವಾದಂಥ ಬೆಳಕಿನಲ್ಲಿ ಕೆಳಗಡೆಗೆ ಚಿತ್ರ ವಿಚಿತ್ರ ಬಣ್ಣದ ಹಾಗು ಕಲಾಕೌಶಲ್ಯಪೂರ್ಣ ರಕ್ತವರ್ಣ ಸದೃಶಗಳಾದ ಜಮಖಾನೆಗಳು ಹಾಸಲ್ಪಟ್ಟಿದ್ದವು. ಅದನ್ನು ನೋಡುತ್ತಲೆ ಈ ದಿನ ಈ ಥೇಟರಿನಲ್ಲಿ ಯಾವುದೋ ಒಂದು ವಿಶೇಷ ಕಾರ್ಯಕ್ರಮವಿರುತ್ತದೆಂದು ತಿಳಿಯುವಂತಿತ್ತು. ಆ ದಿನ ಅದಾವುದೋ ಒಂದು ಸಂಸ್ಥೆಯ ಸಹಾಯಕ್ಕೆಂದು ಅಂದಿನ ನಾಟಕದ ಆದಾಯವನ್ನೆಲ್ಲ ದಾನವಾಗಿ ಕೊಡಲಾಗುತ್ತಿತ್ತು. ನಾಟಕದ ಭಾಷೆಯಲ್ಲಿ ಅದಕ್ಕೆ 'ಸಹಾಯ್ಯ ರಜನೀ' ಎಂದೆನ್ನುವರು. ಅದಕ್ಕೆಂದೇ ಆ ರಾತ್ರಿ ಅಲ್ಲಿಗೆ ಲಂಡನ್ನಿನ ಬಹುಜನ ಸಿರಿವಂತ ಸ್ತ್ರೀ-

ಪುರುಷರು ಬಂದಿದ್ದರು. ಇಷ್ಟೇ ಅಲ್ಲ, ಅಂದಿನ ಆ ನಾಟಕಾವಲೋಕನಕ್ಕೆ ಸಮ್ರಾಟ್-ಸಮ್ರಾಜ್ಞಿಯರೂ ಆಗಮಿಸಿ, ಆ ನಾಟಕದ ಮುಖ್ಯ ನಾಯಕ-ನಾಯಕಿ ಪಾರ್ಟದಾರರನ್ನು ಧನ್ಯರೂ ಕೃತಾರ್ಥರೂ ಆಗ ಮಾಡಿದ್ದರು. ಆದ್ದರಿಂದಲೇ ಅದೊಂದು ಆ ಇಂಪೀರಿಯಲ್ ಥೇಟರಿನ ಸಂಸ್ಮರಣೀಯ ದಿನವೆಂದೇ ಹೇಳಬಹುದು.

'ಕೆಂಪುಸೈನ್ಯ' ಎಂಬ ಹೆಸರಿನ ಸಮ್ರಾಟನ ಒಂದು ರಕ್ಷಕ ಸೈನ್ಯವು ರಾಜದಂಪತಿಗಳನ್ನು ನಾಟಕಾಲಯಕ್ಕೆ ತಲುಪಿಸಿ, ಆ ಥೇಟರಿನ ಸಮೀಪದ ಚಾರ್ಲಸ್ ಸ್ಟ್ರೀಟಿನಲ್ಲಿ ಕಾದಿದ್ದಿತು. ಸಮ್ರಾಟ್-ಸಮ್ರಾಜ್ಞಿಯರನ್ನು ಬ್ಯಾಕಿಂಗ್‌ಹ್ಯಾಮ ಅರಮನೆಗೆ ಮರಳಿ ಕರೆದೊಯ್ಯುವ ಹೊರತು ಆ ದಂಡಿಗೆ ಬಿಡುವಿರಲಿಲ್ಲ. ಆ ದಂಡಾಳುಗಳು ಅಲ್ಲಿಯ ಸುಪ್ರಶಸ್ತವಾದ ದಾರಿಯಲ್ಲಿ ಎರಡೂ ಮಗ್ಗಲು ಸಾಲುಗಟ್ಟಿಕೊಂಡು ನಿಂತಿದ್ದರು. ಅವರೆಲ್ಲರ ಆ ಅಚ್ಚ ಕರೀ ಬಣ್ಣದ ಕುದುರೆಗಳೂ, ವಿಚಿತ್ರವಾದ ವೇಷ-ಭೂಷಣಗಳೂ, ಶಸ್ತ್ರಾಸ್ತ್ರಗಳೂ, ಶಿರಸ್ತ್ರಾಣಗಳ ಮೇಲಿನ ಪಕ್ಷಿಗಳ ತರತರದ ಚಿಹ್ನಗಳೂ ಇವುಗಳನ್ನೆಲ್ಲ ನೋಡುವ ಸಲುವಾಗಿ ಅಸಂಖ್ಯ ನರ-ನಾರಿಯರು ನಾಲ್ಕೂ ದಿಕ್ಕುಗಳಲ್ಲಿ ಕಿಕ್ಕಿರಿದು ನಿಂತುಕೊಂಡಿದ್ದರು; ಯಾಕಂದರೆ ಈ ಬಗೆಯ ಮನೋಹರ ದೃಶ್ಯವನ್ನು ನೋಡುವ ಸುಯೋಗವು ಲಂಡನ್ನ ನಿವಾಸಿಗಳಿಗೂ ಕೂಡ ಆಗಾಗ್ಗೆ ದೊರೆಯುತ್ತಿರಲಿಲ್ಲ. ಆ ರಕ್ಷಕ ದಂಡಿನ ಮುಖ್ಯಸ್ಥರು ಅತ್ಯಂತ ಗಂಭೀರಭಾವದಿಂದ ಆ ದಾರಿಯಲ್ಲಿ ಆಗಾಗ್ಗೆ ತಿರುಗಾಡುತಲಿದ್ದರು.

ಹಲವು ಜನರು ದೂರದಲ್ಲಿ ನಿಂತುಕೊಂಡೇ ಮಾತನಾಡುತ್ತಿದ್ದರು; ಆದರೆ ಕೆಲವರು ಅತ್ತ ದಾರಿಯ ಮಧ್ಯದಲ್ಲಿ ಎಷ್ಟೋ ಒಣಕಟ್ಟಿಗೆಗಳ ಮೂಲಕ ಬೆಂಕಿ ಹೊತ್ತಿಸಿದ್ದರು; ಹಾಗು ಎಷ್ಟೋಮಂದಿ ಆ ಬೆಂಕಿಯನ್ನು ಸುತ್ತುವರೆದು ನಿಂತು ಕಾಸಿಕೊಳ್ಳುತ್ತಿದ್ದರು. ಆ ಅಗ್ನಿಕುಂಡದ ಬೆಳಕಿನಲ್ಲಿ ದಾರಿಯ ಅಕ್ಕಪಕ್ಕದ ಮನೆಗಳೆಲ್ಲ ಪ್ರಕಾಶಿಸತೊಡಗಿದ್ದವು; ಹಾಗು ಆ ಪ್ರಕಾಶವು ಆ ರಕ್ಷಕ ದಳದವರ ಹೊಳಪಿನ ಉಡುಗೆತೊಡಿಗೆಗಳ ಮೇಲೂ ಹೊಳಪುಳ್ಳ ಶಿರಸ್ತ್ರಾಣಗಳ ಮೇಲೂ ಬಿದ್ದು, ಅದು ಪರಾವರ್ತನ ಹೊಂದಿ ಝಗಝಗಿಸ ಹತ್ತಿತ್ತು.

ಚಾರ್ಲಸ್ ಸ್ಟ್ರೀಟಿನ ತುದಿಯಿಂದ ಕೆಲ ಗಜಗಳ ಅಂತರದಲ್ಲೇ ಹೇ ಮಾರ್ಕೇಟಿನ ಸುಪ್ರಸಿದ್ಧ ಭೋಜನಾಲಯವಾದ "ರಿಜೆಂಟ ರೆಸ್ಟಾರೆಂಟು." ಆ ದಿನ ಸಂಜೆಯ ನಂತರ ಲಂಡನ್ನಿನ ಹಲವು ಜನ ಸನ್ಮಾನಿತ ನರನಾರಿಯರು ಆ ಹೋಟಲ್ಲಿಗೆ ಊಟ-ಉಪಹಾರಕ್ಕೆಂದು ಬಂದಿದ್ದರು. ಬೇರೆ ಬೇರೆ ಮೇಜುಗಳ

ಒಳಯಲ್ಲಿ ರಾತ್ರಿಯ ತರತರದ ಉಡಿಗೆ ತೊಡಿಗೆಗಳನ್ನು ಧರಿಸಿದ್ದ ಆ ಸ್ತ್ರೀ ಪುರುಷರು ಕುಳಿತುಕೊಂಡಿದ್ದರು. ಆ ಖಾನಾವಳಿಯಲ್ಲೆಲ್ಲ ಉಜ್ವಲವಾದ ವಿದ್ಯುದ್ದೀಪಗಳು ಪ್ರಕಾಶಿಸುತ್ತಿದ್ದವು. ಅಲ್ಲಿ ಕಲೆತಿದ್ದವರೆಲ್ಲರೂ ನಗೆದಾಟ-ಕೆಲೆದಾಟ, ಮಾತು-ಕತೆ, ಗುಣುಗುಟ್ಟುವ ಗಾಯನ ಮುಂತಾದವುಗಳಲ್ಲಿ ತೊಡಗಿದ್ದರಿಂದ ಆಗ ಆ ಖಾನಾವಳಿಯು ಅತ್ಯಂತ ಶಬ್ದಾಯಮಾನವಾಗಿತ್ತು. ಆ ಖಾನಾವಳಿಯೊಳಗಿನ ಒಂದು ಮೇಜಿನ ಮುಂದೆ ನಾಲ್ಕು ಜನರು ಕುಳಿತು ಊಟಮಾಡುತ್ತಿದ್ದರು. ಅವರುಗಳೊಡನೆಯೇ ನಮ್ಮ ಪ್ರಸ್ತುತ ಕತೆಯ ಸಂಬಂಧವಿರುತ್ತದೆ. ಆ ಊಟ ಮಾಡುವ ಸಭ್ಯರಲ್ಲಿ ಯಾರ ಹೆಸರನ್ನು ಎಲ್ಲಕ್ಕೂ ಮೊದಲು ಹೇಳಬಹುದೋ ಆತನೆಂದರೆ ಲಾರ್ಡ ಮೆಸಿಂಡೇಲ. ಆತನು ಇಂಗ್ಲಂಡದೊಳಗಿನ ಸನ್ಮಾನ್ಯ ವಂಶೀಯನು. ಹಾಗೆಂಬುದು ಆತನ ಮುಖಚರ್ಯಾವಲೋಕನದಿಂದಲೇ ಒಡೆದು ಕಾಣುತ್ತಿತ್ತು. ಆತನು ಐವತ್ತಕ್ಕೆ ಮೀರಿದ ವಯಸ್ಸಿನವನಾಗಿರಲಿಲ್ಲ. ಮೈ ಬಣ್ಣ ಸಾದುಗಪ್ಪು. ಮೋರೆಯ ಮೇಲೆ ಸರ್ವಸಾಧಾರಣವಾದ ಗಡ್ಡ ಮೀಸೆಗಳು. ಅವನಿಗೆ ಹೊಂದಿ ಕುಳಿತವಳೇ ಅವನ ಹೆಂಡತಿ-ಲೇಡಿ ಮೆಸಿಂಡೇಲಳು. ಪ್ರೌಢ ವಯಸ್ಕಳಾಗಿದ್ದರೂ ಅವಳು ತಾರುಣ್ಯದ ರೂಪರಾಶಿಗಳಿಗಿನ್ನೂ ವಂಚಿತಳಾಗಿರಲಿಲ್ಲ. ಈ ವಯಸ್ಸಿನಲ್ಲೂ ಅವಳು ಆಭರಣಗಳನ್ನು ಧರಿಸಿಕೊಳ್ಳಲಿಕ್ಕೆ ಬಹು ಉಬ್ಬಳು. ಅದರಿಂದಲೇ ಅವಳ ಮೈಮೇಲೆ ಹಲವು ಅಮೂಲ್ಯ ಬೆಲೆಯ ಆಭರಣಗಳಿದ್ದವು. ಅವಳ ಕೊರಳೊಳಗೊಂದು ರತ್ನಖಚಿತವಾದ ಹಾರವಿತ್ತು. ಅದು ಆ ವಿದ್ಯುತ್ಪ್ರಕಾಶದಲ್ಲಿ ಹೆಚ್ಚಾಗಿ ಝುಗಝುಗಿಸುತ್ತಿತ್ತು. ಆ ರತ್ನಹಾರದ ಮೂಲ್ಯವು ಇಪ್ಪತ್ತು ಸಾವಿರ ಪೌಂಡಿಗಿಂತ ಹೆಚ್ಚಿದ್ದಿತೇ ಹೊರತು ಕಡಿಮೆ ಇರಲಿಲ್ಲ; ಅಂದರೆ ಅದೊಂದು ರತ್ನಹಾರದ ಬೆಲೆಯೇ ಒಂದು ಲಕ್ಷ ರೂಪಾಯಿ!

ಲೇಡಿ ಮೆಸಿಂಡೇಲಳ ಮಗಳಾದ ಡಾಫನಿ ಭಾರನನ್ನಳು ತಾಯಿಯ ಪಕ್ಕದಲ್ಲಿ ಕುಳಿತು ಉಣ್ಣುತ್ತಿದ್ದಳು. ಭಾರನನ್ ಕುಮಾರಿಯು ಹತ್ತೊಂಬತ್ತು ವಯಸ್ಸಿನವಳು. ಆ ತರುಣಿಯು ಅರಳಿದ ಶತದಲ ಕಮಲದಂತೆ ಅಲೌಕಿಕ ಸುಂದರಿಯು. ಯೌವನದ ಲಾವಣ್ಯವು ಅವಳ ರೂಪ ಮಾಧುರ್ಯವನ್ನು ನೂರಾರು ಪಟ್ಟು ಹೆಚ್ಚಿಸಿಬಿಟ್ಟಿತ್ತು. ಆ ತರುಣಿಗೆ ಹೊಂದಿ ಒಬ್ಬ ಸುರೂಪಿಯಾದ ಯುವಕನು ಕುಳಿತು ಭೋಜನ ಮಾಡುತ್ತಿದ್ದನು. ಆತನನ್ನು ನೇಭಿಲ್ ಹರಕೋರ್ಟನೆಂದು ಕರೆಯುತ್ತಿದ್ದರು. ಆತನು ಮೂವತ್ತು ವರ್ಷದವನಿರಬಹುದು. ದೀರ್ಘ ಕಾಯ, ಬಲಿಷ್ಠ ದೇಹ, ಕಪ್ಪು ಕೂದಲು. ಆತನ ಕಣ್ಣುಗುಡ್ಡೆಗಳು ಸಾಧಾರಣ ಇಂಗ್ಲಿಷ ಮನುಷ್ಯನಂತೆ ಬೆಕ್ಕಿನಂತಿರದೆ ಕಪ್ಪಾಗಿದ್ದವು.

ಮೋರೆಯ ಮೇಲೆ ಗಡ್ಡ-ಮೀಸೆಗಳಿರಲಿಲ್ಲ. ಆ ಯುವಕನ ಮುಖವನ್ನು ನೋಡಿದ ಕೂಡಲೆ ಈತನು ಸಂಭಾವಿತ ಮನೆತನದಲ್ಲಿ ಹುಟ್ಟಿದವನು ಎಂದು ಅನಿಸುತ್ತಿತ್ತು; ಆದರೆ ಆತನ ನೋಟದಲ್ಲಿ ಮಾತ್ರ ಸರಲತೆಯಿರಲಿಲ್ಲ. ಯಾರು ಯಾವನೊಬ್ಬ ಮನುಷ್ಯನ ಮುಖವನ್ನು ನೋಡುತ್ತಲೆ ಆತನ ಸ್ವಭಾವವಿಂತಹದೇ ಎಂದು ಗುರ್ತಿಸಬಲ್ಲರೋ, ಅಂತಹರು ಅವನನ್ನು ಕಂಡರೆ ಅವನು ಕ್ರೂರನೂ ಕಪಟಿಯೂ ಎಂದು ಅನ್ನಬಹುದಿತ್ತು. ಆತನು ಅತ್ಯಂತ ಧೂರ್ತನೂ ಕುಹಕನೂ ಆಗಿದ್ದನು.

ಕ್ರಮವಾಗಿ ಹನ್ನೊಂದು ಗಂಟೆ ರಾತ್ರಿಯಾಯಿತು. ಚಾರ್ಲಸ್ ಸ್ಟ್ರೀಟ್ ನೊಳಗಿನ ಅಗ್ನಿಕುಂಡವು ನಂದಹತ್ತಿತ್ತು. ರಕ್ಷಕ ಸೈನಿಕರು ತಮ್ಮ ಕುದುರೆಗಳ ಮೈಮೇಲೆ ಕೈಯಾಡಿಸುತ್ತ ಲಗಾಮುಗಳನ್ನು ಸಂಭಾಳಿಸುತ್ತಿದ್ದರು. ಆ ಸೈನ್ಯದ ಇಬ್ಬರು ಅಧಿನಾಯಕರು ಚಂಚಲ ದೃಷ್ಟಿಯಿಂದ ವಿದ್ಯುದ್ದೀಪಗಳಿಂದ ಬೆಳಗುತ್ತಿದ್ದ ಇಂಪೀರಿಯಲ್ ಥೀಅಟರಿನ ತಲೆಬಾಗಿಲ ಕಡೆಗೆ ಮತ್ತೆ ಮತ್ತೆ ನೋಡತೊಡಗಿದ್ದರು.

ಅವರೊಳಗಿನ ಒಬ್ಬನು ಧನಾಢ್ಯ ಬ್ಯಾರೋನೆಟ್ಟನು. ಪ್ರಪಂಚದಲ್ಲಿ ಅವನಿಗೇನೂ ಕೊರತೆಯಿರಲಿಲ್ಲ. ಆದ್ದರಿಂದ ತಾನಾಗಿಯೇ ಆತನು ಈ ಸನ್ಮಾನಿತ ಪದವಿಯನ್ನು ಸಂಪಾದಿಸಿದ್ದನು. ಜೇರೆಯುವನ ಹೆಸರು ಲೆಫ್ಟಿನೆಂಟ ಬ್ರಾವುನ್ ಕಿಲ್ಡೀಯಾರ. ದುಡ್ಡಿನ ಕೊರತೆಯಿಂದ ಈ ಯುವಕನ ಯಾವ ಆಶೆಯೂ ಬಹುಶಃ ಪೂರ್ಣವಾಗಿರಲಿಲ್ಲ. ಲೆ. ಕಿಲ್ಡೀಯಾರನು ಇಪ್ಪತ್ತೈದು ವರ್ಷಕ್ಕಿಂತ ದೊಡ್ಡವನಿರಲಿಲ್ಲ. ದೇವದೇವನಂತೆ ಸುಂದರವಾದ ಮುಖಮಂಡಲ, ದೈತ್ಯನಂತೆ ಬಲಿಷ್ಠ, ಜಗಜಟ್ಟಿಯಂತೆ ಸುದೃಢವಾದ ಕಾಯ. ಕೂದಲು ಹದಣಿಯಾಗಿ ಕತ್ತರಿಸಲ್ಪಟ್ಟಿವೆ. ಕಣ್ಣುಗಳು ನೀಲವರ್ಣದಂತೆ. ಮೋರೆಯ ಮೇಲೆ ಸೈನಿಕನಂತೆ ಕಲ್ಲೀಮೀಸೆಗಳು; ಆದರೆ ಗಡ್ಡಗಳು ಮಾತ್ರ ಇರಲಿಲ್ಲ. ಲೆ. ಕಿಲ್ಡೀಯಾರನು ಆ 'ಕೆಂಪು ಸೈನ್ಯ' ದಳದಲ್ಲಿ ಕೆಲಸಕ್ಕೆ ಸೇರಿ ಸ್ವಲ್ಪೇ ದಿನಗಳಾಗಿದ್ದವು. ಆ ರೆಜಿಮೆಂಟಿನ ನೌಕರಿಯು ವ್ಯಯಸಾಧ್ಯವಾದುದು. ಅವರು ಯಾವ ಬಗೆಯ ದುಂದುಗಾರಿಕೆ ಮತ್ತು ಬಾಹ್ಯಾಡಂಬರಗಳನ್ನು ಮಾಡಬೇಕಾಗುತ್ತಿತ್ತೋ, ಆ ಪದವಿಯ ಸನ್ಮಾನ ಕಾಯ್ದುಕೊಳ್ಳಲಿಕ್ಕೆಂದು ಯಾವ ಬಗೆಯ ವರ್ತನವಿಡಬೇಕಾಗುತ್ತಿತ್ತೋ ಅವನ್ನೆಲ್ಲ ಆ ಚಾಕರಿಯ ಸಂಬಳದಲ್ಲೇ ಸಾಗಿಸಿ ಸುಸಂಪನ್ನವಾಗುವದು ಶಕ್ಯವಿರಲಿಲ್ಲ. ಅದರಿಂದಲೇ ಅದು ಸಿರಿವಂತರ ಮಕ್ಕಳಿಗೊಪ್ಪಬಹುದಾದ ಚಾಕರಿಯು; ಆ ಚಾಕರಿಯಿಂದಲೇ ಹಣ ಸಂಪಾದಿಸಿ ಪ್ರಪಂಚ ಸಾಗಿಸುವವನಿಗೆ ಅದು ತರ

ವಾಡವಪ್ಪಿಲ್ಲ. ಪ್ರಸ್ತುತದ ಮಹಾಯುದ್ಧದಲ್ಲಿ ನಮ್ಮ ದೇಶದ ಹಲವುಜನ ಸಿರಿವಂತರ ಸುಶಿಕ್ಷಿತ ಮಕ್ಕಳು 'ಕಿಂಗ್ಸ ಕಮಿಶನ್' 'ವ್ಹಾಯಿಸರಾಯ ಕಮೀಶನ್' ಮೊದಲಾದವುಗಳನ್ನು ಪಡೆದು ವಂಡಿನೊಳಗಿನ ದೊಡ್ಡ ದೊಡ್ಡ ತಲಬಿನ ನೌಕರಿಗೇನೋ ಹೋಗುತ್ತಾರೆ; ಆದರೆ ಅವರಿಗೆ ಬರುವ ಸಂಬಳವು ಅವರ ಖರ್ಚಿಗೆ ಸಾಲುತ್ತಿರುವದಿಲ್ಲ, ಮನೆಯಿಂದಲೇ ತಿಂಗಳಿಗೆ ಕೆಲ ಹಣವನ್ನು ಅವರ ಖರ್ಚಿಗೆಂದು ಕಳಿಸುವ ಪ್ರಸಂಗಬಿದೆ. ಇಂಥವರಲ್ಲಿ ಅವರಿಂದ ಹಣ ತರಿಸಿ ಇತ್ತಣ ಅವರ ಸಂಸಾರ ಸಾಗಿಸುವ ಬಗೆಯುಂಟೇ? ಇವರಂತೆಯೇ ಆ ಲೆ. ಕಿಲ್ಡೇಯಾರನ ಅವಸ್ಥೆಯಿದ್ದಿತು, ಆದರೆ ಆತನ ಆರ್ಥಿಕ ಸ್ಥಿತಿಯೂ ಚೆನ್ನಾಗಿರಲಿಲ್ಲ. ಅವನ ತಂದೆಯು ಸಾಯುವ ಕಾಲಕ್ಕೆ ತನ್ನ ಮಗನಿಗೆ ವರ್ಷಕ್ಕೆ ಒಂದು ನೂರು ಪೌಂಡುಗಳ ಆದಾಯವನ್ನಷ್ಟೇ ಮಾಡಿಟ್ಟು ಹೋಗಿದ್ದನು. ಕಿಲ್ಡೇಯಾರನು ಆ ತಂದೆಯ ಸ್ವತ್ತು ಹಾಗು ತನ್ನ ಸಂಬಳ ಇವನ್ನೆಲ್ಲ ಸೇರಿಸಿ ಕೊಂಡರೂ ಅಷ್ಟರಲ್ಲಿ ಆತನ ಮಾಸಿಕ ಖರ್ಚು ನಿರ್ವಹಿಸುತ್ತಿರಲಿಲ್ಲ. ಸನ್ಮಾನಿತ ಜನರಲ್ಲಿ ಕೂಡಿ ನಡೆಯಬೇಕಾದರೆ ಎರಡೂ ಕೈಗಳಿಂದ ಹಣವನ್ನು ಖರ್ಚು ಮಾಡುತ್ತಿರಬೇಕು. ಅಷ್ಟು ಹಣ ಎತ್ತು ಅವನಲ್ಲಿರಬೇಕು? ಅದಕ್ಕೆಂದೇ ಆತನು ಯಾವಾಗಲೂ ಚಿಂತಾಕ್ರಾಂತನಾಗಿರುತ್ತಿದ್ದನು. ಅಭಾವದ ಕಾಟದಿಂದ ಆತನು ಯಾವಾಗಲೂ ಅತ್ಯಂತ ಪೀಡಿತನಾಗಿರುತ್ತಿದ್ದನು. ಅವನಿಗೊಬ್ಬಳು ಸೋದರತ್ತೆಯಿದ್ದಳು. ಅವಳಲ್ಲಿ ಹಚ್ಚಾಗಿ ದುಡ್ಡಿದ್ದಿತು. ಅವಳು ನ್ನೀ ಸೋದರಳಿಯನಿಗೆ ತಿಂಗಳು ತಿಂಗಳಿಗೆ ಕೆಲ ಹಣವನ್ನು ಕೊಡುತ್ತಿದ್ದಳು; ಆದರೆ ಕಿಲ್ಡೇಯಾರನು ಈ ಸೈನ್ಯದಾಧಿಪತ್ಯ ಚಾಕರಿಗೆ ಸೇರಿಕೊಂಡಂದಿನಿಂದ ಅವಳು ತನ್ನಾ ಸಹಾಯ ಪ್ರವಾಹ ಕೊಡುವದನ್ನು ಬಿಟ್ಟು ಮಾಡಿದ್ದಳು. ಅವಳು ಸ್ಪಷ್ಟವಾಗಿ ತಿಳಿಸಿದಳೇನಂದರೆ:—"ಅನವ್ಯಯ ಮಾಡಿ ಹಣ ಹಾಳು ಮಾಡದ ಹೊರತು ಆ ನಿನ್ನ ಚಾಕರಿಯ ಸನ್ಮಾನವು ಉಳಿಯಲಾರದೆಂಬದು ಗೊತ್ತಿದ್ದೂ ನೀನು ಅಂಥ ಚಾಕರಿಗೆ ಸೇರಿರುತ್ತೀಯಾದ್ದರಿಂದ ನಿನಗೆ ನಾನಿನ್ನು ಒಂದು ಬಿಡಿ ಕಾಸು ಕೂಡ ಸಹಾಯವೀಯಲಾರೆನು."

ಆಗ ಲೆ. ಕಿಲ್ಡೇಯಾರನು ಅಲ್ಲಿ ನಿಂತು ನಿಂತಿರಲಿಕ್ಕೇ ತನ್ನ ಅವಸ್ಥೆಯನ್ನು ಕುರಿತು ಚಿಂತಿಸುತ್ತಿದ್ದನು. ಅದೇ ಕಾಲಕ್ಕೆ ಬ್ಯಾರೋನೆಟ ಮಹಾಶಯನು 'ಕಿಲ್ಡೇಯಾರ, ಹುಷಾರ!' ಎಂದು ಕೂಗಿದನು.

ಬ್ಯಾರೋನೆಟ್ಟನು ಅವನನ್ನು ಹಾಗೆ ಎಚ್ಚರಪಡಿಸಲಿಕ್ಕೊಂದು ಕಾರಣವಿದ್ದಿತು; ಯಾಕಂದರೆ, ಕೇವಲ ಅದೇ ಕಾಲಕ್ಕೆ ಒಬ್ಬ ಸುಂದರ ವೇಷಧಾರಿಯಾದ ರಾಜದೂತನು ಓಡುತ್ತ ಬ್ಯಾರೋನೆಟ್ಟನ ಬಳಿಗೆ ಬಂದು ತಿಳಿಸಿದನೇನಂದರೆ,

ನಾಟಕದ ಕೊನೆಯ ಪರದೆ ಬೀಳಲಿಕ್ಕಿನ್ನೂ ಅವಕಾಶವಿಲ್ಲ. ಆ ವಾರ್ತೆ ತಿಳಿಯುತ್ತಲೆ ರಕ್ಷಕ ಸೈನ್ಯವು ಸಜ್ಜಾಗಿ ನಿಂತುಕೊಂಡಿತು. ಸೈನಿಕರೂ ಸೇನಾನಿಗಳೂ ಅರಮನೆಗೆ ಹಿಂದಿರುಗಲಿಕ್ಕೆ ಸಿದ್ಧರಾದರು. ಅವರು ಮೆಲ್ಲಮೆಲ್ಲನೆ ಚಾರ್ಲ್ಸ್ ಸ್ಟ್ರೀಟಿನಿಂದ ಹೊರಟು ಹೇ ಮಾರ್ಕೇಟಿನೆಡೆಗೆ ಬರತೊಡಗಿದರು.

ಅವರೆಲ್ಲರೂ 'ರೆಜಿಮೆಂಟ ರೆಸ್ಟೋರೆಂಟಿ'ನ ಎದುರಿಗೆ ಬಂದರು. ಅದೇ ಸಮಯಕ್ಕೆ ತಮ್ಮ ಊಟವನ್ನು ಮುಗಿಸಿಕೊಂಡಿದ್ದ ಲಾರ್ಡ ಮೆಸಿಂಡೇಲರು ಸ್ವಪರಿವಾರದೊಂದಿಗೆ ಆ ಖಾನಾವಳಿಯನ್ನು ಬಿಟ್ಟು ಬಂದು ದಾರಿಯನ್ನು ದಾಟಿ ಆ ಕಡೆಗಿದ್ದ ತಮ್ಮ ಮೋಟರಿನಲ್ಲಿ ಕೂಡ್ರಲಿಕ್ಕೆ ಹೋದರು. ಬ್ರಾವ್ನ್ ಕಿಲ್ಡೇಯರನ ದೃಷ್ಟಿಯು ಆ ಜನರ ಕಡೆಗೆ ಹೊರಳಿತು; ಆದರೆ ಲಾರ್ಡ ಮೆಸಿಂಡೇಲನ ಪರಿವಾರವು ಆ ದಾರಿಯ ಮಧ್ಯಸ್ಥಳಕ್ಕೆ ಬಂದ ಕೂಡಲೆ ಯಾವ ಘಟನೆಯು ಘಟಿಸಿತೋ, ಅದನ್ನು ಕಂಡು ಲೆ. ಕಿಲ್ಡೇಯರನ ವಿಸ್ಮಯಕ್ಕೆ ಮೇರೆಯೇ ಉಳಿಯಲಿಲ್ಲ. ಅದೊಂದು ಅಂಥ ಅಚಿಂತ್ಯಪೂರ್ಣ ವಿಸ್ಮಯಕರವಾದ ವ್ಯಾಪಾರವೇ ಆಗಿದ್ದಿತು.

ಅವನಿಗೆ ಆಗ ಕಂಡದ್ದೇನಂದರೆ, ನಾಲ್ಕೈದು ಮಂದಿ ಬಲಿಷ್ಠರಾದ ಜನರು ಒಮ್ಮೆಲೆ ಲಾರ್ಡ ಮೆಸಿಂಡೇಲರ ಪರಿವಾರದೆದುರಿಗೆ ಬಂದು ನಿಂತರು; ಹಾಗು ಅವರೊಳಗಿನವನೊಬ್ಬನು ಕಣ್ಣು ರೆಪ್ಪೆ ಹಾರಿಸುವಷ್ಟರಲ್ಲಿ ಲೇಡಿ ಮೆಸಿಂಡೇಲಳ ಕೊರಳೊಳಗಿನ ಆ ಅಮೂಲ್ಯ ರತ್ನಹಾರವನ್ನು ಕಿತ್ತುಕೊಂಡು ತನ್ನ ಸಂಗಡಿಗನೊಬ್ಬನ ಕೈಗಿತ್ತನು! ಆ ಮನುಷ್ಯನು ಆ ರತ್ನಹಾರವನ್ನು ತನ್ನ ಜೇಬಿಗೆ ಹಾಕಿಕೊಂಡು ಲಗುಬಗನೆ ಅಲ್ಲಿಂದ ಹಾರಿಕೊಂಡನು. ಅತನು ತುಸ ದೂರ ಹೋದೊಡನೆಯೇ ಲೇಡೀ ಮೆಸಿಂಡೇಲಳಿಗೆ ತನ್ನ ಕಂಠಾಭರಣವು ಕಳವಾಯಿತೆಂಬದು ತಿಳಿಯ ಬಂತು. ಇವೆಲ್ಲವೂ ಅತ್ಯಲ್ಪ ಅವಧಿಯಲ್ಲಿಯೇ ಸಂಘಟಿಸಿತು.

ಆದರೆ ಲೆ. ಕಿಲ್ಡೇಯರನು ಸಮೀಪದಲ್ಲೇ ನಿಂತಿದ್ದರಿಂದ ಅವನಿಗೆ ಅದೆಲ್ಲವೂ ಕಾಣಿಸಿತು. ರತ್ನಹಾರವನ್ನು ಜೇಬಿಗಿಟ್ಟುಕೊಂಡು ಕಳ್ಳನ ಸಂಗಡಿಗನು ಓಡಿಹೋಗುತ್ತಿರುವದನ್ನು ಕಂಡು, ಆತನು ಗಟ್ಟಿಯಾಗಿ ಅಂದನೇನಂದರೆ: "ಕಳ್ಳ! ಕಳ್ಳ! ಆತನನ್ನು ಹಿಡಿಯಿರಿ!!"

ಆದರೆ ಅದೇ ಕಾಲಕ್ಕೆ ಸುತ್ತಲೂ ಗಲಭೆ. ಸಮೀಪದ ರೈಲದಾರಿಯಲ್ಲಿ ಹೋಗುತ್ತಿದ್ದ ಎಕ್ಸಪ್ರೆಸ್ಸ ಟ್ರೇನಿನ ಧಸ್ಸ-ಧಸ್ಸ, ಫಸ್ಸ-ಫಸ್ಸಿನ ವಿಚಿತ್ರವಾದ ಶಬ್ದ. ಅದರಿಂದ ಕಿಲ್ಡೇಯರನ ಕೂಗು ಬಹು ಮಂದಿಯ ಕಿವಿಗೆ ಕೇಳಿಸಲಿಲ್ಲ. ಆತನ ಸಮೀಪದಲ್ಲಿದ್ದ ೨-೩ ಜನರಿಗೆ ಕೇಳಿಸಿದರೂ ಅವರು ಆ ಕಡೆಗೆ ಅಷ್ಟೊಂದು

ಗಮನಿಸಲಿಲ್ಲ; ಆದರೆ ಯಾವಾತನ ಜೇಬಿನಲ್ಲಿ ರತ್ನಹಾರವಿದ್ದಿತೋ ಆತನ ಕಿವಿಗೆ ಕಿಲ್ಡೇಯಾರನ ಕೂಗು ಕೇಳಿಸಿದೊಡನೆಯೇ, ತಾನಿನ್ನು ಸಿಕ್ಕುಬಿಡುವೆನೆಂಬ ಭಯದಿಂದ ಆತನು ವೇಗದಿಂದ ಓಡತೊಡಗಿದನು. ಆತನು ಓಡತೊಡಗಿದ್ದನ್ನು ಕಂಡು ಬ್ರ್ರಾವುನ ಕಿಲ್ಡೇಯಾರನು ಆತನನ್ನು ಹಿಡಿಯುವದಕ್ಕೆಂದ ಕುದುರೆಯನ್ನೇರಿ ಬೆಂಬಾಲಿಸಿದನು. ಓಡುವವನು ಕಾಲುನಡಿಗೆಯಿಂದ ಹೋಗುತ್ತಿದ್ದನು. ಅದರಿಂದ ಕುದುರೆಯ ಓಟದ ಮುಂದೆ ಆತನು ಎಷ್ಟು ದೂರ ಓಡುವನು? ಆತನು ಕೆಲ ದೂರ ಓಡಿದ ನಂತರ ಒಂದು ಕೂಟಿಗೆ ತಲುಪಿ, ಅಲ್ಲಿಂದ ಯಾವ ಕಡೆಗೆ ಓಡಬೇಕೆಂಬ ಬಗ್ಗೆ ಯೋಚಿಸುತ್ತಿದ್ದನು. ಅಷ್ಟರಲ್ಲೇ ಬ್ರ್ರಾವುನ ಕಿಲ್ಡೇಯಾರನ ಕುದುರೆಯು ಅವನ ಬೆನ್ನಮೇಲೆಯೇ ಬಂದು ನಿಂತಿತು. ಕುದುರೆಯು ಕಾಲ ಹೊಡೆತದಿಂದ ಆ ಕಳ್ಳನು ಒಮ್ಮೆಲೆ ನೆಲಕ್ಕೆ ಬಿದ್ದುಬಿಟ್ಟನು. ಕಿಲ್ಡೇಯಾರನು ನಿಮಿಷಾರ್ಧದಲ್ಲಿ ಕುದುರೆಯಿಂದ ಕೆಳಕ್ಕೆ ಜಿಗಿದು, ನೆಲಕ್ಕೆ ಬಿದ್ದಿದ್ದ ಕಳ್ಳನ ಎದೆಯ ಮೇಲೆ ಕುಳಿತು ಆತನ ಕುತ್ತಿಗೆಗೆ ಕೈ ಹಾಕಿದನು, ಆದರೆ ಸಭ್ಯಗೃಹಸ್ಥನಂತಿದ್ದ ಆ ಕಳ್ಳನಾದರೂ ದುರ್ಬಲನಿರಲಿಲ್ಲ. ಆತನು ಆ ಅವಸ್ಥೆಯಲ್ಲೂ ಕಿಲ್ಡೇಯಾರನ ಕೈಯಿಂದ ಪಾರಾಗಿ ಹೋಗುವ ಬಗ್ಗೆ ಕೊಸರಾಡಿಕೊಳ್ಳುತ್ತಿದನು. ಆಗ ಅವರಿಬ್ಬರಿಗೂ ಆ ರಾಜಬೀದಿಯಲ್ಲಿ ಕುಸ್ತಿಗೇ ಪ್ರಾರಂಭವಾಯಿತು. ಬ್ರ್ರಾವುನ್ ಕಿಲ್ಡೇಯಾರನು ಬಲಿಷ್ಠನಾದ ಯುವಕನು. ಅವನವೊಂದು ಗುದ್ದಿನಿಂದಲೇ ಆ ಕಳ್ಳನಿಗೆ ತಲೆ ತಿರುಗುತ್ತಿತ್ತು. ಅದೇ ಕಾಲಕ್ಕೆ ಆ ಕಳ್ಳನ ಸಹಾಯಕರಾದ ಇಬ್ಬರು ಧಾವಿಸುತ್ತ ಅಲ್ಲಿಗೆ ಬಂದರು. ಅವರ ಉದ್ದೇಶವು ಈ ಮೊದಲು ಸಿಕ್ಕಿದ್ದ ಕಳ್ಳನನ್ನು ಬಿಡಿಸಲಾಗದಿದ್ದರೂ ಆತನಲ್ಲಿಯ ಜೇನಸನ್ನು ದಾಟಿಸಬೇಕೆಂದಿತ್ತು. ಕಿಲ್ಡೇಯಾರನಿಗೆ ಅವರುಗಳ ಹೇತುವು ತಿಳಿದೊಡನೆಯೇ ಅವನು ತನ್ನ ಎಡಗೈಯಿಂದ ನೆಲಕ್ಕೆ ಬಿದ್ದಿದ್ದ ಕಳ್ಳನನ್ನು ಒತ್ತಿ ಹಿಡಿದು, ಬಲಗೈಯಿಂದ ತನ್ನ ಮೇಲೆ ಏರಿ ಬಂದಿದ್ದವರಲ್ಲಿಯ ಒಬ್ಬನ ಮೂಗಿಗೆ ತನ್ನ ಬಲವಾದ ಮುಷ್ಟಿಯಿಂದ ಇಕ್ಕರಿಸಿದನು. ಆ ವಜ್ರಮುಷ್ಟಿಯ ಹೊಡೆತದಿಂದ ಪಾಪ! ಆ ಬಡವನ ಹಲ್ಲುಗಳೇ ಬಿಚ್ಚಿ ಬಿದ್ದವು. ಬಾಯಿ-ಮೂಗುಗಳಿಂದ ನೆತ್ತರವು ಸುರಿಯಹತ್ತಿತು. ಆತನು ತನ್ನ ಎರಡೂ ಕೈಗಳಿಂದ ಮೂಗು-ಬಾಯಿಗಳನ್ನು ಹಿಡಿದುಕೊಂಡು ನೆಲಕ್ಕೆ ಕುಸಿ ಕುಳಿತನು! ಅವನ ಆ ದುರ್ದೆಸೆಯನ್ನು ಕಂಡು ಹಾಗು ಸುತ್ತಲೂ ಜನಸಂದಣಿಯು ಸೇರುತ್ತಿರುವದನ್ನು ಲಕ್ಷಿಸಿ ಇನ್ನೊಬ್ಬ ಸಹಾಯಕ ಕಳ್ಳನು ಆ ಹಲ್ಲುಮುರುಕನನ್ನು ಜಗ್ಗಿಕೊಂಡು ಓಡಿಹೋದನು.

ಆಗ ಕಿಲ್ಡೇಯಾರನು ಕೆಳಗೆ ಬಿದ್ದಿದ್ದವನ ಮೇಲೆ ಗರ್ಜಿಸಿ:—"ಎಲೇ

ಕಳ್ಳಾ, ರತ್ನಹಾರವೆಲ್ಲಿವೆ? ತೆಗೆ ಹೊರಗೆ.” ಹೀಗೆಂದು ಅನ್ನುತ್ತ, ಆ ಕಳ್ಳನ ಜೇಬಿನೊಳಗಿನ ರತ್ನಹಾರವನ್ನು ಹೊರತೆಗೆದನು. ಬೀದಿಯೊಳಗಿನ ಉಜ್ವಲವಾದ ಪ್ರಕಾಶದಲ್ಲಿ ಅದು ಝಗ್ ಝಗ್ ಎಂದು ಹೊಳೆಯತೊಡಗಿತು.

ಅಷ್ಟರೊಳಗೆ ಅವರ ಸುತ್ತಲೂ ಹಲವು ಮಂದಿ ಕಲೆತಿದ್ದರು; ಕೆಲ ಮಂದಿ ಪೋಲೀಸ ಕಾನ್ಸಟೇಬಲ್‌ರೂ ಬಂದಿದ್ದರು. ಮುಂದೆ ಒಂದೆರಡು ನಿಮಿಷಗಳಲ್ಲೇ ಲಾರ್ಡ ಮೆಸಿಂಡೇಲನ ಹೆಂಡತಿಯು ತನ್ನ ಮಗಳೊಡನೆ ಆ ಜನಸಮೂಹವನ್ನು ಬದಿಗೆ ಸರಿಸಿ ದಾರಿ ಮಾಡಿಕೊಳ್ಳುತ್ತ ಶಿ. ಕಿಲ್ಡ್ರೇಯಾರನ ಎದುರಿಗೆ ಹೋಗಿ ನಿಂತುಕೊಂಡಳು. ಆಗ ಲೇಡಿ ಮೆಸಿಂಡೇಲಳು ಉತ್ತೇಜಿತ ದನಿಯಿಂದ:—“ಅದು ನನ್ನ ರತ್ನಹಾರ! ನನ್ನ ಕೊರಳೊಳಗಿನ ಆ ಹಾರವನ್ನು ಕದ್ದವರಾರು? ಕಳ್ಳನು ಸಿಕ್ಕಿರುವನೇನು?” ಎಂದು ಕೇಳಿದಳು.

ಬ್ರಾವುನ್ ಕಿಲ್ಡ್ರೇಯಾರನು ಆ ಕೂಡಲೆ ಲೇಡಿ ಮೆಸಿಂಡೇಲಳನ್ನು ಸನ್ಮಾನಪೂರ್ವಕ ಅಭಿವಂದಿಸಿ, ಅವಳ ಕೈಗೆ ಅವಳ ಆ ರತ್ನಾಭರಣವನ್ನು ಕೊಟ್ಟನು; ಹಾಗು ಸಮೀಪದಲ್ಲಿಯೇ ಇದ್ದ ಕಳ್ಳನನ್ನು ಅವಳಿಗೆ ತೋರಿಸಿದನು.

ಲೇಡಿ ಮೆಸಿಂಡೇಲಳು ಕಿಲ್ಡ್ರೇಯಾರನನ್ನು ಮುಕ್ತಕಂಠದಿಂದ ಹೊಗಳಿದಳು. ಲಾರ್ಡ ಮೆಸಿಂಡೇಲನಾದರೂ ಆ ಸಾಹಸೀ ಸ್ವಸಿಕ ಯುವಕನನ್ನು ಪ್ರಶಂಸಿಸತೊಡಗಿದನು; ಆದರೆ ಆತನ ಜೊತೆಯಲ್ಲಿದ್ದ ನೇಭಿಲ್ ಹರಕೋರ್ಟನು ಮಾತ್ರ ದೂರದಲ್ಲೇ ನಿಂತುಕೊಂಡಿದ್ದನು. ಆತನ ಮುಖವು ಭಯಾನಕವೂ ಅಪ್ರಸನ್ನವೂ ಆಗಿದ್ದು, ಅವನ ಕಣ್ಣುಗಳಿಂದ ಕಿಡಿಗಳು ಹಾರುತ್ತಿದ್ದವು. ಆಗ ಆತನು ಯಾವ ಮಾತನ್ನೂ ಆಡಲಿಲ್ಲ.

ಲಾರ್ಡ ಮೆಸಿಂಡೇಲನು ಬ್ರಾವುನ್ ಕಿಲ್ಡ್ರೇಯಾರನ ಹೆಸರನ್ನು ಕೇಳಿದನು. ಮೊಟ್ಟಮೊದಲು ಆತನು ತನ್ನ ಹೆಸರನ್ನು ಹೇಳಲಿಲ್ಲ; ಸುಮ್ಮನೆ ನಿಂತುಬಿಟ್ಟನು; ಆದರೆ ಲಾರ್ಡ ಸಾಹೇಬರ ವಿಶೇಷ ಒಲುಮೆಗಾಗಿ ಕಡೆಗೆ ಅವನು ತನ್ನ ಹೆಸರನ್ನು ತಿಳಿಸಿದನು.

ಬ್ರಾವುನ್ ಕಿಲ್ಡ್ರೇಯಾರನ ಹೆಸರು ಕೇಳಿ ಲಾರ್ಡ ಮೆಸಿಂಡೇಲನು ಅಸ್ಫುಟವಾಗಿ:—“ಕಿಲ್ಡ್ರೇಯಾರ! ಓಹೋ, ನಾನು ನಿನ್ನನ್ನು ಗುರ್ತಿಸಿದೆನು. ನೀನು ಮಿಸೆಸ್ ಓರಾಯನ್ ಡೇನಳ ತಮ್ಮನ ಮಗನಲ್ಲವೆ? ಅಹುದು. ಖಂಡಿತವಾಗಿಯೂ ಅವನೇ ನೀನು. ಅವಳನ್ನು ನಾನು ಚೆನ್ನಾಗಿ ಬಲ್ಲೆನು. ನಿನ್ನ ತಂದೆಯಾದರೂ ನನ್ನ ಗುರ್ತಿನವನೇ. ನಾನು ನಿನಗೆ ಚಿರಋಣಿಯಾಗಿರುತ್ತೇನೆ. ನೀನು ನನಗೆ ಇನ್ನೊಮ್ಮೆ ಭೇಟಿ ಕೊಟ್ಟರೆ ನಾನು ಅತ್ಯಂತ ಸಂತೋಷಗೊಳ್ಳುವೆನು. ನಿನಗೆ ಯಾವಾಗ ಬರಬೇಕೆಂದೆನಿಸುವದೋ ಆಗ

ನೀನು ಕ್ರ್ಯಾಕ್ ಸ್ಟ್ರೀಟಿನೊಳಗಿನ ನನ್ನ ಬಂಗ್ಲೆಗೆ ಬಂದು ಭೇಟಿಯಾಗು."

ಬ್ರಾವ್ರನ್ ಕಿಲ್ಶೀಯರಾರನು ಹಾಗೆಯೇ ಆಗಲೆಂದು ತಲೆಯಲ್ಲಾಡಿಸಿ ಆ ಕಡೆ ನೋಡಲು, ಲಾರ್ಡ ಮೆಸಿಂಡೇಲನ ಕನ್ಯೆಯ ದೃಷ್ಟಿಯೂ ಇವನ ದೃಷ್ಟಿಯೂ ಒಂದಾಗೂಡಿದವು. ಆಗಿನ ಆ ಕುಮಾರೀ ಭಾರನನ್ನಳ ದೃಷ್ಟಿಯು ಅವನನ್ನು ಅನುರೋಧಗೊಳಿಸಿದಂತಾಯಿತು. ಆಕೆಯ ಆ ದೃಷ್ಟಿಯು "ತಂದೆಯವರ ಇಚ್ಛೆಯ ಮೇರೆಗೆ ನೀವು ಖಂಡಿತವಾಗಿಯೂ ನಮ್ಮಲ್ಲಿಗೆ ಬನ್ನಿರಿ. ಅಪ್ಪನ ಕರೆಯನ್ನು ಅಲ್ಲಗಳೆಯಬೇಡಿರಿ" ಎಂದು ಸೂಚಿಸುವಂತಿತ್ತು.

ಆ ಸುಂದರ ಯುವತಿಯ ಮುಖವನ್ನು ಕಂಡೊಡನೆಯೇ ಲೆ. ಕಿಲ್ಶೀಯಾರನ ಹೃದಯದಲ್ಲಿ ವಿದ್ಯುಚ್ಛಕ್ತಿ ಸಂಚರಿಸಿದಂತಾಯ್ತು. ಎಂಥ ಅಪರೂಪವಾದ ರೂಪಲಾವಣ್ಯವದು! ಅಂಥ ಸುಂದರಿಯನ್ನು ಆತನು ಇದುವರೆಗೆಂದೂ ನೋಡಿರಲಿಲ್ಲ. ಅದು ಸರಲತೆಯ ಸಜೀವ ಮೂರ್ತಿಯೇ ಆಗಿದ್ದಿತು. ಅವಳು ದೇವಲೋಕ ನಿವಾಸಿಯಾದ ಯಾವಳೊಬ್ಬ ಅಪ್ಸರ ಕನ್ಯೆಯೇ ಇರಬೇಕೆಂದೂ, ಪೂರ್ವಾರ್ಜಿತವಾದ ಬಹು ಪುಣ್ಯಫಲದಿಂದ ಇಂದು ತನಗೆ ಅವಳ ದರ್ಶನವಾಯಿತೆಂದೂ ಆತನು ಭಾವಿಸಿದನು.

ಬಳಿಕ ಆತನು ಅಸ್ಫುಟ ದನಿಯಿಂದ:—"ಮಹಾನುಭಾವರೇ, ತಮಗೆ ಧನ್ಯವಾದಗಳು. ತಮ್ಮ ಅನುಗ್ರಹಕ್ಕಾಗಿ ಅತ್ಯಂತ ಅಭಾರಿಯಾಗಿರುತ್ತೇನೆ" ಎಂದನು. ಆಗ ಅವನಿಗೆ ಮತ್ತೇನನ್ನು ಹೇಳಲಿಕ್ಕೂ ಸಮಯವಿರಲಿಲ್ಲ; ಯಾಕಂದರೆ ಅಷ್ಟರೊಳಗೆ ರಾಜದಂಪತಿಗಳು ನಾಟಕಶಾಲೆಯ ಬಹಿರ್ಭಾಗದ ಚಂದ್ರಾತಪವಾದ ಪ್ರಕಾಶದೊಳಗಿನ ಜಮಖಾನೆಯ ಮೇಲೆ ಬಂದು ನಿಂತುಕೊಂಡಿದ್ದರು. ಲೆಫ್ಟನೆಂಟನು ತನ್ನ ಉಡುಪಿನ ಮೇಲಿನ ಧೂಳವನ್ನು ಕೊಡವಿಕೊಂಡು, ವಿಶೃಂಖಲವಾದ ಉಡುಪನ್ನು ಸರಿಪಡಿಸಿಕೊಂಡು ಅಶ್ವದಳದವರನ್ನು ಕೂಡಿಕೊಳ್ಳುವದಕ್ಕೆಂದು ಹೊರಟು ಹೋದನು. ಸಮೀಪದಲ್ಲಿದ್ದ ಇಬ್ಬರು ಪೋಲೀಸ ಶಿಪಾಯಿಗಳು ಆ ಕಳ್ಳನನ್ನು ಸೆರೆಹಿಡಿದು ಪೋಲೀಸ ಚಾಕಿಗೆ ಸಾಗಿಸಿದರು. ಲಾರ್ಡ ಮೆಸಿಂಡೇಲನು ಸ್ವಪರಿವಾರದೊಡನೆ ತನ್ನ ಮೋಟರನ್ನು ಹತ್ತಿದನು. ರಾಜದಂಪತಿಗಳ ಬಾಡಿಗಾರ್ಡ ಜನರು ಪ್ರತ್ ಪ್ರತ್ಯೇಕವಾದ ಮೋಟರಗಳನ್ನಾರೋಹಣ ಮಾಡಿದರು. ಬಳಿಕ ರಕ್ಷಕ ಸೈನ್ಯದಳದ ಕುದುರೆ ಸವಾರರಲ್ಲಿ ಕೆಲವರು ರಾಜದಂಪತಿಗಳ ಮುಂದುಗಡೆಯಲ್ಲಿ, ಕೆಲವರು ಹಿಂದುಗಡೆಯಲ್ಲಿ ಒಂದೇ ಪದ್ಧತಿಯಿಂದ ಸಾಗಿದರು. ಆಗ ನಾಲ್ಕೂ ದಿಕ್ಕಿನಿಂದ "God Save the King" ಎಂಬ ಹರ್ಷೋದ್ಗಾರಗಳು ಹೊರಟು, ಆ ಮಧ್ಯರಾತ್ರಿಯಲ್ಲಿ ಆಕಾಶಕ್ಕೆ ಪ್ರತಿಧ್ವನಿಗೊಡಹತ್ತಿದವು.

ಅತ್ತ ಬ್ರಾವುನ್ ಕಿಲ್ತೀಯಾರನು ರಾಜದಂಪತಿಗಳ ಹಿಂದುಗಡೆಯ ಬ್ಯಾಚಿನಲ್ಲಿದ್ದನು. ಆಗ ಆತನ ಮನಸ್ಸು ನಾನಾ ತರದ ಚಿಂತೆಯಿಂದ ವ್ಯಾಕುಲವಾಗಿ ಬಿಟ್ಟಿತ್ತು. ಆತನ ಮನಸ್ಸು ಚಿಂತಿಸುತ್ತಿದ್ದಿತೇನಂದರೆ, 'ಎಂಥ ಸುಂದರ ರೂಪವದು? ನನಗೆ ಆಗ ಒಮ್ಮೆಲೆ ಏನಾಗಿರಬಹುದು? ಆ ಯುವತಿಯನ್ನು ನಾನು ಇನ್ನೊಮ್ಮೆ ಸಂದರ್ಶಿಸದಿದ್ದರೆ ನನ್ನ ಜೀವನವೇ ವ್ಯರ್ಥವು."

ಇತ್ತ ಲಾರ್ಡ ಮತ್ತು ಲೇಡಿ ಮೆಸಿಂಡೇಲರು ಆ ವಿದ್ಯುದ್ದೀಪಗಳಿಂದ ಪ್ರಕಾಶಿಸುತ್ತಿದ್ದ ರಾಜಬೀದಿಯಲ್ಲಿ ಮೊಟರ ಮೂಲಕ ಪ್ರಯಾಣ ಬೆಳೆಸುತ್ತಿರುವಾಗ ಆ ದುಸ್ಸಾಹಸಿಕವಾದ ಕಳವಿನ ಬಗ್ಗೆ ಆಲೋಚಿಸಹತ್ತಿದರು; ಆದರೆ ಕುಮಾರಿ ಭಾರನನ್‌ಳು ಆ ಯೋಚನೆಯಲ್ಲಿ ಭಾಗವಹಿಸಿರಲಿಲ್ಲ. ಆಗ ಅವಳ ಮನಸ್ಸು:—"ಲಂಡನ್‌ಪಟ್ಟಣದಲ್ಲಿ ರೂಪಸಂಪನ್ನರೂ ಸಿರಿವಂತರೂ ಆಗಿರುವ ಹಲವು ಮಂದಿ ತರುಣರನ್ನು ನಾನು ನೋಡಿರುತ್ತೇನೆ; ಆದರೆ ನನ್ನ ಹೃದಯವು ಇದುವರೆಗೆ ಅದಾರಲ್ಲೂ ಇಂದಿನಂತೆ ಆಕರ್ಷಿಸಲ್ಪಟ್ಟಿರಲಿಲ್ಲ ಅವನನ್ನು ನಾನು ಮತ್ತೊಂದು ಕಂಡೇನು? ಎಂಥ ಸಾಹಸ, ಎಷ್ಟು ಸೌಮ್ಯವಾದ ಮೂರ್ತಿ, ಅದೆಷ್ಟು ವಿನಯ,-ನಮ್ರಭಾವಗಳು? ಇತರ ಎಲ್ಲ ಯುವಕರು ಆತನ ಪಾಸಂಗಕ್ಕೆ ಕೂಡ ಹತ್ತಲಾರರು. ಪೂರ್ಣ ಚಂದ್ರಮನೆದುರಿಗೆ ಮಂದ ಪ್ರಕಾಶದ ಹೊನ್ನೇಹುಳಗಳೇ ಅವು!" ಎಂಬ ಯೋಚನೆಯಲ್ಲಿ ನಿರತವಾಗಿತ್ತು.

ನೇಭಿಲ್ ಹರಕೋರ್ಟನು ಆ ಮೊಟರಿನ ಒಂದು ಪಾರ್ಶ್ವದಲ್ಲಿ ಗಂಭೀರ ಭಾವದಿಂದ ಕುಳಿತುಕೊಂಡಿದ್ದನು. ಆತನ ಮನಸ್ಸಾದರೂ ಚಿಂತಾವಿಹೀನವಾಗಿರಲಿಲ್ಲ. ಆತನ ಕಪ್ಪುಕಣ್ಣುಗಳೆರಡರಿಂದಲೂ ಪ್ರಖರವಾದ ಬೆಂಕಿಯ ಕಿಡಗಳು ಹಾರಹತ್ತಿದ್ದವು. ಅವನು ತನ್ನ ಮನಸ್ಸಿನೊಳಗೇ:—"ಆ ಹತಭಾಗ್ಯ ಕಿಲ್ತೀಯಾರನ ತಲೆಯು ವಜ್ರಾಘಾತದಿಂದೇಕೆ ಇಬ್ಬಾಗವಾಗಿರಲಿಕ್ಕಿಲ್ಲ! ಇಂದಿನ ರಾತ್ರಿಯಲ್ಲಿ ಆತನು ನನ್ನ ಸಂಕಲ್ಪಗಳನ್ನು ವ್ಯರ್ಥಗೊಳಿಸಿರುತ್ತಾನೆ. ಒಂದು ವೇಳೆ ಆತನು ನನ್ನ ಬಗಲೊಳಗಿನ ಈ ಡಾಫನಿಯನ್ನು ಕೂಡ ಕಿತ್ತುಕೊಳ್ಳಲಿಕ್ಕೆ ಪ್ರಯತ್ನಿಸಬಹುದು. ನನ್ನ ಪ್ರಣಯಕ್ಕೆ ಎದುರಾಳಿಯಾಗಿ ನಿಲ್ಲಲೂ ಬಹುದು! ಆ ದಿನವು ಬೇಗನೆ ಉದಯಿಸಬಲ್ಲದು. ಅವನು ಒಂದು ವೇಳೆ ಆ ಪ್ರಯತ್ನಕ್ಕೇನಾದರೂ ತೊಡಗಿದರೆ, ನಾನು ಆತನನ್ನು ಕ್ಷುದ್ರ ಕೀಟಕದ ಹಾಗೆ ಕಾಲಿನಿಂದ ತುಳಿದುಬಿಟ್ಟೇನು. ತಾನು ಕ್ಷುದ್ರನಾಗಿದ್ದರೂ ಆಕಾಶದೊಳಗಿನ ಚಂದ್ರನನ್ನು ಹಿಡಿಯುವ ಸಾಹಸಕ್ಕೆ ಹೋಗುವ ದುರ್ಬುದ್ಧಿಯು ಅವನಿಗುಂಟಾಗದಿರಲೆಂದರಾಯಿತು.

———

## ಅವರು ನನ್ನ ಸೋದರತ್ತೆಯಂತೆ ಜಿಪುಣರಲ್ಲ.

ಈ ಮೊದಲಿನ ಘಟನೆ ಘಟಿಸಿದ ಇಪ್ಪತ್ತೈದು ದಿನಗಳ ನಂತರ ಒಂದು ದಿವಸ ಸುಪ್ರಭಾತದಲ್ಲಿ ಬ್ರಾವುನ್ ಕಿಲ್ಡೇಯಾರನು ಸರೇ ಜಿಲ್ಲೆಯೊಳಗಿನ ಪರ್ವತ ಪ್ರದೇಶದೊಳಗೆ ಒಂದು ಕಡೆಯ ಒಂದು ರೇಲ್ವೆಸ್ಟೇಶನ್ನಿನಲ್ಲಿಳಿದನು. ಆ ದಿನ ಆತನ ಮನಸ್ಸು ಅತ್ಯಂತ ಪ್ರಫುಲ್ಲವಾಗಿತ್ತು. ಮುಂಚಿನ ಆ ವಿಷಣ್ಣತೆಯು ಇಂದಿಗಿರಲಿಲ್ಲ. ಹೊಸ ಆಶೆ ಮತ್ತು ಹೊಸ ಉತ್ಸಾಹ ಇವುಗಳು ಆತನ ಸರ್ವಾಂಗಗಳಲ್ಲಿ ಒಡೆದು ಕಾಣುತ್ತಿದ್ದವು. ಆತನು ಆ ಸ್ಟೇಶನ್ನಿನಿಂದ ಹೊರಬಿದ್ದವನೇ ಒಂದು ಮಾರ್ಗವನ್ನು ಹಿಡಿದು ಅರ್ಧ ಮೈಲು ದೂರ ನಡೆದು ಒಂದು ಹಳೇ ಕಾಲದ ಮೇಲಂತಸ್ತಿನ ಮನೆಗೆ ಹೋಗಿ ತಲುಪಿದನು. ಅಲ್ಲಿಯವರು ಆ ಮನೆಗೆ "ಟಾವರ" ಎಂದೆನ್ನುತ್ತಿದ್ದರು. ಅದೇ ಬ್ರಾವುನ್ ಕಿಲ್ಡೇಯಾರನ ಸೋದರತ್ತೆಯ ಮನೆಯು. ಬಹು ದಿನಗಳ ನಂತರ ಆತನ ಸೋದರತ್ತೆಯು ಇಂದು ಆತನನ್ನು ತನ್ನ ಹಳ್ಳಿಗೆ ಬರಮಾಡಿಕೊಂಡಿದ್ದಳು. ಅವಳು ಯಾವ ಉದ್ದೇಶದಿಂದ ಕರೆಯಿಸಿರುವಳೆಂಬ ಬಗ್ಗೆ ಬ್ರಾವುನನು ತನ್ನ ಮನದಲ್ಲಿ ಒಂದು ಆಶಾಜನಕವಾದ ಅನುಮಾನ ಮಾಡಿಕೊಂಡು ಬಂದದ್ದರಿಂದಲೇ ಇಂದು ಆತನು ಇಷ್ಟು ಉತ್ಸಾಹಿಯೂ ಪ್ರಫುಲ್ಲನೂ ಆಗಿದ್ದನು.

ದಾರಿ ನಡೆಯುತ್ತಿರುವಾಗ ಕಿಲ್ಡೇಯಾರನು ತನ್ನ ಮನಸ್ಸಿನಲ್ಲೇ ಅಂದುಕೊಳ್ಳುತ್ತಿದ್ದನೇನಂದರೆ:- "ನನ್ನ ಸೋದರತ್ತೆಗೆ ಈ ದಿವಸ ತನ್ನ ಬುದ್ಧಿಭ್ರಂಶವು ತಿಳಿದಿರಬೇಕು. ಆದದರಿಂದ ಇಂದು ಅವಳು ನನಗೆ ಕೆಲ ಮಾಸಿಕ ವೃತ್ತಿಯನ್ನು ಕೊಡುವ ವಚನವೀಯಬಹುದು; ಅದಕ್ಕೆಂದೇ ಅವಳು ನನ್ನನ್ನು ಕರೆದಿರಬೇಕು. ಈ ಸಾರೆಯ ಆವಳ ವೃತ್ತಿಯ ಪ್ರಮಾಣವು ಈ ಮೊದಲಿಗಿಂತ ಕೆಲಮಟ್ಟಿಗಾದರೂ ಹೆಚ್ಚಿದ್ದಿರಬೇಕು." ಇತ್ಯಾದಿ

"ಟಾವರ" ಎಂಬ ಹೆಸರಿನ ಆ ಮೇಲುಪ್ಪರಿಗೆಯನ್ನು ದೃಷ್ಟಿಸುತ್ತಲೇ, ಈ ಮನೆಯೊಡತಿಯ ಆರ್ಥಿಕ ಸ್ಥಿತಿಯು ಸರಿಯಾಗಿಲ್ಲ. ಆದರಿಂದಲೇ ಇವಳು ಇದನ್ನು ರಿಪೇರ ಮಾಡಿಸಿರಲಿಕ್ಕಿಲ್ಲ ಎಂದೆನಿಸುತ್ತಿತ್ತು. ಆ ಮನೆಯ ಮುಂಭಾಗದ ಗೇಟಿನ ಬಾಗಿಲ ಸಲಾಕಿಗಳು ಕತ್ತು ಹಿಡಿದಿದ್ದವು. ಗೋಡೆಯು ಹಲ ಕೆಲವೆಡೆಗಳಲ್ಲಿ ಬಿದ್ದಿತ್ತು. ತಲೆಬಾಗಿಲ ಬಳಿಯಲ್ಲಿ ಮುಳ್ಳ ಕಂಟೆಗಳು ಬೆಳೆದಿದ್ದವು. ಮೇಲಂತಸ್ತಿನ ಎದರುಗಡೆಯ ಪ್ರಶಸ್ತಾದ ಉದ್ಯಾನವು ಯೋಗ್ಯವಾದ ಜೋಪಾಸನೆಯಿಲ್ಲದ್ದರಿಂದ ಶ್ರೀ ಹೀನವಾಗಿ ತೋರುತ್ತಿತ್ತು. ಆ ಟಾವರ ಮನೆಯ ಸುತ್ತುಮುತ್ತಲೂ ಕಾನನವೇ ಬೆಳೆದು ಹೋಗಿತ್ತು.

ಬ್ರಾವುನ್ ಕಿಲ್ಡೇಯಾರನು ಆ ಮನೆಯನ್ನು ಪ್ರವೇಶಿಸಿದ ಕೂಡಲೆ

ಮಾಸಿದ ಬಟ್ಟೆ ಬರೆಗಳನ್ನು ಧರಿಸಿದ್ದ ಒಬ್ಬ ಪರಿಚಾರಿಕೆಯು ಆತನನ್ನು ಅವನ ಸೋದರತ್ತೆಯು ಕೂಡ್ರುವ ಕೋಣೆಗೆ ಕರೆದೊಯ್ದಳು. ಅಟ್ಟದ ಮೇಲಿನ ಒಂದು ಪ್ರಶಸ್ತಾದ ಮಹಾಲಿನಲ್ಲಿ ಅವನ ಸೋದರತ್ತೆಯು ಕಿಟಕಿಯ ಬಳಿಯ ಒಂದು ದೊಡ್ಡ ಕುರ್ಚಿಯಲ್ಲಿ ಕುಳಿತಿದ್ದಳು.

ವ್ಹಿಕ್ಟೋರಿಯಾ ಮಹಾರಾಣಿಯ ರಾಜತ್ವ ಪ್ರಾರಂಭದಕಾಲಕ್ಕೆ ಇಂಗ್ಲಂಡದ ಸನ್ಮಾನ್ಯ ಸಮಾಜದ ರುಚಿ ಮತ್ತು ಫ್ಯಾಶನ್ನುಗಳು ಯಾವ ಬಗೆಯಾಗಿದ್ದವೋ, ಅವೇ ಬಗೆಯ ರುಚಿ ಮತ್ತು ಫ್ಯಾಶನ್ನು ಆ ವಿಧವೆಯ ಕೂಡ್ರುವ ಕೋಣೆಯಲ್ಲಿ ಸಜ್ಜಾಗಿದ್ದವು ಮಿಸೆಸ್ ಓರಾಯಂಡೇನಳು ಆ ಯುಗದ ಹೆಂಗಸಾಗಿದ್ದಳು. ಅವಳ ಉಡಿಗೆಯು ಅತಿ ದೀರ್ಘವೂ ಹೆಚ್ಚು ನಿರಿಗೆಗಳುಳ್ಳದ್ದೂ ಆಗಿತ್ತು. ಒಂದು ಬಹು ಮೂಲ್ಯವಾದ ಜರತಾರೀ ಕಾಶ್ಮೀರೀ ಶಾಲಿನಿಂದ ಅವಳ ಸರ್ವಾಂಗವು ಮುಚ್ಚಿರುತ್ತಿತ್ತು. ಅವಳು ದೇಹಾರೋಗ್ಯದ ಬಗ್ಗೆ ಪ್ರಯತ್ನಪೂರ್ವಕವಾಗಿ ಎಚ್ಚರಪಡುತ್ತಿದ್ದಳು. ಅವಳು ತನ್ನ ದೇಹಸುಸ್ಥಿತಿಯ ಬಗ್ಗೆ ಅಷ್ಟು ಜಾಗ್ರತೆ ವಹಿಸುತ್ತಿದ್ದುದರಿಂದಲೇ ಅವಳಿಗೆ ಅಷ್ಟು ಹೆಚ್ಚು ವಯಸ್ಸಾಗಿರಬಹುದೆಂದು ಯಾರೂ ಊಹಿಸುತ್ತಿರಲಿಲ್ಲ. ಅವಳು ಯಾವ ವಿಷಯದಲ್ಲೂ ಸಂಯಮನದ ಮೇರೆಯನ್ನೆಂದೂ ಮೀರಿ ನಡೆಯುತ್ತಿರಲಿಲ್ಲ. ಆಕೆಯು ಅತ್ಯಂತ ಮಿತವ್ಯಯದವಳು; ಆದರೆ ಮಾತು-ಕಥೆಗಳಲ್ಲಿ ಹಾಗು ವ್ಯವಹಾರ-ಉದ್ದಿಮೆಗಳಲ್ಲಿ ನೋಡಿದರೆ ಅವಳೊಬ್ಬ ಕೇವಲ ಮಾತಿನ ಮಲ್ಲಿಯಂತಿದ್ದಳು. ಅವಳು ಬಹು ಸ್ಪಷ್ಟ ವಕ್ತಾರಳಿದ್ದಳು. ಜನರ ಮೋರೆಯ ಎದುರಿಗೇ ಅಪ್ರಿಯವಾದ ಶಬ್ದವನ್ನು ನುಡಿಯಲಿಕ್ಕೆ ಅವಳಿಗೆ ಕೊಂಚವೂ ಸಂಕೋಚವೆನಿಸುತ್ತಿರಲಿಲ್ಲ. ಇದಕ್ಕಾಗಿಯೇ ಹಲವರು ಆಕೆಯನ್ನು ನಿಂದಿಸುತ್ತಿದ್ದರು; ಆದರೆ ಆಕೆಗೆ ಕೇಳುವಹಾಗೆ ಯಾರೂ ಏನೂ ಮಾತಾಡಲಿಕ್ಕೆ ಸಾಹಸಪಡುತ್ತಿರಲಿಲ್ಲ. ಅವಳು "ಬಹು ಧನಾಢ್ಯ"ಳೆಂಬುದನ್ನು ಎಲ್ಲರೂ ಅರಿತಿದ್ದರು. ಅವಳ ವಾರ್ಷಿಕ ಆದಾಯವು ಹದಿನೈದು ಸಾವಿರ ಪೌಂಡಿಗಿಂತ ಕಡಿಮೆ ಇರಲಿಲ್ಲ; ನಮ್ಮ ದೇಶದ ಲೆಕ್ಕದಿಂದ ಅದು ಎರಡು ಲಕ್ಷ ರೂಪಾಯಿ! ಈ ದೇಶದೊಳಗಿನ ಹಲವು ಜನ ಸಣ್ಣ-ಪುಟ್ಟ ರಾಜಮಹಾರಾಜರ ಆದಾಯಕ್ಕಿಂತಲೂ ಅದು ಹೆಚ್ಚಿದ್ದಿತು; ಆದರೆ ಅವಳು ತನ್ನ ಜೀವನ ನಿರ್ವಹಣಕ್ಕಾಗಿ ಎಷ್ಟು ಹಣ ವ್ಯಯ ಮಾಡುತ್ತಿದ್ದಳೋ ಹಲವು ಮಂದಿ ಬಡ ಗೃಹಸ್ಥರ ಪ್ರಪಂಚದ ಖರ್ಚು ಕೂಡ ಅದಕ್ಕಿಂತಲೂ ಎಷ್ಟೋಪಟ್ಟು ಹೆಚ್ಚಿರಬಹುದು. ಆದುದರಿಂದಲೇ ಆ ಕೃಪಣಳ ಧನಭಾಂಡಾರವು ದಿನದಿನಕ್ಕೆ ವೃದ್ಧಿಂಗತಗೊಳ್ಳುತ್ತಿತ್ತು. ಅವಳು ತನ್ನ ಅಡಿಗೆಯವಳಿಗೆ ಎಷ್ಟು ಸಂಬಳ ಕೊಡುತ್ತಿದ್ದಳೋ ಅಷ್ಟು ಕೂಡ ಆಕೆ ತನ್ನ ಹೊಟ್ಟೆಗೆಂದು ಖರ್ಚುಮಾಡುತ್ತಿರಲಿಲ್ಲ!

ಇಂಗ್ಲಿಷ ಪದ್ಧತಿಯಂತೆ ಬ್ರ್ರಾವುನನು ತನ್ನ ಸೋದರತ್ತೆಯನ್ನು ಆಲಿಂಗಿಸಿ ಚುಂಬಿಸಲಿಕ್ಕೆ ಧೈರ್ಯಗೊಳಲಿಲ್ಲ. ಯಾಕಂದರೆ ಬಹುದಿನಗಳ ನಂತರ ಪಲ್ಲ ತನ್ನಲ್ಲಿಗೆ ಬಂದಿದ್ದ ತನ್ನ ಸೋದರಳಿಯನನ್ನು ಕಂಡು ಅವಳು ಅವನಲ್ಲಿ ಸ್ವಲ್ಪೊಂದು ಆದರ ತೋರಿಸಲಿಲ್ಲ. ಕೇವಲ ಔದಾಸೀನ್ಯವ್ಯಂಜಕ ಭಾವದಿಂದಲೇ ಉಪೇಕ್ಷಿಸಿದಳು. ಸೋದರತ್ತೆಯ ಆ ಅನಾದರದ ವರ್ತನದಿಂದ ಕಿಲ್ಡೇರಸಾರನು ಮನನೊಂದವನಾದರೂ ತನ್ನ ಅಂತರಂಗದ ಅಸಂತೋಷವನ್ನು ಪ್ರಕಟಿಸಲಿಲ್ಲ. ಮುದುಕಿಯಾದ ಅತ್ತೆಯು ಆತನೆದುರಿಗೆ ತನ್ನ ಮೂರೇ ಬೊಟ್ಟುಗಳನ್ನು ಮುಂದುವರಿಸಲು, ಕಿಲ್ಡೇರಸಾರನು ಸಂಭ್ರಮದಿಂದ ಅವುಗಳನ್ನೇ ಚುಂಬಿಸಿದನು. ಬಳಿಕ ಮುದುಕಿಯು ಅವನಿಗೆ ಸಮೀಪದಲ್ಲಿಯ ಕುರ್ಚಿಯನ್ನು ತೋರಿಸಿ ಅದರ ಮೇಲೆ ಕೂಡ್ರ ಹೇಳಿದಳು.

ಬ್ರ್ರಾವುನನು ಕುಳಿತ ಕೂಡಲೆ ಮುದುಕಿಯು ಖಣಖಣಾದ ದನಿಯಿಂದ ಎಲ್ಲಕ್ಕೂ ಮೊದಲು ತನ್ನ ಸೋದರಳಿಯನನ್ನು ಕುರಿತು ಪ್ರಶ್ನಿಸಿದ್ದೇನಂದರೆ:—“ನೀನು ಲೇಡೀ ಮೆಸಿಂಡೇಲಳ ಕೃಪಾದೃಷ್ಟಿಗೆ ಪಾತ್ರನಾಗಿರುವಿಯೇನು?”

“ನಾನು ಒಂದಾನೊಂದು ದಿವಸ ಆಕೆಗೆ ಕೊಂಚ ಉಪಕಾರ ಮಾಡಲು ಪ್ರಯತ್ನಿಸಿದ್ದೆನು. ಅದಕ್ಕಾಗಿ ಅವಳು ಖುಷಿಯಾಗಿರುವಳು. ಇದಕ್ಕೇ ನೀವು ಅವಳ ಕೃಪಾದೃಷ್ಟಿ ಎಂದು ಅನ್ನುತ್ತಿರುವಿರೋ ಏನೋ ತಿಳಿಯದು.”

“ಮೂರ್ಖ ಹುಡುಗಾ! ಯಾವನೊಬ್ಬ ಕಳ್ಳನು ನನ್ನಲ್ಲಿಯ ಅಂಥ ಬಹುಮೂಲ್ಯ ರತ್ನಾಭರಣವನ್ನು ಕದ್ದಿದ್ದರೆ ಹಾಗು ಯಾರೊಬ್ಬರು ಅದನ್ನು ಪತ್ತೆಹಚ್ಚಿ ಮರಳಿಸಿ ಕೊಟ್ಟರೆ ಆತನ ಆ ಕಾರ್ಯಕ್ಕೆ ‘ಯತ್ಕಿಂಚಿತ್ ಉಪಕಾರ’ವೆಂದು ನಾನೆಂದೂ ತಿಳಿಯುತ್ತಿರಲಿಲ್ಲ. ಅದಿರಲಿ ಬಿಡು. ಅವನ್ನೆಲ್ಲ ತಕ್ಕೊಂಡು ಸಮಯಗಳೆಯುವದರಿಂದೇನು ಪ್ರಯೋಜನ! ನೀನು ಅವಳ ಕ್ರ್ಯಾಕ್‌ಸ್ಟ್ರೀಟಿನೊಳಗಿನ ಬಂಗ್ಲೆಗೆ ಎಂದಾದರೂ ಹೋಗಿದ್ದೆಯಾ?”

ಬ್ರ್ರಾವುನ್:—“ಅಹುದು, ಹೋಗಿದ್ದೆನಿಷ್ಟೇ ಅಲ್ಲ; ಹಲವು ಸಾರೆ ಹೋ-ಗಿದ್ದೆನು.”

ಆ ವೃದ್ಧಳು ತೀಕ್ಷ್ಣ ದೃಷ್ಟಿಯಿಂದ ಆತನ ಮುಖವನ್ನು ನಿರೀಕ್ಷಿಸಿದ ನಂತರ:—“ನೀನು ಲಾರ್ಡ ಮೆಸಿಂಡೇಲಳ ಮಗಳಾದ ಡಾಫನೀ ಭಾರನನ್ನಳ ಪ್ರೇಮಕ್ಕೆ ಗುರಿಯಾಗಿರುವೆಯಾ? ನಿಜ ಸಂಗತಿಯನ್ನೇ ಹೇಳು.”

ಬ್ರ್ರಾವುನನು ತನ್ನ ಕಣ್ಣು-ಮೋರೆಗಳನ್ನು ಕೆಂಪಗೆ ಮಾಡಿಕೊಂಡು ಕುಗ್ಗಿದ ದನಿಯಿಂದ:—““ಅತ್ತೆವ್ವಾ, ನಿನ್ನೆಡೆಯಲ್ಲಿ ಅವನ್ನೇಕೆ ಬಚ್ಚಿಡಲಿ?

ನಾನು ನಿಜವಾಗಿಯೂ........" ಎಂದೆಂದು, ಕತ್ತನ್ನು ತಗ್ಗಿಸಿದನು.

ವೃದ್ಧಳು ಮತ್ತಿಷ್ಟು ಉತ್ತೇಜಿತ ದನಿಯಿಂದ:--"ಎಲೆ, ಮೂಢ ಹುಡುಗನೇ! ನಿನ್ನ ದನಿಯೇಕೆ ಕುಗ್ಗಿತು? ವಾಣಿ ಏಕೆ ಕಟ್ಟಾಯಿತು? ನನ್ನ ಪ್ರಶ್ನೆಗೆ ಉತ್ತರವೀಯಲಿಕ್ಕಿಷ್ಟು ಸಂಕೋಚವೇಕೆ? ನಾನು ತಿಳಿಯಲಿಚ್ಛಿಸುತ್ತೇನೇನಂದರೆ, ನೀನು ಡಾಫನಿ ಭಾರನನ್ನಳ ಪ್ರೇಮಪಾಶದಲ್ಲಿ ಸಿಲುಕಿರುತ್ತೀಯಾ? ಸರಳವಾದ ಉತ್ತರವನ್ನು ಕೊಡು."

ಬ್ರಾವುನನು ತೀರ ಸರಳವಾಗಿ ಹೇಳಿದನು:—"ಕುಮಾರಿ ಭಾರನನ್ನಳ ಬಗ್ಗೆ ನನ್ನಲ್ಲಿ ಅತ್ಯಂತ ಪ್ರೇಮವುಂಟಾಗಿದೆ ಎಂಬವನ್ನು ನಾನು ಒಪ್ಪದಿರೆನು."

ವೃದ್ಧಳು ದನಿಯನ್ನು ಹೆಚ್ಚಾಗಿ ತಗ್ಗಿಸಿ:—"ಬ್ರಾವುನ್, ಅವಳೂ ನಿನ್ನನ್ನು ಪ್ರೀತಿಸುವಳಷ್ಟೆ?"

ಬ್ರಾವುನನು ಮತ್ತೆ ಕುಂಠಿತ ಸ್ವರದಿಂದ:—"ಅತ್ತೆಮ್ಮಾ, ನನಗದು ಚೆನ್ನಾಗಿ ತಿಳಿಯದು; ಆದರೂ ಅವಳ ವ್ಯವಹಾರದಿಂದ ಅವಳು ನನ್ನನ್ನು ಅನಿಚ್ಛೆಯಿಂದ ನೋಡುತ್ತಿಲ್ಲವೆಂದು ಕಂಡುಬರುತ್ತದೆ."

ವೃದ್ಧಳು ಆಗ ಅತ್ಯಂತ ಖುಷಿಯಾಗಿ, ಬಹು ಉತ್ಸಾಹದಿಂದ:—"ಬ್ರಾವುನ್, ನಿನ್ನ ನುಡಿಯನ್ನು ಕೇಳಿ ನನಗೆ ಬಲು ಸಂತೋಷವಾಯಿತು. ನಾನು ಈಗ ನಿನಗೆ ಏನು ಹೇಳುವೆನೋ ಅದನ್ನು ನೀನು ಸುಬೋಧ ಮತ್ತು ಸುಶೀಲ ಹುಡುಗನಂತೆ ಕೇಳು. ಲಾರ್ಡ ಮೆಸಿಂಡೇಲನ ಮನೆತನವು ಇತ್ತೀಚೆಗೆ ಬೆಳೆದ ವಂಶವಲ್ಲ. ಬಹು ಪ್ರಾಚೀನ ಸನ್ಮಾನ್ಯ ವಂಶಜರವು. ಅವರು ಎಷ್ಟು ಧನಾಢ್ಯರಾಗಿರುವರೋ, ಸಮಾಜದಲ್ಲಿ ಅವರಿಗೆ ಅದಕ್ಕಿಂತಲೂ ಹೆಚ್ಚಾದ ಮಾನ್ಯತೆಯಿದೆ. ಲಾರ್ಡ ಮೆಸಿಂಡೇಲನ ಮಗಳು ಬಹು ಸುಶೀಲಳು. ಅತಿ ಕೋಮಲ ಸ್ವಭಾವದವಳು; ಅಲ್ಲದೆ ಸುಶಿಕ್ಷಿತಳು. ಅವಳು ಎಷ್ಟು ಸುಂದರಳಿರುವಳೆಂಬದನ್ನು ನಾನು ನಿನಗೆ ತಿಳಿಸಿ ಹೇಳಬೇಕಿಲ್ಲ. ನಿನ್ನಂತಹ ನವಯುವಕರಿಗೆ ರೂಪದ ಹುಚ್ಚೊಂದು ಹಿಡಿದಿರುತ್ತದೆ. ಅವಳು ನಿನ್ನ ಹೆಂಡತಿಯಾಗಲಿಕ್ಕೆ ಸಂಪೂರ್ಣ ಯೋಗ್ಯಳು. ನೀನು ಅವಳನ್ನೇ ಲಗ್ನವಾಗಬೇಕೆಂದು ನನ್ನಿಚ್ಛೆಯಿದೆ. ನನ್ನ ಸೋದರಳಿಯನು ಲಾರ್ಡ ಮೆಸಿಂಡೇಲನ ಅಳಿಯನಾದರೆ ನನಗದೊಂದು ಗೌರವದ ವಿಷಯವೇ ಆದೀತು. ನೀನು ಕೇಳಿತಿಳಿದಿರುವೆಯೋನಂದರೆ, ನಾನು ನನ್ನ ಎಲ್ಲ ಧನ-ಸಂಪತ್ತುಗಳನ್ನು ದೇಶಹಿತಕಾರ್ಯಕ್ಕೆ ಕೊಡುವ ಮೃತ್ಯುಪತ್ರ ಮಾಡಿರುತ್ತೇನೆಂದು; ಆದರೆ ಯಾವ ದಿವಸ ಡಾಫನಿ ಭಾರನನ್ನಳು ನಿನ್ನೊಡನೆ ಲಗ್ನವಾಗಿರುವಳೆಂದು ನನಗೆ ತಿಳಿದು ಬರುವದೋ ಅಂದೇ ನಾನು ನನ್ನೀ ಪ್ರಸ್ತುತದ ಮೃತ್ಯುಪತ್ರವನ್ನು ರದ್ದು ಪಡಿಸಿ, ನನ್ನ ಎಲ್ಲ

ಸಿರಿ-ಸಂಪತ್ತುಗಳು ನಿನಗೇ ದೊರೆಯುವ ಹಾಗೆ ಹೊಸ ಮೃತ್ಯುಪತ್ರ ಬರೆ ದಿಡುತ್ತೇನೆ."

ಸೋದರತ್ತೆಯ ಮಾತು ಕೇಳಿ ಉಲ್ಲಸಿತನಾದ ಬ್ರಾಯುನನು ಭರದಿಂದ ಕುರ್ಚಿಯಿಂದೆದ್ದು ನಿಂತುಕೊಂಡನು; ಆದರೆ ಪರಕ್ಷಣದಲ್ಲಿಯೇ ಹೆಚ್ಚಾದ ಸಂಯಮನದಿಂದ ಮತ್ತೆ ಕುಳಿತನು. ಆಗ ಆತನ ಕಣ್ಣುಗಳಲ್ಲಿ ಯಾವ ಭಾವವು ವ್ಯಕ್ತವಾಯಿತೋ, ಅದು ಆನಂದ ಅಥವಾ ಕೃತಜ್ಞತೆಯ ಭಾವವಾಗಿ ರಲಿಲ್ಲ. ಅದು ಹೆಚ್ಚಾದ ಅವಜ್ಞತೆಯ ಹಾಗು ವಿರಕ್ತಿಪೂರ್ಣವಾದ ಉಪೇಕ್ಷೆ ಯ ಭಾವವಾಗಿದ್ದಿತು!

ಮೂರ್ಖ ಹುಡುಗನೇ ಆತ! ಆ ಬ್ರಾಯುನನು ಬುದ್ಧಿವಂತನಾಗಿದ್ದರೆ ತನ್ನ ಸೋದರತ್ತೆಯ ಆ ಅನುಗ್ರಹದ ಬಗ್ಗೆ ಅವನು ಅವಳಿಗೆ ಹೆಚ್ಚಾಗಿ ಧನ್ಯ ವಾದಗಳನ್ನು ಸಲ್ಲಿಸಿ ಭಕ್ತಿಭರದಿಂದ ಅರ್ಪಿಸಿ ಆ ಅತ್ತೆಯವ್ವನನ್ನು ಹೆಚ್ಚಾಗಿ ಸಂತುಷ್ಟಗೊಳಿಸುತ್ತಿದ್ದನು; ಆದರೆ ಆ ಮೂರ್ಖನ ಬುದ್ಧಿಯೇ ವಿಪರೀತವು ಬ್ರಾಯುನನು ಮುಖವನ್ನು ಗಂಭೀರವಾಗಿ ಮಾಡಿಕೊಂಡು:—"ಅತ್ತೆವ್ವಾ, ನಿನ್ನ ಮಾತು ನನಗೆ ಸರಿದೋರುವದಿಲ್ಲ!" ಎಂದು ಹೇಳಿದನು.

ವೃದ್ಧಳು ಅತ್ಯಂತ ವಿಸ್ಮಿತಳಾಗಿ ದೃಷ್ಟಿಯನ್ನು ಮೇಲಕ್ಕೇರಿಸಿ:—"ಸರಿ ದೋರುವದಿಲ್ಲವೆ? ಅದಕ್ಕೆ ಕಾರಣವೇನು? ನಿನಗೆ ಸರಿದೋರದಂತಹ ಮಾತು ಗಳು ನನ್ನ ಬಾಯಿಂದವೇನು ಹೊರಟವು? ಅದನ್ನಾದರೂ ಹೇಳು ನೋಡೋಣ"

ಬ್ರಾಯುನನು ನಮ್ರತೆಯಿಂದಲೇ:—"ನಾನು ಬಡವನಾಗಿದ್ದರೂ ನನಗೆ ಆತ್ಮಸನ್ಮಾನವಿದೆ. ಹಾಫಸಿಯನ್ನು ನಾನು ಪ್ರೀತಿಸುತ್ತೇನೆಂಬದನ್ನು ನಾನು ಸಹಜವಾಗಿಯೇ ಒಪ್ಪುತ್ತೇನೆ: ಆದರೆ ನಾನು ಅವಳನ್ನು ಪ್ರೀತಿಸುತ್ತೇನೆಂದ ಮಾತ್ರಕ್ಕೆ ನಾನು ಅವಳನ್ನು ಲಗ್ನವಾಗುವೆನೇ? ನಾನು ಅದಾವ ಸ್ವಾರ್ಥಸಿದ್ಧಿ ಗಾಗಿ ಅವಳನ್ನು ಲಗ್ನವಾಗಬೇಕೆಂಬದು ನನಗಂತೂ ಅಸಹ್ಯವೆನಿಸುತ್ತದೆ ಈ ಬಗೆಯ ಲಾಭಜನಕವಾದ ಮಾತಿಗೆ ಸಮ್ಮತಿಸಿ, ನಾನು ಪ್ರೇಮದ ಮರ್ಯಾದೆ ಯನ್ನು ಕ್ಷೀಣತರಕ್ಕೆ ಮನಸ್ಸು ಮಾಡುವದಿಲ್ಲ. ದುಡ್ಡಿನ ಲೋಭಕ್ಕಾಗಿ ಪ್ರೇಮವನ್ನು ಲಘುಗೊಳಿಸಲಿಕ್ಕೆ ಮುಟ್ಟಿಸಲು ನಾನು ಬಯಸುವದಿಲ್ಲ. ನೀವು ನನ್ನ ಮಾತು ಕೇಳಿ ಅಸಂತುಷ್ಟರಾಗಬೇಡಿರಿ; ಆದರೆ ಸಮ್ರಾಟನ ಅತುಲವಾದ ಧನಭಾಂಡಾರವನ್ನು ಕೊಟ್ಟರೂ ಕೂಡ ನಾನು ಯಾವಳನ್ನು ಪ್ರೀತಿಸುವದಿ ಲ್ಲವೋ ಅವಳನ್ನೆಂದೂ ಮದುವೆಯಾಗಲಿಕ್ಕೆ ಸಿದ್ಧನಾಗಲಾರೆನು."

ಸೋದರತ್ತೆಯು ಬ್ರಾಯುನನ ಆ ಬಿಡಿನುಡಿಗಳನ್ನು ಕೇಳಿ ಸಿಟ್ಟಾಗ ಲಿಲ್ಲ; ಕೊಂಚವೂ ಚಂಚಲಳಾಗಲಿಲ್ಲ. ಕೋಮಲ ಸ್ವರದಲ್ಲಿ:—"ಮೂರ್ಖ

ಹುಡುಗನೆಂದು ನಿನ್ನ ಹೊರತು ಇನ್ನಾರಿಗೆನ್ನಬೇಕು? ಆದರೆ ಇವೆಲ್ಲ ತರ್ಕ ವಿತರ್ಕಗಳ ಆವಶ್ಯಕತೆಯು ಸದ್ಯಕ್ಕೆ ಬೇಕಿಲ್ಲ. ನೀನು ಪ್ರೇಮವನ್ನು ಸನ್ಮಾನಿಸು; ಆ ಬಗ್ಗೆ ನನ್ನ ಆತಂಕವಿರುವದಿಲ್ಲ. ಆದರೆ ನಾನು ಮಾತ್ರ ನುಡಿದಂತೆ ನಡೆಯಲಿಕ್ಕೆಂದೂ ತಪ್ಪುವದಿಲ್ಲ. ನನ್ನ ಬಾಯಿಂದ ಏನು ಹೊರಬಿದ್ದಿರುವದೋ ನಾನು ಅದರಂತೆಯೇ ಮಾಡತಕ್ಕವಳು. ನೀನು ನಿನ್ನ ಸರಕಾರೀ ಕೆಲಸದಲ್ಲಿ ಹೆಚ್ಚಾಗಿ ನಿರತನಾಗಿರುವೆ; ಇಲ್ಲವಿದ್ದರೆ ನಾನು ನಿನಗೆ ಬಿಡುವು ಪಡೆದು ಬರಹೇಳುತ್ತಿದ್ದೆನು. ಊಟಕ್ಕೆಂದು ನಿಂತು ನೀನು ನಿನ್ನ ಉದ್ಯೋಗಕ್ಕೆ ಚ್ಯುತಿಯನ್ನುಂಟು ಮಾಡಿಕೊಳ್ಳಬೇಕೆಂದು ನನಗನಿಸುವದಿಲ್ಲ. ಇನ್ನು ಅರ್ಧ ತಾಸಿನಲ್ಲಿಯೇ ನಿನಗೆ ಮರಳಲಿಕ್ಕೆ ರೈಲು ಇದೆ. ನೀನು ಲಗುಬಗೆಯಿಂದ ನಿಲ್ದಾಣಕ್ಕೆ ಹೋಗದಿದ್ದರೆ ಆ ಟ್ರೇನು ತಪ್ಪೀತು; ಹಾಗು ನಿನ್ನ ಸರಕಾರೀ ಕೆಲಸಕ್ಕೆ ಚ್ಯುತಿಯುಂಟಾದೀತು."

ಆ ಸೋದರತ್ತೆಯು ಎಷ್ಟು ಕರುಣಾಮಯಳೋ! ತಮ್ಮನ ಮಗನನ್ನು ಲಂಡನ್ನಿನಿಂದ ಇಷ್ಟು ದೂರ ಬರಮಾಡಿಕೊಂಡು, ಉಣಿಸ-ತಿನಿಸದೆ, ಉಪವಾಸವೇ ತಿರುಗಿ ಕಳಿಸಲಿಕ್ಕೆ ಆ ಮುದುಕೆಗೆ ಕೊಂಚವೂ ಸಂಕೋಚವೆನಿಸಲಿಲ್ಲ. ಅವಳಿಗಲ್ಲದೆ ಲೋಕದೊಳಗಿನ ಜಗಚ್ಛ್ರೇಷ್ಠಳೆಂದು ಇನ್ನಾರಿಗೆನ್ನಬೇಕು?

ಸೋದರತ್ತೆಯು ಶೀಘ್ರವೇ ಹೊರಟು ಹೋಗೆಂದರೂ ಬ್ರಾವುನನು ಅವಳ ಅಪ್ಪಣೆಯನ್ನುಲ್ಲಂಘಿಸಿ ಆ ಕುರ್ಚಿಯ ಮೇಲೆ ಹಾಗೆಯೇ ಕುಳಿತನು. ಸಿಟ್ಟಿನಿಂದ ಅವನ ಅಂಗಾಂಗಗಳಲ್ಲಿ ನಡುಗಹತ್ತಿದವು. ಯಾವುದೋ ಒಂದು ಮಾತನ್ನು 'ಆಡಲೇ-ಬೇಡವೋ?' ಎಂದು ಹಲವಾರು ಸಾರ ಯೋಚಿಸಿದರೂ ಕೊನೆಗೂ ಆತನಿಂದ ಅದನ್ನಾಡಲಾಗಲಿಲ್ಲ; ಅಲ್ಲದೆ ಅದನ್ನಾತನು ಆಡದ ಹೊರತು ಕುಳಿತ ಸ್ಥಳದಿಂದ ಎದ್ದೇಳಲಿಕ್ಕೂ ಇಚ್ಛಿಸಲಿಲ್ಲ.

ವೃದ್ಧಳು ಆತನ ಆ ಚಾಂಚಲ್ಯವನ್ನು ಅರಿತಳು. ಆತನ ಮನಸ್ಸಿನ ಭಾವವನ್ನು ಅನುಮಾನದಿಂದಲೇ ಊಹಿಸಿಕೊಂಡು ಆಕೆ ಅಂದದ್ದು:—"ಬ್ರಾವುನ್, ನೀನು ನನ್ನ ಕಾಗದವನ್ನು ಕಂಡು ಯಾವ ಆಶೆಯನ್ನು ಧರಿಸಿದ್ದೆ? ಮೊದಲಿನಂತೆ ನಾನು ನಿನಗೆ ಮತ್ತೆ ಮಾಸಿಕ ವೃತ್ತಿಕೊಡಬಹುದೆಂದು ತಿಳಿದಿದ್ದೆಯಾ?"

ಬ್ರಾವುನನು ಕೆಳಮೋರೆಯಿಂದಲೇ:—"ಅಹುದು, ಅತ್ತೆಮ್ಮಾ; ನಾನು ಆ ಬಗೆಯ ಆಶೆ ತಾಳಿಯೇ ಲಂಡನ್ನಿನಿಂದ ಇಲ್ಲಿಯವರೆಗೆ ಬಂದಿರುತ್ತೇನೆ."

ಆಗ ಆ ಮುದುಕಿಯು ಗಟ್ಟಿಯಾಗಿ:-"ನಿನಗೆ ಮಾಸಿಕ ವೃತ್ತಿ ಕೊಡುವ ಇಚ್ಛೆಯು ನನಗೆ ಎಂದಿನಿಂದಲೂ ಇಲ್ಲ. ಈಗ ಕೊಟ್ಟಿದ್ದರೆ ಕೊಡಬಹುದಿತ್ತು; ಆದರೆ ಕೊಡುವದೇ ಇಲ್ಲ."

ಬ್ರಾವುನನು ರೋಷಗೊಂಡು:—"ಆದರೆ ಅತ್ತೆವ್ವಾ, ನಾನು ಬಹು ಆಶೆಗೊಂಡೇ ಇಲ್ಲಿಯವರೆಗೆ ಬಂದಿದ್ದೆನು. ಕೆಂಪು ಸೈನ್ಯದಳದಲ್ಲಿ ನನ್ನನ್ನು ಸೇರಿಸಿಕೊಂಡಿರುವರೆಂದು ಗೆಜಟಿನಲ್ಲಿ ಪ್ರಸಿದ್ಧವಾದಂದಿನಿಂದ ನನಗೆ ಹಣದ ಕೊರತೆಯು ಎಷ್ಟೆಂತಾಗಿವೆಯೆನ್ನಲಿ? ಅದನ್ನು ನಾನು ನಿನಗೆ ತಿಳಿಹೇಳಲಿಕ್ಕೆ ಶಕ್ತನಿಲ್ಲ. ಆ ಚಾಕರಿಯು ಎಷ್ಟು ಸನ್ಮಾನಪ್ರದವೋ ಅಷ್ಟೇ ವಿಪರೀತ ಖರ್ಚಿನದಾಗಿದೆ."

"ಆ ಅಪವ್ಯಯ ಅನಾಪ್ರಯಗಳ ಸಲುವಾಗಿಯೇ ನಾನು ನಿನಗೆ ಮಾಸಿಕ ವೃತ್ತಿ ಕೊಡುವದನ್ನು ನಿಲ್ಲಿಸಿದ್ದು. ನಿನ್ನ ತಂದೆಯು ನನ್ನ ತಮ್ಮನಾದರೇನಾಯಿತು? ಅವನಂತಹ ಮೂರ್ಖನನ್ನು ನಾನು ಈ ಲೋಕದಲ್ಲೇ ಕಾಣಲಿಲ್ಲ. ಆತನು ಮಣ್ಣನ್ನು ಕೂಡ ತೂರಲಾರದಂತೆ ಎರಡೂ ಕೈಗಳಿಂದ ಹಣವನ್ನು ಹಾಳುಮಾಡಿದನು. ಅಂಥವನನ್ನು ಮೂರ್ಖನೆನ್ನದಿನ್ನೇನೆನಬೇಕು? ಆದರೆ ಆತನೀಗ ಜೀವಿಸಿಲ್ಲ. ಆತನ ರುಚಿ-ಪ್ರವೃತ್ತಿಗಳನ್ನು ನಿಂದಿಸಿ ನಿನಗೆ ದುಃಖ ಕೊಡುವದಿಲ್ಲ. ಅಷ್ಟು ಧನಸಂಪತ್ತುಗಳನ್ನೆಲ್ಲ ಹಾಳು ಮಾಡಿ ಅವನು ನಿನ್ನನ್ನು ಬೀದಿಯ ಭಿಕಾರಿಯನ್ನಾಗ ಮಾಡಿ ಹೋಗಿರುವನು. ನಾನು ನಿನ್ನನ್ನು ನಿನ್ನ ತಂದೆಯ ಮಾರ್ಗ ಹಿಡಿಯಗೊಡುವೆನೆಂದು ತಿಳಿದಿರುತ್ತೀಯೋನು? ನಿನ್ನ ಜೊತೆಯ ಎಲ್ಲ ಸೈನಿಕರೂ ನೀನಿನಂತೆ ಹಣ ಖರ್ಚು ಮಾಡುತ್ತಿರುವರೆಂಬದನ್ನು ನಾನು ಬಲ್ಲೆನು. ನಾನು ಅವರುಗಳ ಒಂದೊಂದು ದಿನದ ಖರ್ಚನ್ನು ನೋಡಿ ನಿರ್ಬುದ್ಧಳಾಗಿರುವೆನು. ನೀನು ಅವರಿಗಿಂತಲೂ ಹೆಚ್ಚು ಅನಾಪ್ರಯ ಮಾಡಿ, ಎಲ್ಲ ಅಪವ್ಯಯಿ ಪುಂಡಾಟಗಳಿಗೆ ಒಬ್ಬ ಆದರ್ಶ ಪುರುಷನಾಗುವದು ಬಹು ನಾಚಿಕೆಗೇಡಿತನವಲ್ಲವೆ? ಇಲ್ಲ, ನಿನಗೀಗ ಏನೂ ಕೊಡುವದಿಲ್ಲ. ನೀನು ಲಗ್ನವಾಗದ ಹೊರತು ನಿನಗೆ ನನ್ನಿಂದ ಒಂದು ಚಿಕ್ಕ ಕಾಸೂ ಸಿಗಲಿಕ್ಕಿಲ್ಲ. ನಾನು ನಿನಗೆ ಇದುವರೆಗೆ ಹಲವು ಸಾರ ಹಿತೋಪದೇಶ ಗೈದೆನು. ಅದರಿಂದ ಪ್ರಯೋಜನವೇನೂ ಆದಂತಿಲ್ಲ. ನಾನಿನ್ನು ನಿನಗೆ ಏನೂ ಹೇಳಲಾರೆನು. ನಾನು ಮೊದಲೇ ಜೀರ್ಣ-ಶೀರ್ಣಳಾದ ರೋಗಿಷ್ಠಳು. ನನ್ನಿಂದ ಇನ್ನು ಹೆಚ್ಚು ಮಾತನಾಡಲಾಗುವದಿಲ್ಲ. ನೀನಿನ್ನು ಹೊರಡು."

ಬ್ರಾವುನ್ ಕಿಲ್ಡೇಯಾರನು ಮತ್ತೆ ಏನನ್ನೂ ನುಡಿಯದೆ ತನ್ನ ಸೋದರತ್ತೆಯ ಬಳಿಯಿಂದ ಹೊರಟು ಬಿಟ್ಟನು. ಆತನು ರೈಲ ನಿಲ್ದಾಣಕ್ಕೆ ಬಂದು ತಲುಪುವಷ್ಟರಲ್ಲಿ ರೈಲು ಬಂದೇಬಿಟ್ಟಿತು. ರೈಲನ್ನೇರಿದ ಬಳಿಕ ಅವನ ಮನಸ್ಸು ಮತ್ತೆ ವಿಚಾರಮಗ್ನವಾಯಿತು. ಲಂಡನ್ನಿನಿಂದ ಬರುವಾಗ ಆತನು ತನ್ನ ಮನಸ್ಸಿನಲ್ಲಿ ಯಾವ ಶುಭಸ್ವಪ್ನವನ್ನು ಕಂಡಿದ್ದನೋ, ಸೋದರತ್ತೆಯ

ಬಳಿಯಿಂದ ಹಿಂದಿರುಗಿದಾಗ ಅಸೆಲ್ಲ ಬಯುಲಾಗಿ ಬಿಟ್ಟಿತ್ತು. ಅದರಿಂದ ಅವನ ಮನಸ್ಸಿಗೆ ಬಲು ನೋವಾಯಿತು. ಆತನು ಹತಾಶಭಾವದಿಂದ ಮನಸ್ಸಿನಲ್ಲೇ: ನಾನು ನನ್ನ ಸಾಮಾನ್ಯ ಆದಾಯ ಹಾಗು ಸಂಬಳಗಳಿಂದ ಈ ರೆಜಿಮೆಂಟಿನ ಖರ್ಚಿನ ಚಾಕರಿಯನ್ನು ಹೇಗೆ ನಿರ್ವಹಿಸಲಿ? ಇದು ನನಗೆ ಅಗಮ್ಯವಾಗಿದೆ. ಆದರೆ ಆ ಬಗ್ಗೆ ಇನ್ನು ದುಃಖಿಸಿ ಫಲವೇನು? ಆದರೂ ಮುಂದೆ ಈ ಬಗೆಯ ಕೊರತೆಯು ಉಳಿಯಲಿಕ್ಕಿಲ್ಲ. ಡಾಫನಿಯು ನಿಜವಾಗಿಯೂ ನನ್ನನ್ನು ಪ್ರೀತಿ ಸುವದಾದರೆ ಅವಳು ಖಂಡಿತವಾಗಿಯೂ ನನ್ನನ್ನು ಲಗ್ನವಾಗಲಿಕ್ಕೆ ಸಮ್ಮತಿ ಸುವಳು. ಹಾಗೆ ಆಕೆ ಸಮ್ಮತಿಸಿದಳೆಂದ ಬಳಿಕ ಅವಳ ತಂದೆ-ತಾಯಿಗಳು ಆ ಬಗ್ಗೆ ಅಸಮ್ಮತಿ ತೋರಿಸುವರೇ? ನಾನು ಕಂಡ ಅವರ ನಡತೆಯಿಂದ ಅವರು ನನ್ನ ಸೋದರತ್ತೆಯಂತೆ ಜಿಪುಣರಾಗಿಲ್ಲ.

---

## ವೈರಿಯ ಸರ್ವನಾಶವೇ ಚಿಂತೆಗೆ ಕಾರಣ.

ಲಂಡನ್ನಿನ ಕ್ಯಾಭೆಂಡಿಸ್ ಸ್ಕ್ವೇರಿನ ಬಳಿಯ ಭೇಯರಾರ ಸ್ಟ್ರೀಟಿನಲ್ಲಿ ನೇಭಿಲ್ ಹರಕೋರ್ಟನ ನಿವಾಸಸ್ಥಳವು. ಆತನು ತನ್ನ ಸುಸಜ್ಜಿದ ಚಿಕ್ಕ ಕೋಣೆಯಲ್ಲಿ ಕುಳಿತು ಒಂದುದಿನ ಬೆಳಿಗ್ಗೆ ಒಂದು ವೃತ್ತಪತ್ರವನ್ನು ಓದುತ್ತಿದ್ದನು. ಆತನು ಹಾಗೆ ಓದುತ್ತಿರುವಾಗ ಒಂದು ಸ್ಯಾರಾ ಓದಿ ಉನ್ಮತ್ತನಂತೆ ಜಿಗಿದೆದ್ದನು. ಬಳಿಕ ಆ ವೃತ್ತಪತ್ರವನ್ನು ಮುದುಡಿ ಮಾಡಿ ಭರದಿಂದ ಒಂದು ಮೂಲೆಗೆ ಎಸೆದನು; ಹಾಗು ಉದ್ರೇಕಭರದಿಂದ ಆತನು ಆ ಕೋಣೆಯಲ್ಲಿ ಅಡ್ಡಾಡಹತ್ತಿದ್ದನ್ನು ನೋಡಿದರೆ, ಈತನು ಅದಾವ ಕಾರಣದಿಂದಲೋ ಬಹು ರೋಷಗೊಂಡಿರುವನೆಂದು ತಿಳಿಯುತ್ತಿತ್ತು. ಅವನ ಎರಡೂ ಕಣ್ಣುಗಳು ಸ್ವಾಭಾವಿಕವಾಗಿ ಕೆಂಪಗಾದವು. ಅವುಗಳಿಂದ ಕಿಡಿಗಳು ಹಾರುತ್ತಿರುವಹಾಗೆ ಕಾಣಹತ್ತಿತು.

ನೇಭಿಲ್ ಹರಕೋರ್ಟನ ವಿವಾಹವಿನ್ನೂ ಆಗಿರಲಿಲ್ಲ. ನಮ್ಮ ದೇಶದ ಮಾನದಿಂದ ಆತನ ಲಗ್ನದ ವಯಸ್ಸು ಮೀರಿತ್ತು; ಆದರೆ ವಿಲಾಯತಿಯ ಮಾತೇ ಬೇರೆ. ನಮ್ಮ ದೇಶದಲ್ಲಿ ಯಾವ ವಯಸ್ಸಿನಲ್ಲಿ ಜನರು ವಾನಪ್ರಸ್ಥಾಶ್ರಮವನ್ನು ವಹಿಸುವರೋ, ಆಗ ಅಲ್ಲಿಯ ಹಲವು ಜನರು ನವಪರಿಣಿತರಾಗಿ, ಪತ್ನಿಯೊಡನೆ ಹನೀ ಮೂನಿಗೆಂದು ದೇಶವಿದೇಶಗಳಲ್ಲಿ ಭ್ರಮಿಸುತ್ತಿರುತ್ತಾರೆ. ಅದಾದರೂ ಒಂದು ಬಗೆಯ ವಾನಪ್ರಸ್ಥಾಶ್ರಮವೇ ಅಲ್ಲವೆ? ಆಗ ಅವರಾದರೂ ವನ-ಉಪವನಗಳಲ್ಲಿ ದಾಂಪತ್ಯ ಸಹಿತವಾಗಿ ಆಮೋದ-ಪ್ರಮೋದಗಳಲ್ಲಿ ನಿರತರಾಗುತ್ತಿರುವರು.

"ನೇಭಿಲ್ ಹರಕೋರ್ಟನು ತನ್ನ ಮನೆಯಲ್ಲಿ ಇಬ್ಬರು-ಮೂವರು ಸೇವಕರೊಡನೆ ವಾಸಿಸುತ್ತಿದ್ದನು. ಆತನು ಲಗ್ನವಾಗಿರದಿದ್ದರೂ ಆತನಿಗೆ ಸಮಯವೇ ಸಾಲುತ್ತಿರಲಿಲ್ಲ. ಅವನು ಲಂಡನ್ನಿನೊಳಗಿನ ಹಲವು ಸುಪ್ರಸಿದ್ಧ ಕ್ಲಬ್ಬುಗಳ ಸದಸ್ಯನಾಗಿದ್ದನು. ಹಣಕಾಸು ಖರ್ಚು ಮಾಡುವ ವಿಷಯದಲ್ಲಿ ಅವನು ಕೃಪಣನಾಗಿರಲಿಲ್ಲ. ಲಂಡನ್ನಿನೊಳಗಿನ ಬಹುತರ ಎಲ್ಲ ಸನ್ಮಾನ್ಯ ಗೃಹಸ್ಥರ ಮನೆಗಳಲ್ಲೂ-ಹಲವು ಜನ ದೊಡ್ಡ ದೊಡ್ಡ ಪದವೀಧರರಿಗೂ ಎಲ್ಲಿ ಸಹಸಾ ಪ್ರವೇಶವಿರುತ್ತಿರಲಿಲ್ಲವೋ ಅಂಥ ಎಲ್ಲ ಮನೆಗಳಲ್ಲೂ-ನೇಭಿಲ್ ಹರಕೋರ್ಟನಿಗೆ ಮುಕ್ತದ್ವಾರವಿದ್ದಿತು.

ಆತನ ಆ ಖರ್ಚಿಕತನವನ್ನು ಕಂಡು ಈತನ ವಾರ್ಷಿಕ ಆದಾಯವು ನಾಲ್ಕೈದು ಸಾವಿರ ಪೌಂಡಿಗಿಂತ ಹೆಚ್ಚೇ ಇದ್ದಿತಲ್ಲದೆ ಕಡಿಮೆ ಇರಲಾರದೆಂದು ಹಲವರು ತಿಳಿಸುತ್ತಿದ್ದರು; ಆದರೆ ಆತನು ಅಷ್ಟು ಅಪರಿಮಿತ ಹಣವನ್ನು ಯಾವ ಬಗೆಯಿಂದ ಸಂಪಾದಿಸುತ್ತಿದ್ದನೆಂಬುದು ಮಾತ್ರ ಆದಾವ ಪರಮ ಸ್ನೇಹಿತರಿಗೂ ಕೂಡ ತಿಳಿಯದು. ಆ ಬಗ್ಗೆ ಆತನು ಯಾರಿಗೂ ಏನೂ ಹೇಳುತ್ತಿರಲಿಲ್ಲ. ಆಸ್ಟ್ರೇಲಿಯದ ನಿವಾಸಿಯಾದ ಒಬ್ಬ ಧನಿಕನು ಈತನನ್ನು ತನ್ನ ಉತ್ತರಾಧಿಕಾರಿಯನ್ನಾಗಿ ಮಾಡಿಕೊಂಡಿರುತ್ತಾನೆಂದೂ ಅಲ್ಲಿಂದಲೇ ಇವನಿಗೆ ಕಾಲಕಾಲಕ್ಕೆ ಹಣ ಬರುತ್ತದೆಂದೂ ಲಂಡನ್ನಿನೊಳಗಿನ ಹಲವರು ತರ್ಕಿಸುತ್ತಿದ್ದರು.

ನೇಭಿಲ್ ಹರಕೋರ್ಟನು ಅತ್ಯಂತ ಉತ್ತೇಜಿತಭಾವದಿಂದ ತನ್ನಾ ಚಿಕ್ಕ ಕೋಣೆಯಲ್ಲಿ ತಿರುಗಾಡುತ್ತಿರುವಾಗ ಅಸ್ಫುಟ ದನಿಯಿಂದ:—"ಇದೊಳ್ಳೇ ಉತ್ತಮ ವಾರ್ತೆಯೇ ಸರಿ; ಉಭಯತರ ಹೆಸರುಗಳನ್ನು ಸ್ಪಷ್ಟವಾಗಿ ಬರೆದಿರದಿದ್ದರೂ ಬ್ರಾವುನ್ ಕಿಲ್ಡೇಯಾರ ಮತ್ತು ಡಾಫನೀ ಭಾರನನ್ ಇವರನ್ನು ಉದ್ದೇಶಿಸಿಯೇ ಆ ಪತ್ರಕಾರನು ಈ ಪ್ಯಾರಾ ಬರೆದಿರುತ್ತಾನೆಂದು ನಾನು ತಿಳಿಯುತ್ತೇನೆ."

"ನಾನು ಕಳೆದೊಂದು ವಾರ ಲಂಡನ್ನಿನಲ್ಲಿರಲಿಲ್ಲ. ಇಷ್ಟರೊಳಗೇ ಇಷ್ಟೆಲ್ಲ ಸಿದ್ಧತೆಯಾಯಿತಲ್ಲವೇ! ಲಂಡನ್ನನ್ನು ಬಿಟ್ಟು ತೆರಳುವ ಮೊದಲು ನನಗನಿಸಿತ್ತೇನಂದರೆ, ಆ ಕಿಲ್ಡೇಯಾರನು ಬೇಗನೆ ನನ್ನ ಬಾಯಿ ತುತ್ತನ್ನು ಕಸಿಯಲಿರುವನೆಂದು. ನಾನು ಆಗ ಏನು ಊಹಿಸಿದ್ದೆನೋ ಅದೇ ಈಗ ಖಂಡಿತವಾಗಿದೆ! ನಾನು ಹೋಗಿ ಅಲ್ಲಿ ಇನ್ನು ಏನು ವ್ಯತ್ಯಾಸವನ್ನೂ ಮಾಡಲಿಕ್ಕೆ ಶಕ್ಯವಿರುವದಿಲ್ಲ ಹಾಯ್! ಹಾಯ್! ಆ ನೀಚ ಕಿಲ್ಡೇಯಾರನ ತಲೆಯ ಮೇಲೆ ವಜ್ರಾಘಾತವೇಕಾಗಿರಲಿಕ್ಕಿಲ್ಲ?"

ಯಾವ ಪ್ಯಾರಾ ನೋಡಿ ನೇಭಿಲನಷ್ಟು ಕೋಪಗೊಂಡಿದ್ದನೋ ವೃತ್ತ

ಪತ್ರದೊಳಗಿನ ಆ ಪ್ಯಾರಾ ಅತಿ ಸಂಕ್ಷಿಪ್ತವಾಗಿದ್ದಿತು. "ಗೃಹ್ಯಸಂಸ್ಕಾರ" ಎಂಬ ಕಾಲಮಿನಲ್ಲಿ ಮೂರು ನಾಲ್ಕು ನಾಲುಗಳಲ್ಲೇ ಅದು ಮುಕ್ತಾಯಗೊಂಡಿದ್ದಿತು ಆ ಪ್ಯಾರಾದ ಮುಖ್ಯ ಸಂಗತಿಯೆಂದರೆ:—"ಲಂಡನ್ನಿನ ಯಾವನೊಬ್ಬ ಸುಪ್ರಖ್ಯಾತ ಮಹಾ ಧನಾಢ್ಯಲಾರ್ಡನ ಪರಮ ಸುಂದರಿಯಾದ ಕನ್ಯೆಯ ವಿವಾಹವು 'ಕೆಂಪು ಸೈನ್ಯ'ದೊಳಗಿನ ಯಾವನೊಬ್ಬ ಅಲ್ಪ ವಯಸ್ಕನೂ ಸರ್ವಜನಪ್ರಿಯನೂ ಆಗಿರುವ 'ಸಬ್ ಲೆಫ್ಟನೆಂಟ'ನೊಡನೆ ತೀವ್ರವೇ ಆಗುವದ ನಿಶ್ಚಿತವಾಗಿದೆ. ಆ ಯುವಕ 'ಸಬ್ ಲೆಫ್ಟನೆಂಟ'ನು ಸ್ವಂತ ಸಿರಿವಂತನಾಗಿರದಿದ್ದರೂ ಯಾವಳೊಬ್ಬ ಆತ್ಮೀಯ ಧನಾಢ್ಯಳ ಸಂಪತ್ತಿಗೆ ಆತನು ತೀವ್ರವೇ ಉತ್ತರಾಧಿಕಾರಿಯಾಗುವ ಸಂಭವವು ಹೆಚ್ಚಾಗಿರುತ್ತದೆ."

ಆ ವೃತ್ತ ಪತ್ರವನ್ನು ನೇಭಿಲ್ ಹರಕೋರ್ಟನು ಈ ಮೊದಲು ಸಿಟ್ಟಿನಿಂದ ಮುದುಡಿ ಮಾಡಿ ಮೂಲೆಗೆಸೆದಿದ್ದನಷ್ಟೆ? ಈಗ ಅವನು ಮತ್ತೆ ಅದನ್ನು ಎತ್ತಿ ತಂದು ಸರಿಪಡಿಸಿಕೊಂಡು ಆ ಪ್ಯಾರಾವನ್ನು ಪುನಃ ಓದಿ ನೋಡಿದನು. ಆ ಸಂಗತಿಯು ಅವನಿಗೆ ಅತ್ಯಂತ ಮರ್ಮಾಂತಿಕ ಕಷ್ಟದಾಯಕವಾಯಿತು. ಲಾರ್ಡ ಮೆಸಿಂಡೇಲನ ಪರಿವಾರದೊಂದಿಗೆ ಈತನ ಪರಿಚಯವು ಬಹು ದಿನದ್ದು. ಈತನು ಅವನ ಮಗಳಾದ ಭಾರನನ್ನು ನನ್ನು ಪ್ರಾಣಪಣದಿಂದ ಪ್ರೀತಿಸುತ್ತಿದ್ದನು. ಸುಸಮಯವನ್ನು ಸಾಧಿಸಿ, ಡಾಫನಿಯ ಬಳಿಯಲ್ಲಿ ಲಗ್ನದ ಮಾತೆತ್ತಬೇಕೆಂದೂ ಆತನು ಯೋಚಿಸಿದ್ದನು; ಆದರೆ ಇದುವರೆಗೆ ಆತನಿಗೆ ಡಾಫನಿಯಲ್ಲಿ ತನ್ನ ವಿಷಯದ ಯಾವ ಬಗೆಯ ಉತ್ಸಾಹವೂ ಕಂಡು ಬಾರದ್ದರಿಂದ ಅವನು ಆ ಲಗ್ನದ ಮಾತನ್ನೆತ್ತಲಿಕ್ಕೆ ಸಾಹಸಪಟ್ಟಿರಲಿಲ್ಲ. ಬಹು ದಿನಗಳಿಂದಿದ್ದ ಅವನಲ್ಲಿಯ ಆ ಆಶೆಯು ಇಂದಿಗೆ ಗಾಳಿಯ ಪಾಲಾಗಿತ್ತು. ಅವನು ಯಾವನನ್ನು ಎಲ್ಲರಿಗಿಂತಲೂ ಹೆಚ್ಚಾಗಿ ತಿರಸ್ಕರಿಸುತ್ತಿದ್ದನೋ, ಪ್ರಣಯದ ಪ್ರತಿದ್ವಂದ್ವದಲ್ಲಿ ಆತನೇ ಈಗ ವಿಜಯಿಯಾಗಿದ್ದನು. ಅದರಿಂದ ನೇಭಿಲ್ ಹರಕೋರ್ಟನಿಗೆ ಒಂದೇ ಕಾಲಕ್ಕೆ ನೂರಾರು ಚೇಳುಗಳು ಒಂದೇ ಮರ್ಮಸ್ಥದಲ್ಲಿ ಕಡಿದಂತಾಗಿತ್ತು. ಅವನು ಅಂಥ ಆ ಯಾತನೆಯನ್ನು ಅನುಭವಿಸುವ ಬಗೆಯೆಂತು?

ನೇಬಿಲನು ಆವೇಗಭರದಿಂದ ಹಲ್ಲು ಕಡಿಯುತ್ತ:—"ಎಷ್ಟು ಅವಹೇಲನೆಯಿದು! ಭಾಗ್ಯಲಕ್ಷ್ಮಿಯ ಕಠೋರವಾದ ಪರಿಹಾಸವೇ ಆಗಿರಬಹುದೇನು? ಒಬ್ಬ ಹೆಸರು-ವೆಸೆಗಳಿಲ್ಲದ, ಅತಿ ಹೀನನಾದ, ದರಿದ್ರ ಪಹರೆಯವನ ನಾಯಕನೇ ಕೊನೆಗೆ ಅವಳ ಪ್ರಣಯಕ್ಕೆ ಯೋಗ್ಯನಾದನಲ್ಲವೆ? ಸ್ತ್ರೀ ಹೃದಯವು ಇಷ್ಟು ಅಸಾರವಿರುವದೇ? ಛೀ! ಛೀ! ಆ ಪೋರನು ಎಂಥ ಕೌಶಲ್ಯ

ಎಂದ ಅವಳನ್ನು ಮಬ್ಬುಗೊಳಿಸಿದನು! ಆದರಿನ್ನೂ ಅವರುಗಳ ಲಗ್ನವಾಗಿರುವದಿಲ್ಲ. ಆದ್ದರಿಂದ ನಾನಿಷ್ಟು ಹತಾಶನಾಗುವದೇಕೆ? ನಾನು ಏನಾದರೂ ಮಾಡಿ ಅವರುಗಳ ಆ ಆಗಾಮಿ ಸಂಬಂಧವನ್ನು ಭಂಗಪಡಿಸುವೆನು; ನಾನು ಜೀವಂತನಿರುವ ವರೆಗೂ ಆ ಲಗ್ನವಾಗಗೊಡಲಾರೆನು. ನನ್ನ ಕೌಶಲ್ಯ ಯುಕ್ತವಾದ ಹಂಚಿಕೆಯು ಅದೆಂದೂ ನಿಷ್ಫಲವಾಗಲಿಕ್ಕಿಲ್ಲ. ನಾನು ಏನಾದರೂ ಮಾಡಿ ಆತನನ್ನು ಕಲಂಕಸಾಗರದಲ್ಲಿ ಮುಳುಗಿಸುತ್ತೇನೆ; ಅವನನ್ನು ಸರ್ವನಾಶಗೊಳಿಸುತ್ತೇನೆ; ಆತನು ಮಾನ್ಯ ಸಮಾಜದಲ್ಲಿ ಮುಖ ತೋರಿಸದಂತೆ ಅವನ ವ್ಯವಸ್ಥೆ ಮಾಡುತ್ತೇನೆಂದು ನಾನು ಈ ದಿನ ಶಪಥವನ್ನೇ ಮಾಡುತ್ತೇನೆ. ಈ ನನ್ನ ಸಂಕಲ್ಪವು ಹೇಗೆ ಸಿದ್ಧಿಸುವದೆಂಬದನ್ನು ನಾನೀಗಲೇ ಸ್ಥಿರಗೊಳಿಸಲಾರೆನು; ಆದರದಕ್ಕಿನ್ನೂ ಬೇಕಾದಷ್ಟು ಅವಕಾಶವಿದೆ. ಈತನ ವಿವಾಹಸಂಬಂಧವು ನಿಶ್ಚಿತವಾದ ಬಳಿಕ ಇವನ ಸೋದರತ್ತೆಯು ಹೊಸ ಮೃತ್ಯುಪತ್ರವನ್ನು ಮಾಡಿ ಇವನನ್ನೇ ತನ್ನ ಸಂಪತ್ತಿಗೆ ಉತ್ತರಾಧಿಕಾರಿಯನ್ನಾಗ ಮಾಡುವವಳಿರುತ್ತಾಳೆಂದು ಕೇಳಿರುತ್ತೇನೆ; ಆದರೆ ಲಗ್ನಕ್ಕೆ ಮೊದಲು ಆ ಸೋದರತ್ತೆಯಿಂದ ಈತನಿಗೇನೂ ದೊರೆಯುವ ಆಶೆ ಇರುವದಿಲ್ಲವೆಂಬದೂ ಪ್ರಸಿದ್ಧವಾಗಿದೆ. ಅತ್ಯಲ್ಪವಾದ ತಂದೆಯ ವೃತ್ತಿ ಹಾಗು ತನ್ನ ಸಂಬಳ ಇವುಗಳ ಮೇಲೆಯೇ ಆತನು ಇದುವರೆಗೆ ಕೈಯೂರಬೇಕೇ ವಿನಃ ಅವನಿಗೆ ಬೇರೆ ಯಾವ ಉತ್ಪತ್ತಿಯೂ ಇದುವರೆಗಿಲ್ಲ. ಆ ಸಾಮಾನ್ಯ ಆದಾಯದಲ್ಲಿ ಅವನ ವಿಲಾಸಿನಿಯು ಹಾಗು ಇಲ್ಲಿಯ ಸನ್ಮಾನ್ಯ ಸಮಾಜದಲ್ಲಿ ಬೆರೆಯಬೇಕಾದರಾಗುವ ಖರ್ಚುಗಳು ಬಾಯಿಗೂಡುವದಸಂಭವವು. ವಿಶೇಷವಾಗಿ ಹೇಳುವದೇನಂದರೆ, ಒಬ್ಬ ಲಾರ್ಡನ ಮಗಳನ್ನು ಈತನು ವಿವಾಹವಾಗಲಿಕ್ಕೆ ಯಾವಾಗ ಸಿದ್ಧನಾಗಿರುವನೋ, ಆಗ ಈತನು ಹಲವು ಬಾಬುಗಳಿಗಾಗಿ ಆಗಾಗ್ಗೆ ವಿಪರೀತ ಹಣವನ್ನು ಖರ್ಚು ಮಾಡಲೇಬೇಕಾಗುತ್ತದೆ.”

ನೇಭಿಲನು ಈ ಬಗೆಯ ದೀರ್ಘವಾದ ವಿವಂಚನೆಯಲ್ಲಿ ಆ ಇಡೀ ದಿನವನ್ನು ಕಳೆದನು. ಎಷ್ಟೋ ಪೈಶಾಚಿಕ ಯುಕ್ತಿಗಳು ಆತನ ತಲೆಯಲ್ಲಿ ಹುಟ್ಟಿದವು. ಕೊನೆಗೆ ಸಾಯಂಕಾಲದಲ್ಲಿ ಯಾವುದೋ ಒಂದು ಹಂಚಿಕೆಯು ಒಮ್ಮೆಲೆ ಆತನಿಗೆ ಸಮಂಜಸವಾಗಿ ತೋರಿತು. ಅವನು ತನ್ನ ನೋಟಬುಕ್ಕನ್ನು ತೆರೆದು ನೋಡಿದನು; ಬಳಿಕ ಅದನ್ನು ಮುಚ್ಚಿಟ್ಟು ವ್ಯಗ್ರ ಭಾವದಿಂದ:—

“ಓಹೋ, ಮರೆತೇ ಬಿಟ್ಟಿದ್ದೆನಲ್ಲ! ಇಂದು ರಾತ್ರಿಯ ನಾಚು-ರಂಗಿನ ಸಂಗತಿಯನ್ನು ನಾನು ಸಂಪೂರ್ಣ ಮರೆತೇ ಬಿಟ್ಟಿದ್ದೆ. ಶೀಘ್ರ ಅವಸರ ಪಡದಿದ್ದರೆ ತಕ್ಕ ಸಮಯಕ್ಕೆ ಅಲ್ಲಿಗೆ ಹೋಗಿ ತಲುಪುವದು ದುಸ್ತರವಾದೀತು.”

ಆದರೆ ಆತನು ಆಗ ನಾಚು ರಂಗಿಗೆ ಹೋಗುವ ಉಡುಪನ್ನು ಧರಿಸದೆ ಒಂದು ಬಗೆಯ ದಾರಿಹೋಕರ ಉಡುಪನ್ನು ಧರಿಸಿದನು. ಅದಕ್ಕೆಂದು ಅವನು ಮೇಲಂತಸ್ತಿಗೆ ಹೋಗಿ ಅಲ್ಲಿಯ ಗುಪ್ತವಾದ ಬೀರೊಂದನ್ನು ತೆಗೆದನು. ಅದ ರಲ್ಲಿ ನಾನಾ ಪ್ರಕಾರದ ಗುಪ್ತವೇಷಗಳ ಉಡುಪು ತೊಡುಪುಗಳು ಸಜ್ಜಾಗಿದ್ದವು.

ಆಗ ನೇಭಿಲನು ತನ್ನ ಮನಸ್ಸಿನಲ್ಲೇ.-"ಭದ್ರ-ವೇಷದಿಂದ ಹೋಗಲೊ? ಆದರೆ ಈಗಂತೂ ಆ ಭದ್ರ ವೇಷ ಧರಿಸುವದಕ್ಕು ಅವಕಾಶವಿಲ್ಲ. ಬೆಂಕೀ ಹಚ್ಚಲಿ ಆ ಭದ್ರವೇಷಕ್ಕೆ! ಮುಂದೆಂದಾದರೂ ಭದ್ರವೇಷ ಧರಿಸಲಿಕ್ಕೆ ಬಂ ದೀತು." ಎಂದು ಅಂದುಕೊಂಡಷ್ಟೇ ಅಂದಿನ ಆತನ ತಪ್ಪಾಯಿತು.

ಆತನು ಆ ಭದ್ರವೇಷದುಡಿಗೆ-ತೊಡಿಗೆಯ ಬೀರನ್ನು ಮುಚ್ಚಿ ಒಂದು ಹೊಲಸು ಕೋಟು ಹಾಗು ದಾರಿಹೋಕರ ಪದ್ಧತಿಯದೊಂದು ಟೊಪ್ಪಿಗೆ ಹಾಕಿ ಕೊಂಡವನೇ ಲಗುಬಗೆಯಿಂದ ಮೇಲಟ್ಟದ ಪಾವಟಿಗೆಗಳಿಂದ ಕೆಳಗಿಳಿ ದನು. ಕೆಳಗಿನ ಮನೆಯಲ್ಲಿ ಆಗ ಅವನ ನೌಕರ-ಚಾಕರರಾರೂ ಇರಲಿಲ್ಲ. ಆತನು ತನ್ನ ಕಾಲ ಸಪ್ಪಳವು ಕೊಂಚವೂ ಆಗದ ಹಾಗೆ ರಾಜಬೀದಿಗೆ ಬಂದನು; ಹಾಗು ಕ್ಯಾಭೆಂಡಿಸ್‌ಸ್ಕ್ವೇರದನ್ನು ದಾಟಿ ಆಕ್ಸಫರ್ಡ್‌ಪಾರ್ಕಿನ ಬಳಿಗೆ ಬಂದು ಒಂದು ಬಾಡಿಗೆಯ ಟ್ಯಾಕ್ಸಿಯಲ್ಲಿ ಕುಳಿತನು. ಆ ಟ್ಯಾಕ್ಸಿಯು ಆಕ್ಸಫರ್ಡ ಸ್ಟ್ರೀಟನಿಂದ ವೇಗವಾಗಿ ನಡೆಯಿತು. ಆಗ ಆತನ ಮನಸ್ಸು ಗಾಢವಾದ ಚಿಂತೆ ಯಲ್ಲಿ ಮುಳುಗಿತು. ತನ್ನ ಪ್ರಣಯದ ಶತ್ರುವನ್ನು ಯಾವ ಬಗೆಯಿಂದ ಸರ್ವನಾಶಗೊಳಿಸಬೇಕೆಂಬುವೇ ಆಗಿನ ಆತನ ಚಿಂತೆಯ ವಿಷಯವಾಗಿದ್ದಿತು.

— —

## ಈ ಸಂಗತಿಯನ್ನು ಚನ್ನಾಗಿ ನೆನಪಿಡಬೇಕು.

ಲಂಡನ್ನಿನೊಳಗಿನ ಪ್ರಖ್ಯಾತ ಪತ್ತೆದಾರನಾದ ಮಿ. ರಾಬರ್ಟಬ್ಲೇಕನಿಗೆ ಅಂದಿನ ರಾತ್ರಿಯಲ್ಲಿ ಅಂಥ ಯಾವ ಆವಶ್ಯದ ಕೆಲಸವೂ ಇರಲಿಲ್ಲ. ಅದರಿಂದ ಆತನು ತನ್ನ ಪ್ರಿಯ ಅನುಚರನಾದ ಸ್ಮಿತ್ಥನನ್ನು ಜೊತೆಯಲ್ಲಿ ಕರೆದುಕೊಂಡು ರೈಲ ಮೂಲಕ ಆ ಪಟ್ಟಣದ ಪೂರ್ವಭಾಗದಲ್ಲಿ ಸಂಚರಿಸಲಿಕ್ಕೆಂದು ಹೊರ ಹೊರಟಿದ್ದನು. ಹಾಗೆ ಹೊರಟವನು ನಡುವಿನ ಒಂದು ಸ್ಟೇಶನ್ನಿನಲ್ಲಿಳಿದು, ಬಡ ಹಳ್ಳಿಗಳೊಳಗಿಂದ ಕಾಲು ನಡಿಗೆಯಿಂದ ತನ್ನ ಮನೆಯ ಕಡೆಗೆ ಹಿಂದಿ ರುಗಿದನು.

ಅವರು ಆ ಯಾವ ಹಳ್ಳಿಗಳೊಳಗಿಂದ ಹಾಯ್ದು ಬರುತ್ತಿದ್ದರೋ ಆ ಎಲ್ಲ ಹಳ್ಳಿಗಳ ನಿವಾಸಿಗಳೆಲ್ಲರೂ ತೀರ ಬಡಜನರಾಗಿರಲಿಲ್ಲ; ಆದರೆ ಅವರುಗಳು ಸಮಾಜದೊಳಗಿನ ಕೀಳು ವರ್ಗದ ಜನರು. ಅವರು ನರಾಕೃತಿಯ ಪಶುಗಳು!

ಪಶುಗಳು ಕೂಡ ಹಲವು ಬಾಬಿನಲ್ಲಿ ಅವರಿಗಿಂತಲೂ ಶ್ರೇಷ್ಠವಿರುತ್ತವೆ. ಧರ್ಮ, ನೀತಿ, ದಯೆ, ಸಹಕಾರ ಮುಂತಾದವುಗಳ ಪರಿಚಯವೇ ಅವರಿಗಿರಲಿಲ್ಲ. ಅವರ ಕುತ್ಸಿತ ಹೇಯವಾದ ಬಾಳು ಮನುಷ್ಯತ್ವ ವರ್ಜಿತವಾದದ್ದು. ಬ್ಲೇಕನು ಸಮಾಜದೇಹದ ಹುಣ್ಣಿನೋಪಾದಿಯ ಆ ಎಲ್ಲ ನರಾಧಮರ ರೀತಿ, ನಡವಳಿ, ಪ್ರಕೃತಿಧರ್ಮ ಮುಂತಾದವುಗಳನ್ನು ಪರೀಕ್ಷಿಸಲಿಕ್ಕೆ ಬಯಸುತ್ತಿದ್ದನು. ಅದ ರಿಂದ ಅವನು ಕೆಲ ಜ್ಞಾನವನ್ನು ಸಂಪಾದಿಸಲಿಚ್ಛಿಸುತ್ತಿದ್ದನು. ಅವನು ಆ ಎಲ್ಲ ಹಳ್ಳಿಗಳೊಳಗಿಂದ ಹಾಯ್ದು ನಡೆದಿರುವಾಗ ಎಷ್ಟು ಓಕರಿಕೆ ಬರುವಂತ ಹಂಡ ದೃಶ್ಯಗಳನ್ನು ನೋಡಬೇಕಾಯಿತೋ ಅವುಗಳನ್ನು ಗಣಿಸಲು ಶಕ್ಯವಿರ ಲಿಲ್ಲ ಅಲ್ಲಿಯವರೆಲ್ಲರೂ ಮನುಷ್ಯರೇ; ಅಲ್ಲದೆ ಸುಶಿಕ್ಷಿತರೂ ಅತ್ಯಂತ ಸಭ್ಯರೂ ಗರ್ವಿತ ಸುಸಭ್ಯರೂ ಆದ ಇಂಗ್ಲಿಷ ಸಮಾಜದವರೇ ಆಗಿದ್ದರು.

ದಾರಿ ನಡೆಯುತ್ತಿರುವಾಗ ಬ್ಲೇಕನು ಒಂದೆಡೆಯಲ್ಲಿ ತಟ್ಟನೆ ನಿಂತ ನೋಡಿದನೇನಂದರೆ, ಒಂದು ಹೇಸರಗತ್ತೆಯ ಬಂಡಿಯು ಟ್ರಾಮು ಲೈನಿನ ಮೇಲೆ ಬಂದು ಹೊರಳಿ ಬಿದ್ದುಬಿಟ್ಟಿತ್ತು. ಅದರಿಂದ ಎರಡು ಟ್ರಾಮು ಗಾಡಿ ಗಳು ಹಾಗು ಒಂದು ಮೋಟರ ಕಾರು ಇವು ದಾರಿಯಿಲ್ಲದೆ ನಿಂತು ಬಿಟ್ಟಿದ್ದವು. ಮುಂದೆ ಅಲ್ಪಾವಕಾಶದಲ್ಲಿಯೇ ಒಂದು ಹಸರು ಬಣ್ಣದ ಟ್ಯಾಕ್ಸಿಯು ಅಲ್ಲಿಗೆ ಬಂದುದರಿಂದ ಅದೂ ನಿಂತಿರಬೇಕಾಯಿತು. ಟ್ಯಾಕ್ಸಿಯು ಏಕೆ ನಿಂತಿತೆಂಬ ದನ್ನು ನೋಡಲಿಕ್ಕೆಂದು ಟ್ಯಾಕ್ಸಿಯೊಳಗಿನವನು ಕಿಟಕಿಯೊಳಗಿಂದ ಮೋರೆ ಯನ್ನು ಹೊರದೆಗೆದನು. ಕೂಡಲೆ ಬ್ಲೇಕನ ತೀಕ್ಷ್ಣದೃಷ್ಟಿಗೆ ಆ ಮುಖವು ಕಾಣಿಸಿಕೊಂಡಿತು. ಅದು ಆತನ ಪರಿಚಯದ ಮುಖವೇ ಆಗಿತ್ತು.

ಬ್ಲೇಕನು ಆಗ ಆ ಟ್ಯಾಕ್ಸಿಯಿಂದ ತುಸ ದೂರದಲ್ಲಿ ನಿಂತುಕೊಂಡಿ ದ್ದನು. ಅವನು ಟ್ಯಾಕ್ಸಿಯೊಳಗಿನವನನ್ನು ಗುರ್ತಿಸಿದ ಕೂಡಲೆ ತನ್ನ ಒಂ ಬದಿಯಲ್ಲಿದ್ದ ಸ್ಮಿತ್ಥನನ್ನು ಕುರಿತು:—"ಸ್ಮಿತ್ಥ, ಈ ಟ್ಯಾಕ್ಸಿಯನ್ನು ನೋಡಿ ದೆಯಾ?"

ಸ್ಮಿತ್ಥ:—"ಒಡೆಯಾ, ನೋಡಿದೆ."

"ನೀನು ಈ ಟ್ಯಾಕ್ಸಿಯನ್ನು ಅನುಸರಣ ಮಾಡು. ಇದು ಎಲ್ಲಿಗೆ ಹೋ ಗುತ್ತದೆಂಬದನ್ನು ತಿಳಿಯಬೇಕಾಗಿದೆ."

ಸ್ಮಿತ್ಥ:—"ಒಡೆಯಾ, ಸಂಗತಿಯೇನು?"

"ಅದನ್ನು ಹಿಂದಿನಿಂದ ತಿಳಕೊಳ್ಳುವೆಯಂತೆ. ಮೊದಲು ನನ್ನ ಅಪ್ಪಣೆ ಯನ್ನು ಪಾಲಿಸು."

ಆದರೆ ಆತನ ಅಪ್ಪಣೆ ಪಾಲಿಸಲಿಕ್ಕೆ ತಡೆಯುಂಟಾಯಿತು. ಅಷ್ಟರಲ್ಲಿ

ಮಾರ್ಗವು ಸುಕರವಾಗಲು, ಆ ಟ್ಯಾಕ್ಸಿಯು ವಾಯುವೇಗದಿಂದ ನದಿಯ ಕಡೆಗೆ ಹೊರಟಿತು; ಹಾಗು ಕಣ್ಣು ಮುಚ್ಚಿ ಕಣ್ಣು ತೆರೆಯುವಷ್ಟರಲ್ಲಿ ಅದು ಕಾಣದಂತಾಯಿತು. ಆದರೂ ಸ್ಮಿತ್ಥನು ಕೆಲ ದೂರ ಓಡಿ ಹೋದನು; ಆದರೆ ಅದನ್ನು ಅನುಸರಿಸಿ ಹೋಗುವದು ಅಶಕ್ಯವೆಂದು ತಿಳಿಯಲು, ಖಿನ್ನ ಮನಸ್ಕನಾಗಿ ಬ್ಲೇಕನ ಬಳಿಗೆ ಹಿಂದಿರುಗಿ ಬಂದನು; ಹಾಗು ಒಳ್ಳೇ ಬಲುಮೆಯಿಂದ ಕೇಳಿದನೇನಂದರೆ:“ಒಡೆಯಾ, ನೀವು ಆ ಟ್ಯಾಕ್ಸಿಯಲ್ಲಿ ಯಾರನ್ನು ಕಂಡಿರಿ?”

ಬ್ಲೇಕ:—“ನಿನಗೆ ಗುರ್ತ ಹತ್ತಲಿಲ್ಲವೆ? ಅವನ ಹೆಸರು ನೇಥಿಲ್ ಪರಕೋರ್ಟರನೆಂದು.”

“ಓಹೋ! ಆ ಮಾನ್ಯವಂತ ಸದ್ಗೃಹಸ್ಥನೇ! ಲಂಡನ್ನಿನ ಈ ಪೂರ್ವಭಾಗದ ಹಕ್ಕಿಯಲ್ಲಿ ಒಂದು ಬಾಡಿಗೆಯ ಟ್ಯಾಕ್ಸಿಯೊಳಗಿಂದ ರಾತ್ರಿಯ ಸಮಯದಲ್ಲಿ ಅವನಂತಹ ಸನ್ಮಾನ್ಯವ್ಯಕ್ತಿಯ ಸಂಚಾರವು ವಿಚಿತ್ರವಲ್ಲವೆ?”

ಬ್ಲೇಕ:“ವಿಶೇಷವೇನಂದರೆ ಆತ ದಾರಿಹೋಕನ ಉಡುಪಿನಲ್ಲಿ! ನಿಜವಾಗಿಯೂ ಇದರಲ್ಲೇನೋ ಗುಪ್ತರಹಸ್ಯವಿರಬೇಕು. ಇಂದಿನ ಈ ಸಂಗತಿಯನ್ನು ನಾವು ಚೆನ್ನಾಗಿ ನೆನಪಿಡತಕ್ಕದ್ದು.

---

## ಕಿಲ್ಡೇಯೂರನು ಇಷ್ಟು ಮೂರ್ಖನೆ?

ಬ್ಲೇಕನ ಮನೆಯ ಅಡಿಗೆಯವಳಾದ ಮಿಸೆಸ್ ವಾರ್ಡೇಲಳು ತನ ಬಾಗಿಲ ಬಳಿಯ ಗಂಟೆಯ ಘಣಘಣ ಶಬ್ದವನ್ನು ಕೇಳಿ ಬಾಗಿಲು ತೆರೆದು ನೋಡುತ್ತಾಳೆ, ಅಚ್ಚ ಕರೀ ಬಣ್ಣದ ಉಡಿಗೆ ತೊಡಿಗೆಗಳನ್ನು ಧರಿಸಿದ್ದ ಒಬ್ಬ ಸದ್ಗೃಹಸ್ಥನು ಬಂದಿದ್ದು, ಅವನು ಬ್ಲೇಕನನ್ನು ಕಾಣುವ ಬಗ್ಗೆ ಆತುರಗೊಂಡಿರುತ್ತಾನೆ. ಆಕೆಯು ಆತನನ್ನು ಒಳಗೆ ನಡುಮನೆಗೆ ಬರಮಾಡಿಕೊಂಡು, ಅಲ್ಲಿಯ ಒಂದು ಕುರ್ಚಿಯ ಮೇಲೆ ಕೂರಿಸಿ, ತಾನು ಬ್ಲೇಕನಿಗೆ ಆ ಸಂಗತಿ ಹೇಳಲಿಕ್ಕೆಂದು ಅಟ್ಟಕ್ಕೆ ಹೋದಳು. ಬ್ಲೇಕನು ಆಗ ತನ್ನ ಕೂಡ್ರುವ ಕೋಣೆಯಲ್ಲಿ ಕುಳಿತು ಯಾವದೋ ಒಂದು ಕಾಗದವನ್ನು ಬರೆಯುತ್ತಿದ್ದನು. ಸ್ಮಿತ್ಥನು ಆ ಕೋಣೆಯ ಕಿಟಕಿಯ ಬಳಿಯಲ್ಲಿದ್ದ ಒಂದು ಬಹು ದೊಡ್ಡ ಕೋಚಿನ ಮೇಲೆ ಬಿದ್ದುಕೊಂಡು ಏನನ್ನೋ ಯೋಚಿಸುತ್ತಿದ್ದನು.

ವಾರ್ಡೇಲಳು ಕೋಣೆಯ ಬಾಗಿಲು ತೆರೆದು ಬ್ಲೇಕನ ಬಳಿಗೆ ಹೋದಳು; ಹಾಗು ಹೆಚ್ಚಾಗಿ ಗಾಬರಿಗೊಂಡವರಂತೆ:-“ಒಡೆಯಾ! ಒಬ್ಬ ಸದ್ಗೃಹಸ್ಥನು-ಅವನನ್ನು ನಿರೀಕ್ಷಿಸಲಾಗಿ ಅವನು ಬಹು ದೊಡ್ಡ ಗೃಹಸ್ಥನೆಂಬಂತೆ ತೋರು

ಸಿರಿ-ಸಂಪತ್ತುಗಳು ನಿನಗೇ ದೊರೆಯುವ ಹಾಗೆ ಹೊಸ ಮೃತ್ಯುಪತ್ರ ಬರೆ ದಿಡುತ್ತೇನೆ."

ಸೋದರತ್ತೆಯ ಮಾತು ಕೇಳಿ ಉಲ್ಲಸಿತನಾದ ಬ್ರಾಮನನು ಭರದಿಂದ ಕುರ್ಚಿಯಿಂದೆದ್ದು ನಿಂತುಕೊಂಡನು; ಆದರೆ ಪರಕ್ಷಣದಲ್ಲಿಯೇ ಹೆಚ್ಚಾದ ಸಂಯಮನದಿಂದ ಮತ್ತೆ ಕುಳಿತನು. ಆಗ ಅತನ ಕಣ್ಣುಗಳಲ್ಲಿ ಯಾವ ಭಾವವು ವ್ಯಕ್ತವಾಯಿತೋ, ಅದು ಆನಂದ ಅಥವಾ ಕೃತಜ್ಞತೆಯ ಭಾವವಾಗಿ ರಲಿಲ್ಲ. ಅದು ಹೆಚ್ಚಾದ ಅವಜ್ಞತೆಯ ಹಾಗು ವಿರಕ್ತಿಪೂರ್ಣವಾದ ಉಪೇಕ್ಷೆ ಯ ಭಾವವಾಗಿದ್ದಿತು!

ಮೂರ್ಖ ಹುಡುಗನೇ ಅತ! ಆ ಬ್ರಾಮನನು ಬುದ್ಧಿವಂತನಾಗಿದ್ದರೆ ತನ್ನ ಸೋದರತ್ತೆಯ ಆ ಅನುಗ್ರಹದ ಬಗ್ಗೆ ಅವನು ಅವಳಿಗೆ ಹೆಚ್ಚಾಗಿ ಧನ್ಯ ವಾದಗಳನ್ನು ವಿಶೇಷ ಭಕ್ತಿಭರದಿಂದ ಅರ್ಪಿಸಿ ಆ ಅತ್ತೆವ್ವನನ್ನು ಹೆಚ್ಚಾಗಿ ಸಂತುಷ್ಟಗೊಳಿಸುತ್ತಿದ್ದನು; ಆದರೆ ಆ ಮೂರ್ಖನ ಬುದ್ಧಿಯೇ ವಿಪರೀತವು ಬ್ರಾಮನನು ಮುಖವನ್ನು ಗಂಭೀರವಾಗಿ ಮಾಡಿಕೊಂಡು:—'ಅತ್ತೆವ್ವಾ, ನಿನ್ನ ಮಾತುನನಗೆ ಸರಿದೋರುವದಿಲ್ಲ!" ಎಂದು ಹೇಳಿದನು.

ವೃದ್ಧಳು ಅತ್ಯಂತ ವಿಸ್ಮಿತಳಾಗಿ ದೃಷ್ಟಿಯನ್ನು ಮೇಲಕ್ಕೇರಿಸಿ:—'ಸರಿ ದೋರುವದಿಲ್ಲವೆ? ಅದಕ್ಕೆ ಕಾರಣವೇನು? ನಿನಗೆ ಸರಿದೋರದಂತಹ ನುಡಿ ಗಳು ನನ್ನ ಬಾಯಿಂದವೇನು ಹೊರಟವು? ಅದನ್ನಾದರೂ ಹೇಳುನೋಡೋಣ"

ಬ್ರಾಮನನು ಸೂಕ್ಷ್ಮನಿಂದಲೇ:—"ನಾನು ಬಡವನಾಗಿದ್ದರೂ ನನಗೆ ಆತ್ಮಸನ್ಮಾನವಿದೆ. ಡಾಫನಿಯನ್ನು ನಾನು ಪ್ರೀತಿಸುತ್ತೇನೆಂಬದನ್ನು ನಾನು ಸಹಜವಾಗಿಯೇ ಒಪ್ಪುತ್ತೇನೆ; ಆದರೆ ನಾನು ಅವಳನ್ನು ಪ್ರೀತಿಸುತ್ತೇನೆಂದ ಮಾತ್ರಕ್ಕೆ ನಾನು ಅವಳನ್ನು ಲಗ್ನವಾಗುವೆನೇ? ನಾನು ಅದಾವ ಸ್ವಾರ್ಥಸಿದ್ಧಿ ಗಾಗಿ ಅವಳನ್ನು ಲಗ್ನವಾಗಬೇಕೆಂಬದು ನನಗಂತೂ ಅಸಹ್ಯವೆನಿಸುತ್ತದೆ. ಈ ಬಗೆಯ ಲಾಭಜನಕವಾದ ಮಾತಿಗೆ ಸಮ್ಮತಿಸಿ, ನಾನು ಪ್ರೇಮದ ಮರ್ಯಾದೆ ಯನ್ನು ಕ್ಷೀಣತರಕ್ಕೆ ಮನಸ್ಸು ಮಾಡುವದಿಲ್ಲ. ದುಡ್ಡಿನ ಲೋಭಕ್ಕಾಗಿ ಪ್ರೇಮವನ್ನು ಲಘುಗೊಳಿಸಲಿಕ್ಕೆ ಮುಟ್ಟಿಸಲು ನಾನು ಬಯಸುವದಿಲ್ಲ. ನೀವು ನನ್ನ ಮಾತು ಕೇಳಿ ಅಸಂತುಷ್ಟರಾಗಬೇಡಿರಿ; ಆದರೆ ಸಮ್ರಾಟನ ಅತುಲವಾದ ಧನಭಾಂಡಾರವನ್ನು ಕೊಟ್ಟರೂ ಕೂಡ ನಾನು ಯಾವಳನ್ನು ಪ್ರೀತಿಸುವದಿ ಲ್ಲವೋ ಅವಳನ್ನೆಂದೂ ಮದುವೆಯಾಗಲಿಕ್ಕೆ ಸಿದ್ಧನಾಗಲಾರೆನು."

ಸೋದರತ್ತೆಯು ಬ್ರಾಮನನ ಆ ಬಿಡಿನುಡಿಗಳನ್ನು ಕೇಳಿ ಸಿಟ್ಟಾಗ ಲಿಲ್ಲ; ಕೊಂಚವೂ ಚಂಚಲಳಾಗಲಿಲ್ಲ. ಕೋಮಲ ಸ್ವರದಲ್ಲಿ:—"ಮೂರ್ಖ

"ಅಹುದು. ಕೆಲ ವರ್ಷಗಳಿಂದ ನಾನು ಅವನನ್ನು ಬಲ್ಲೆನು. ಪಡೆದ ದ್ದಾದರೂ ಏನು? ತಿಳಿಸಬಾರದೇ?"

"ಆ ತರುಣನು ಭಯಂಕರವಾದ ವಿಪತ್ತಿಗೀಡಾಗಿದ್ದಾನೆ."

"ಈ ಸಂಗತಿಯಿಂದ ನನಗೆ ವಿಸ್ಮಯವೆನಿಸುವದಿಲ್ಲ. ಆತನ ಬಗ್ಗೆ ಇಂಥ ವಿರುದ್ಧವಾದ ಸುದ್ದಿಗಳು ಆಗಾಗ್ಗೆ ಏಳುತ್ತಿರುತ್ತವೆ."

ಲಿಬರ್ನ:—"ಆದರೆ ಆ ಸಭ್ಯ ಗೃಹಸ್ಥನು ಎಂಥ ಭಯಂಕರ ವಿಪತ್ತಿಗೀಡಾಗಿರುವನೆಂಬದನ್ನು ನೀವು ಅನುಮಾನಿಸಲಾರಿರಿ. ಆತನನ್ನು ಬೇಗನೆ ಪೋಲೀಸರು ಸೆರೆಹಿಡಿಯುವರೆಂದು ತಿಳಿಯುತ್ತದೆ."

ಬ್ಲೇಕನು ವಿಸ್ಮಯಭರದಿಂದ:—"ಎಂಥ ಕೇಡಿದು? ಆತನ ವಿರುದ್ಧ ಅಂಥ ಘೋರವಾದ ಆರೋಪವೇನು?

ಲಿಬರ್ನ: —"ಆತನ ವಿಷಯದ ಸಕಲ ಸಂಗತಿಯನ್ನು ಸಂಕ್ಷೇಪವಾಗಿಯೇ ತಿಳಿಸುವೆನು-ಕೇಳಿಕೊಳ್ಳಿರಿ. ಸುಮಾರು ಒಂದು ವರ್ಷದಿಂದ ಲಾರ್ಡ ಮೆಸಿಂಡೇಲನ ಮಗಳೊಡನೆ ಈ ತರುಣನ ವಿವಾಹಸಂಬಂಧವು ನಿಶ್ಚಿತವಾಗಿರುತ್ತದೆ. ಈ ಮಧ್ಯದಲ್ಲಿ ಈತನು ಹಲವು ಸಾರೆ ನಮ್ಮ ಶಾಪಿನಿಂದ ಅನೇಕ ಹರಳು-ಕಲ್ಲುಗಳ ಅಲಂಕಾರಗಳನ್ನು ಸಾಲವಾಗಿ ಕೊಂಡೊಯ್ದಿರುತ್ತಾನೆ. ನನಗೆ ಒಬ್ಬ ಮುದುಕಿಯಾದ ಸೋದರತ್ತೆಯಿದ್ದು, ಅವಳಲ್ಲಿ ಹೆಚ್ಚಾಗಿ ಧನ ವಿದೆ. ಆ ಮುದುಕೆಯು ನನ್ನನ್ನೇ ತನ್ನ ಸಂಪತ್ತಿಗೆಲ್ಲ ಉತ್ತರಾಧಿಕಾರಿಯನ್ನಾಗ ಮಾಡುವಳು. ಆದ್ದರಿಂದ ನಿಮ್ಮ ಸಾಲವನ್ನು ತೀರಿಸಲಿಕ್ಕೆ ನನಗೇನೂ ಕಠಿಣವಲ್ಲವೆಂದು ಅವನು ನಮಗೆ ಹೇಳಿದ್ದನು. ಇದರ ಹೊರತು ತನ್ನ ಸ್ವಂತದ ಆರ್ಥಿಕ ಅವಸ್ಥೆಯೂ ಚನ್ನಾಗಿದೆ, ಎಂದು ಆತನು ತಿಳಿಸಿದ್ದನು; ಆದರೆ ನಾವು ಆತನಿಂದ ಇದುವರೆಗೆ ಒಂದು ಪೇನಿಯನ್ನು ಕೂಡ ಪಡೆದಿಲ್ಲ. ಅವನಿಂದ ಇಂದಿಗೆ ನಮಗೆ ಬರಬೇಕಾದ ಹಣವು ಐದಾರು ನೂರು ಪೌಂಡು. ನಾವು ಅವನೆಡೆಗೆ ಆಗಾಗ್ಗೆ ನಮ್ಮ ಬಾಕಿ ಪಟ್ಟಿಗಳನ್ನು ಕಳಿಸಿದ್ದರೂ ಅವನಿಂದ ನಮಗೆ ಹಣ ಬರಲಿಲ್ಲ. ಲೆಫ್ಟನೆಂಬ ಕಿಲ್ಲೇಯಾರನ ರೀತಿ ನಡೆವಳಿಗಳಲ್ಲಿ ನಮಗೆ ಸಂದೇಹ ತೋರಿ ಬರಲು, ನಾವು ಆತನ ವಿಷಯದ ನಿಜ ಸಂಗತಿ ತಿಳಿಯಲಿಕ್ಕೆಂದು ನಮ್ಮ ಒಬ್ಬ ಗುಪ್ತಹೇರನನ್ನು ನಿಯಮಿಸಿದ್ದೆವು. ಆ ಹೇರನಿಂದಲೂ ಬೇರೆ ಜನರಿಂದಲೂ ನಮಗೆ ತಿಳಿದು ಬಂದಿರುವುದೇನಂದರೆ:-"ಆತನು ದಿನಾಲು ಜೂಜು ಆಡಿ ವಿಪುಲ ಹಣವನ್ನು ಸೋಲುತ್ತಿರುವನೆಂದೂ, ತನ್ನ ವ್ಯವಸಾಯ ಬಂಧುಗಳಲ್ಲೂ ಗುರ್ತು ಪರಿಚಯದವರಲ್ಲೂ ಅವನು ಹೆಚ್ಚಾಗಿ ಸಾಲ ಮಾಡಿರುವನೆಂದೂ ತಿಳಿಯುತ್ತದೆ; ಅಲ್ಲದೆ ಪರಮ ವಿಸ್ಮಯದ ಸಂಗತಿಯೆಂದರೆ,

ಆತನು ನಮ್ಮಲ್ಲಿಂದ ಯಾವ ಹಲವು ವಸ್ತ್ರ-ಒಡವೆಗಳನ್ನು ಸಾಲವಾಗಿ ಒಯ್ದಿರುವನೋ ಆ ಹರಳು-ಕಲ್ಲುಗಳ ಅಲಂಕಾರಗಳಲ್ಲಿ ಕೆಲವನ್ನು ಬೇರೆ ಇರುವರಲ್ಲಿ ಒತ್ತಿ ಇಟ್ಟು, ಬೇರೆ ಕೆಲವನ್ನು ಮಾರಿ ಆ ಹಣದಿಂದಲೂ ಜೂಜಾಡಿರುವನಂತೆ!"

ಬ್ಲೇಕನು:—"ಅಲ್ಲಲ್ಲ; ಇವೆಲ್ಲ ಸಂಗತಿಯೂ ನಂಬತಕ್ಕದ್ದಲ್ಲ."

ಲಿಬರ್ನ:—"ನೀವು ನಂಬದಿರಿ, ಆದರೆ ಇದಂತೂ ಸತ್ಯಸಂಗತಿಯು. ಪ್ರಮಾಣಿಸಿ ನೋಡದೇನೇ ನಾನಿವನ್ನೆಲ್ಲ ಹೇಳುತ್ತಿರುವೆನೇ? ನಾವು ಹಲವು ಪ್ರಮಾಣಗಳನ್ನು ಸಂಗ್ರಹಿಸಿರುತ್ತೇವೆ. ಆತನು ಹೀಗೆ ನಮ್ಮಲ್ಲಿ ಸಾಲವಾಗಿ ಒಯ್ದ ಒಡವೆಗಳನ್ನು ಬೇರೆಯವರಲ್ಲಿ ಒತ್ತಿ ಇಡುವದು ಕಾಯಿದೆಗೆ ವಿರುದ್ಧವಾದ ಕೆಲಸವೆಂಬದು ತಮಗರಿಯದ ಸಂಗತಿಯಲ್ಲ."

ಬ್ಲೇಕ:—ನನಗದು ಗೊತ್ತಿದೆ; ಆದರೆ ನೀವು ಯಾವ ಉದ್ದೇಶಕ್ಕಾಗಿ ನನ್ನನ್ನು ಕಾಣಬಂದಿರುತ್ತೀರೆಂಬದು ಇದುವರೆಗೂ ತಿಳಿಯಲೇ ಇಲ್ಲವಲ್ಲ?"

ಲಿಬರ್ನ:—"ಆ ತರುಣನ ಕೂಡ ತಮ್ಮ ಋಣಾನುಬಂಧವಿದೆ. ತಾವು ಆತನಿಗೆ ಸದುಪದೇಶ ಮಾಡಿ ಅವನನ್ನು ಜಾಗ್ರತಪಡಿಸಬೇಕು; ಹಾಗು ಅವನಿಂದ ನಮಗೆ ಬರಬೇಕಾದ ಹಣವನ್ನೆಲ್ಲ ಹೇಗಾದರೂ ಮಾಡಿ ಕೊಡಿಸಬೇಕು, ಎಂದು ನನ್ನ ಇಚ್ಛೆ ಇದೆ. ತಾವು ಅವನ ಹಿತಕಾಂಕ್ಷಿಗಳಿರುವದರಿಂದ ತಾವು ಆತನೊಡನೆ ಈ ಎಲ್ಲ ವಿಷಯವನ್ನು ಕುರಿತು ಆಲೋಚಿಸಬೇಕೆಂದು ನನ್ನ ಅಪೇಕ್ಷೆ. ಒಂದು ವೇಳೆ ಆತನು ನಾಳೆ-ನಾಡದ್ದರಲ್ಲಿ ನಮ್ಮ ಹಣವನ್ನು ಸಂಪೂರ್ಣ ಕೊಡಲಾಗದಿದ್ದರೂ ಬಹುಮಟ್ಟಿಗಾದರೂ ಕೊಡದಿದ್ದರೆ, ನಾವು ಆತನನ್ನು ಸೆರೆಹಿಡಿಯುವ ವಾರಂಟನ್ನು ಹೊರ ಹೊರಡಿಸಲೇ ಬೇಕಾಗುತ್ತದೆ. ನಮ್ಮ ಅಂಗಡಿಯ ಮುಖ್ಯ ಭಾಗಿದಾರನೂ ಸರ್ವಾಧಿಕಾರಿಯೂ ಆಗಿರುವ ಸಾ ಸಾಹೇಬನು ಈ ಬಗ್ಗೆ ಕೃತಸಂಕಲ್ಪನಾಗಿರುವನು"

ಬ್ಲೇಕನು ಕಿಲ್ಡೇಯಾರನ ವಿರುದ್ಧವಾದ ಆ ಎಲ್ಲ ಸಂಗತಿಗಳನ್ನು ಕೇಳಿದ್ದನು. ಅವು ಈಗ ಒಂದೊಂದೇ ಆಗಿ ನೆನಪಿಗೆ ಬಂದವು. ಇಷ್ಟೇ ಅಲ್ಲ, ಒಂದು ದಿನ ಒಂದು ಜೂಜಿನ ಅಡ್ಡೆಯಲ್ಲಿ ಆತನು ನೇಥಿಲ್ ಹರಕೋರ್ಟನೊಂದಿಗೆ ಜೂಜಾಡುತ್ತಿದ್ದದ್ದನ್ನು ನೋಡಿದ್ದು ಕೂಡ ನೆನಪಾಯಿತು. ಆಗ ತಾನು ಅವನಿಗೇಕೆ ಸಿಟ್ಟುಮಾಡಿ ಹೇಳಲಿಲ್ಲೆಂಬ ಬಗ್ಗೆ ಕ್ಲೇಶಗೊಂಡನು. ಬ್ಲೇಕನು ನಾಲ್ಕಾರು ನಿಮಿಷಗಳವರೆಗೆ ಸುಮ್ಮನೆ ಕುಳಿತಿದ್ದು, ಬಳಿಕ ಲಿಬರ್ನನನ್ನುದ್ದೇಶಿಸಿ:—"ಆದರೆ ನೀವು ನಿಮ್ಮ ಈ ಉದ್ದೇಶಕ್ಕಾಗಿ ಆತನನ್ನು ಕ್ರಿಮಿನಲ್ ಕೈದಿಯನ್ನಾಗ ಮಾಡಲಾರಿರಿ."

# ನಾನು ಅದನ್ನೇ ಅವಲಂಬಿಸಬೇಕು.

ಪೆಂಗ್ರೇಡಿಯಾ ಸೈನ್ಯದ ಬರಾಕಿನಲ್ಲಿ ಲೆಫ್ಟನೆಂಟ ಕಿಲ್ಡೇಯಾರನ ನಿವಾಸ ಸ್ಥಳವು ಸಮಾಧಾನಕಾರಕ ತರದ್ದಿತ್ತು. ರಾಜಬೀದಿಯು ತುಸ ದೂರವಾದ್ದರಿಂದ ನಗರದ ಇರುವ ಬಗೆಬಗೆಯ ಬಂಡಿಗಳು ದುಃಸಹವಾದ ಸಪ್ಪಳ ಮಾಡುತ್ತ ಓಡಿ ಆ ವಸತಿಯ ಜನರ ಕಿವಿಗಳನ್ನು ಗಡಚಿಕ್ಕಿಸುತ್ತಿರಲಿಲ್ಲ. ಆ ಸೈನ್ಯದ ನಿವಾಸಸ್ಥಳವು ಬಹು ವಿಸ್ತಾರವಾದ ಮೂರಂತಸ್ತಿನದು. ದಂಡಾಳುಗಳ ಕೋಣೆಗಳ ಹಿಂಬದಿಗಳಲ್ಲಿ ವಿಶಾಲವಾದ ಕಿಟಕಿಗಳು ನಾಲುಗೊಂಡಿದ್ದವು. ಆ ಕಿಟಕಿಗಳ ಎದುರುಗಡೆಗೆ ಪ್ರಶಸ್ತವಾದ ಉಪವನ. ಶರದೃತುವಿನ ಹೊಂಬಣ್ಣದ ಕಿರಣಗಳಿಂದ ಆ ಉದ್ಯಾನವನದ ಶೋಭೆಯು ಹೆಚ್ಚಿದ್ದಿತು.

ಅಂದೇ ಅಪರಾಹ್ಣಕಾಲದಲ್ಲಿ ಬ್ಲೇಕನು ಲೆ. ಕಿಲ್ಡೇಯಾರನನ್ನು ಕಾಣಲಿಕ್ಕೆಂದು ಅಲ್ಲಿಗೆ ಹೋಗಿದ್ದನು. ಅವನು ಕಿಲ್ಡೇಯಾರನ ಕೋಣೆಯಲ್ಲಿ ಅವನೆದುರಿಗೆ ಒಂದು ಖುರ್ಚಿಯ ಮೇಲೆ ಕುಳಿತಿದ್ದನು. ಬ್ಲೇಕನು ಹರಳು ಕಲ್ಲುಗಳ ವ್ಯಾಪಾರಸ್ಥನಾದ ಲಿಬರ್ಗನಿಂದ ಏನೇನು ಕೇಳಿಕೊಂಡಿದ್ದನೋ ಅದನ್ನೆಲ್ಲ ಆತನಿಗೆ ಒಂದೊಂದೇ ಆಗಿ ಹೇಳಲು, ಅದನ್ನು ಕೇಳಿ ಕಿಲ್ಡೇಯಾರನ ಸುಂದರಮುಖವು ಬತ್ತಿ ಹೋಯಿತು. ತಾನು ಹೀಗೆ ಒಮ್ಮೆಲೆ ಇಂಥ ಆಪತ್ತಿಗೀಡಾಗಬಹುದೆಂಬುದು ಅವನ ಕನಸು ಮನಸ್ಸುಗಳಲ್ಲಿ ಕೂಡ ಬಂದಿರಲಿಲ್ಲ. ಎಲ್ಲ ಸಂಗತಿಯನ್ನು ಕೇಳಿಕೊಂಡ ಬಳಿಕ ಉದ್ವೇಗ ಹಾಗು ಅನುತಾಪಗಳಿಂದ ಆತನ ಎದೆನಡುಗಿತು. ಅವನ ಟೇಬಲ್ಲಿನ ಮೇಲೆ ಆತನ ಪ್ರಣಯಿನಿಯಾದ ಡಾಫನಿ ಬಾರನನ್ನಳದೊಂದು ಫೋಟೋ ಇತ್ತು. ಅವನು ಹತಾಶಭಾವದಿಂದೊಮ್ಮೆ ಆ ಫೋಟೋದ ಕಡೆಗೆ ನಿರೀಕ್ಷಿಸಿದನು; ಹಾಗು ಆ ಮೇಲೆ ಆವೇಗದಿಂದ ಕುಗ್ಗುತ್ತ:-"ನಾನು ಮೂರ್ಖನಂತಿದೇನು ಮಾಡಿದೆನು?" ಎಂದು ಅಂದನು.

ಆಗ ಬ್ಲೇಕನು ಸಹಾನುಭೂತಿಯ ದನಿಯಿಂದ: —"ಈ ಬಗ್ಗೆ ನೀನು ಮೊದಲೇ ಯೋಚಿಸಬೇಕಿತ್ತು; ಹಾಗೇಕೆ ಮಾಡಲಿಲ್ಲ?"

ಕಿಲ್ಡೇಯಾರ: –"ಏನೆಂದು ಹೇಳಲಿ? ಆಗ ನಾನು ಕುರುಡನಾಗಿದ್ದೆ. ಈ ಕರ್ಮದ ಫಲವು ಇಷ್ಟು ಭಯಾನಕವಾದೀತೆಂಬುದನ್ನು ಮೊದಲು ಊಹಿಸಲಿಕ್ಕೆ ಶಕ್ಯವಾಗಲಿಲ್ಲ. ನಮ್ಮಗಳ ಲಗ್ನವು ನಿಶ್ಚಯವಾದ್ದರಿಂದ ನನ್ನ ಖರ್ಚು ಕಂದಾಯಗಳು ವಿಪರೀತ ಹೆಚ್ಚಿದವು. ನನ್ನ ಸಂಬಳ ಹಾಗು ಹಿರಿಯರ ವೃತ್ತಿ ಇವುಗಳಲ್ಲಿ ಅವನ್ನೆಲ್ಲ ಬಗೆಹರಿಸುವದು ಶಕ್ಯವಿಲ್ಲೆಂದು ಅನುಭವವಾಗಬಿಟ್ಟಿತು. ನನ್ನ ಖರ್ಚು ಹಲವು ಬಾಬುಗಳಿಂದ ಹೆಚ್ಚಿತು. ನಾನು ನಡುನಡುವೆ ಡಾಫನಿಯನ್ನು ನಾಟಕ ನೋಡಲು ಕರೆದೊಯ್ಯುತ್ತಿದ್ದೆನು. ಆಗ

ಯಥೇಷ್ಟ ಖರ್ಚಾಗುತ್ತಿತ್ತು. ಅದಲ್ಲದೆ ಅವಳಿಗೆ ಆಗಾಗ್ಗೆ ಕಾಣಿಕೆ ಕೊಡು ವದು ನನಗೆ ಆವಶ್ಯಕತವಾಯಿತು. ಅಷ್ಟು ದೊಡ್ಡ ಮನುಷ್ಯನ ಮಗಳಾದ ಅವಳಿಗೆ ಕೇವಲ ಆಟಿಗೆಯ ಸಾಮಾನುಗಳನ್ನು ಕಾಣಿಕೆಯೆಂದು ಕೊಡಲಿಕ್ಕಾ ದೀತೇ? ನಮ್ಮಿಗಳ ವಿವಾಹ ಸಂಬಂಧವು ನಿರ್ಧರವಾದರೆ, ನನ್ನ ಸೋದರತ್ತೆ ಯು ಹೊಸ ಮೃತ್ಯುಪತ್ರ ಮಾಡಿ ನನ್ನನ್ನೇ ತನ್ನ ಎಲ್ಲ ಧನ-ಸಂಪತ್ತಿಗೆ ಉತ್ತರಾಧಿಕಾರಿಯನ್ನಾಗ ಮಾಡುತ್ತೇನೆಂದು ಹೇಳುವಳು; ಆದರೆ ನಾನು ಕೆಂಪು ಸೈನ್ಯದೊಳಗೆ ಚಾಕರಿ ಹಿಡಿದಾಗಿನಿಂದ ಅವಳು ನನಗೆ ಮಾಸ-ಮಾಸ ಕ್ಕೆ ಕೊಡುತ್ತಿದ್ದ ವೃತ್ತಿಯನ್ನೂ ಕಟ್ಟು ಮಾಡಿಬಿಟ್ಟಳು. ಅವಳು ಜೀವಂತ ಳಿರುವ ವರೆಗೂ ನಾನಿನ್ನು ಅವಳಿಂದ ಯಾವ ಸಹಾಯವನ್ನೂ ಹೊಂದುವ ಆಶೆಯಿಲ್ಲ. ನನ್ನ ಈ ಕೆಲಸದಲ್ಲಿ ಹೆಚ್ಚು ಖರ್ಚಾಗುತ್ತದೆಂಬದು ಅವಳಿಗೆ ಗೊತ್ತಿದೆ. ಅವಳು ನನಗೆ ಮಿತವ್ಯಯಿಯಾಗುವ ಬಗ್ಗೆ ಸಾಕಷ್ಟು ಉಪದೇಶ ಮಾಡಿರುವಳು; ಆದರೆ-ಆದರೆ ನಾನು ಮಾತ್ರ ದಿನದಿನಕ್ಕೆ ಹೆಚ್ಚು ಅಮಿತ ವ್ಯಯಿಯಾಗಹತ್ತಿರುತ್ತೇನೆಂಬ ಸಂದೇಹದಿಂದ ಅವಳು ನನಗೆ ಧನಸಹಾಯ ಮಾಡಲಿಕ್ಕೆ ಅಸಮ್ಮತಳಾಗಿರುವಳು. ನಾನು ಅವಳ ವಿಪುಲ ಸಂಪತ್ತಿಗೆ ಅಧಿ ಕಾರಿಯಾದರೆ ಮುಂದೆ ಧನಗೆ ಮುದ್ದಿನ ಕೊರತೆಯಾಗಲಿಕ್ಕಿಲ್ಲೆಂಬ ಆಶೆಯಿಂದ ಲೇ ನನ್ನ ಖರ್ಚು ಕಡಿಮೆ ಮಾಡುವ ಉದ್ಯೋಗಕ್ಕೆ ಹತ್ತಿಲ್ಲ; ಅದರ ಫಲ ವಾಗಿಯೇ ಈಗ ಈ ಸಂಕಟಕ್ಕೆ ತುತ್ತಾಗಿದ್ದೇನೆ! ನನ್ನ ಎಲ್ಲ ಆಶೆ-ಅಭೀಷ್ಟಗಳು ನಷ್ಟವಾಗಲಿಕ್ಕೆ ಹತ್ತಿರುತ್ತವೆ. ಇನ್ನು ನಾನು ಏನು ಮಾಡಲಿ?"

ಬ್ಲೇಕ:—"ನೀನು ಈಗ ಏನಾದರೂ ಮಾಡು; ಯಾವದು ಕಾಯಿದೆಗೆ ವಿರುದ್ಧವೋ ಆ ಕೆಲಸವನ್ನು ಮಾಡಿ ನೀನು ಕಾಯಿದೆಯ ಕತ್ತರಿಯಲ್ಲಿ ಸಿಕ್ಕಿ ರುತ್ತೀ. ನೀನು ಹೀಗೇಕೆ ಮಾಡಿದೆ? ಸಾಲವಾಗಿ ಜೀನಸುಗಳನ್ನು ತಂದು, ಅವುಗಳನ್ನು ಒತ್ತಿ ಇಟ್ಟು ಹಣ ಪಡೆಯುವದು ಭಯಂಕರ ಅಪರಾಧವು. ಅದು ಸಪ್ರಮಾಣವಾದರೆ, ನಿನಗೆ ಶಿಕ್ಷೆಯಾಗದಿರದು. ನೀನು ಸೆರೆಹಿಡಿಯಲ್ಪ ಟ್ಟರೆ, ನಿನಗೆ ಶಿಕ್ಷೆಯಾದರೆ, ಸಭ್ಯಗೃಹಸ್ಥನೆಂದು ನಿನ್ನನ್ನು ಯಾರು ಮನ್ನಿಸು ವರು? ಲಾರ್ಡ ಮೆಸಿಂಡೇಲನು ಫೌಜದಾರೀ ಖಟ್ಲೆಗೆ ಗುರಿಯಾದವನಿಗೆ ತನ್ನ ಮಗಳನ್ನು ಧಾರೆಯೆರೆದು ಕೊಡುವ ಸಂಭವವುಂಟೇ?"

ಕಿಲ್ಡೇಯಾರನು ಹತಾಶಭಾವದಿಂದ:—'ಇದು ಕಾಯಿದೆಗೆ ವಿರುದ್ಧ ವಾದ ಕೆಲಸ, ಇದರಿಂದ ಶಿಕ್ಷೆ ಹೊಂದಬೇಕಾಗುವದು ಎಂಬದಾವುದೂ ನನಗೆ ಗೊತ್ತಿರಲಿಲ್ಲ. ನಾನು ಹೀಗೆ ಬೇ ಕಾಯಿದೇಶೀರ ನಡೆಯುತ್ತಿರುವೆನೆಂಬದರ ಅರಿವೇ ನನಗಿರಲಿಲ್ಲ.'

"ನಿನ್ನ ಮಾತು ನಿಜವೇ-ಒನನ್ನು ನಾನು ನಂಬುತ್ತೇನೆ; ಆದರೆ ಕಾಯಿದೆ ಗೊತ್ತಿರಲಿಲ್ಲೆಂದಾಕ್ಷಣಕ್ಕೆ ಅಪರಾಧಿಗೆ ಶಿಕ್ಷೆಯಾಗದಿದ್ದೀತೇ? ಬೆಂಕಿಯ ಮೇಲೆ ತಿಳಿವೇ ಇಡಲಿ, ತಿಳಿಯದಲೇ ಇಡಲಿ ಕಾಲಿಟ್ಟರೆ ಅದು ಸುಡದಿರುವದೇ? ಹಾಗು ಅಜ್ಞ ಬಾಲಕನಿಟ್ಟಿತೆಂದು ಆ ಅಗ್ನಿಗೆ ಕರುಣೆಯುಂಟಾಗುವದೇ? ನೀನು ಆ ಹಣವನ್ನು ಜೂಜಿನಾಟದಲ್ಲಿ ಕಳೆದೆಯಲ್ಲ; ಅದನ್ನೂ ಸಮರ್ಥಿಸ ತಕ್ಕವನೇನು? ಜೂಜು ಕೇವಲ ಹೇಯವು! ಹೇಯಕಾರ್ಯವಾವುದೆಂ ದೆಂಬುದೂ ನಿನಗೆ ತಿಳಿಯದೇ? ನೀನು ಜೂಜಾಡುತ್ತಿರುವದನ್ನಂತೂ ಒಪ್ಪ ದಿರಲಾರೆ. ನೀನು ಆಡುತ್ತಿದ್ದುದನ್ನು ಹಲವು ಸಾರೆ ನಾನು ಸ್ವಂತ ನೋಡಿರು ತ್ತೇನೆ."

"ಬ್ಲೇಕ ನಾನು ಸುಳ್ಳಾಡಲಾರೆ. ನಿಜವಾಗಿಯೂ ನಾನು ಹಲವು ಸಾರೆ ಜೂಜಾಡಿರುತ್ತೇನೆ. ಅದನ್ನು ಕೇವಲ ಹಣಸಂಪಾದನೆಗೆಂದೇ ಆಡಿರುತ್ತೇನೆ. ಜೂಜಾಡದಪತ್ತಿ ನಾನು ಹಲವು ಜನ ಅಂಥಂಥವರಲ್ಲಿ ಕೂಡ ಸಾಲಗಾರನಾಗಿ ರುತ್ತೇನೆ, ಸಾಲಗಾರರ ಕಾಟವನ್ನು ಸಹಿಸಲಾರದೆ ದೊಡ್ಡ ದೊಡ್ಡ ಜನರ ಹಸ್ತಕನಾಗಿ ಅವರಿಗೆ ಬರುವ ಹಣದಲ್ಲಿ ಪಾಲುಗಾರನಾಗಿ ಜೂಜಾಡಿದೆನು. ನೇಭಿಲ್ ಹರಕೋರ್ಟನೇ ನನಗಾ ಸಲಹೆ ಕೊಟ್ಟನು; ಆದರೆ ಯಾವ ಬಗೆಯ ಜೂಜಿನಿಂದಲೂ ನನಗೆ ಹಣ ದೊರಕವೆ, ಪ್ರತಿಸಾರೆಯೂ ಹಲವೊಂದು ಹೆಚ್ಚಿನ ಸಾಲಕ್ಕೇ ಗುರಿಯಾಗಿರುವೆನು, ಆದರೂ ಎಂದಾದರೊಂದು ದಿನ ನಾಲ್ಕಾರು ನೂರು ಪೌಂಡು ಗೆದ್ದೇನೆಂಬ ಲೋಭದಿಂದ ಜೂಜಿನ ಮೋಹವು ಬಿಡಲಿಕ್ಕಾಗ ಲೊಲ್ಲದು. ದೊಡ್ಡ ದೊಡ್ಡ ಜನರಲ್ಲಿಯು ಸಾಲದ ಬಗ್ಗೆ ನಾನೇನೂ ಅಂಜುವ ದಿಲ್ಲ; ಆದರೆ ಆ ವಜ್ರ-ರತ್ನಗಳ ವ್ಯಾಪಾರಿಯ ಋಣದ ಸಲುವಾಗಿಯೇ ನನಗೆ ದಿಕ್ಕು ತೋಚದಂತಾಗಿವೆ."

ಬ್ಲೇಕ:—"ನಾ ಎಂಡ ಲಿಬರ್ನ ಕಂಪನಿಯವರು ತಮಗೆ ಬರಬೇಕಾದ ಬಾಕಿಯ ಬಗ್ಗೆ ನಿನ್ನಲ್ಲಿ ಹಲವು ಸಾರೆ ತಮ್ಮ ಬಿಲ್ಲು ಕಳಿಸಿದ್ದರು; ಆದರೆ ನೀನು ಅವರಿಗೆ ಇದುವರೆಗೆ ಏನೂ ಕೊಡಲಿಲ್ಲ. ಅದರಿಂದ ಅವರು ನಿನ್ನನ್ನು ದಿವಾಳಿಖೋರನೆಂದು ನಿರ್ಣಯಿಸಿ, ಜೇಲಿಗೆ ಕಳಿಸುವ ಪ್ರಯತ್ನದಲ್ಲಿದ್ದಾರೆ. ನಾಳಿನ ದಿನವೇ ನಿನ್ನನ್ನು ಸೆರೆ ಹಿಡಿಯುವ ವಾರಂಟನ್ನು ಅವರು ತೆಗೆಸು ವರು. ಅವರು ನಿನಗೆ ಮತ್ತೆ ಅವಧಿ ಕೊಡುವ ಆಶೆಯಿಲ್ಲ; ಆ ಪ್ರಯತ್ನವು ವ್ಯರ್ಥವಾದದ್ದು. ನಾಳೆಯೇ ನೀನು ಅವರಿಗೆ ಕೊಡಬೇಕಾದ ಹಣ ತಲುಪಿ ಸುವ ವ್ಯವಸ್ಥೆ ಮಾಡಬೇಕು; ಹಾಗೆ ಮಾಡದಿದ್ದರೆ ನಿನಗೆ ಕಲ್ಯಾಣವಾಗದು."

ಕಿಲ್ಡೇಯರ:—"ನನ್ನಿಂದ ಅವರು ಎಷ್ಟೋ ಹಣ ಪಡೆಯಬೇಕು;

ಇಷ್ಟು ಅಲ್ಪಾವಧಿಯಲ್ಲಿ ಹಣವನ್ನೆಲ್ಲ ಜೋಡಣೆ ಮಾಡುವ ಬಗೆ ಹೇಗೆ? ನಾನು ನನ್ನ ಆದಾಯಕ್ಕಿಂತ ಯಾವಾಗಲೂ ಹೆಚ್ಚು ಖರ್ಚು ಮಾಡುತ್ತಿರುವ ನಾದ್ದರಿಂದ ನನ್ನಲ್ಲೀಗ ಕೊಂಚವೂ ಹಣ ಸಂಚಯವಿಲ್ಲ. ಯಾರಲ್ಲಾದರೂ ಸಾಲ ತಂದು ಅವರಿಗೆ ಕೊಡುವವನ್ನು ಕೊಟ್ಟುಬಿಡೋಣವೆಂದರೆ, ಅದಕ್ಕೆ ಬಿಂದುಮಾತ್ರವೂ ಅವಕಾಶವಿಲ್ಲ."

ಬ್ಲೇಕ: —"ಅವರಲ್ಲಿಂದ ಯಾವ ಯಾವ ರತ್ನಾಲಂಕಾರಗಳನ್ನು ಸಾಲ ವಾಗಿ ತಂದಿರುತ್ತೀಯೋ ಅವೆಲ್ಲವೂ ಒತ್ತೆಯಲ್ಲೇ ಇವೆಯೇನು?"

ಕಿಲ್ಡೇಯರ: —"ಇಲ್ಲ ನಾನು ನಾಪುಕಾರರಲ್ಲಿ ತಂದಿದ್ದ ಸಾಲಕ್ಕಾಗಿ ಕೆಲವನ್ನು ಅವರಿಗೆ ಮಾರಿದೆನು; ಮಿಕ್ಕವುಗಳನ್ನು ಒತ್ತೆಯಿಂದ ಬಿಡಿಸಿ ಕೊಂಡು ನನ್ನ ಪ್ರಿಯಕರಳಾದ ಡಾಫನಿ ಬಾರನನ್ನಳಿಗೆ ಕಾಣಿಕೆ ಎಂದು ಕೊಟ್ಟುಬಿಟ್ಟಿರುತ್ತೇನೆ."

ಬ್ಲೇಕ: —"ಯೋಗ್ಯವಾಯಿತು. ಇನ್ನು ನಿನ್ನ ರಕ್ಷಣವಾಗಲಿಕ್ಕೊಂದೇ ಉಪಾಯವಿದೆ. ಡಾಫನಿಯು ನಿಜವಾಗಿಯೂ ನಿನ್ನನ್ನು ಪ್ರೀತಿಸುತ್ತಿದ್ದರೆ, ನಿನ್ನ ಮೇಲಿನ ಸಂಕಟದ ಸಂಗತಿಯನ್ನು ಕೇಳಿ ಅವಳು ನಿನ್ನನ್ನು ಮರೆಯಲಾರಳು. ನಾನು ನಿನಗೆ ಈಗ ಸಲಹೆ ಕೊಡುವುದೇನೆಂದರೆ. ನೀನು ಅವಳನ್ನು ಕಂಡು ಗೌಪ್ಯವಾಗಿ ಅವಳಿಗೆ ಈ ಎಲ್ಲ ಸಂಗತಿಯನ್ನು ಬಿಚ್ಚಿ ಹೇಳಿ ಅವಳ ಬಳಿಯಲ್ಲಿ ಯ ಬೆಲೆಯುಳ್ಳ ರತ್ನಾಭರಣಗಳನ್ನೆಲ್ಲ ಮರಳಿ ಪಡೆಯಬೇಕು. ನಿನ್ನ ಮೇಲಿನ ಸಂಕಟನಿವಾರಣಕ್ಕೆಂದು ಅವಳು ಪ್ರಫುಲ್ಲ ಮನಸ್ಸಿನಿಂದ ತನ್ನ ಅಲಂಕಾರ ಗಳನ್ನೆಲ್ಲ ನಿನಗೆ ತಿರುಗಿ ಕೊಡಬಹುದು."

ಕಿಲ್ಡೇಯರ: —"ತಮ್ಮ ಸಲಹೆಯೇನೋ ಯೋಗ್ಯವಾದದ್ದೇ ಸರಿ; ಆದರೆ ನಾನು ಯಾವವುಗಳನ್ನು ಅವಳಿಗೆ ಕಾಣಿಕೆಯೆಂದು ಕೊಟ್ಟಿರುವೆನೋ. ಅವುಗಳನ್ನು ನಾನು ಯಾವ ಮೋರೆಯಿಂದ ಅವಳಿಂದ ತಿರುಗಿ ಇಸಕೊಳ್ಳಲಿ! ನಾನು ಹಾಗೆ ಮಾಡಿದ್ದಾದರೆ, ಅವಳು ನನ್ನನ್ನು ತೀರ ಅಯೋಗ್ಯನೆಂದು ತಿಳಿ ದಾಳು; ಆಕೆಯು ನನ್ನ ವಿಷಯವಾಗಿ ತನ್ನ ಮನಸ್ಸಿನಲ್ಲಿ ಅಶ್ರದ್ಧೆಪಟ್ಟಾಳು. ಅವಳಿಂದ ಅಶ್ರದ್ಧೆಹೊಂದಿದ ನಂತರ ನಾನು ಜೀವಿಸುವದೇತಕ್ಕೆ? ಆದರಿಂದ ನಮ್ಮಿಗಳ ವಿವಾಹ ಸಂಬಂಧವು ಕೂಡ ತಪ್ಪಿ ಹೋದೀತು"

ಬ್ಲೇಕ:— "ಅವಳು ನಿಜವಾಗಿಯೂ ನಿನ್ನನ್ನು ಪ್ರೀತಿಸುವದಾದರೆ ಆಕೆ ಯು ನಿನ್ನ ವಿಷಯದಲ್ಲಿ ಅಸಂತುಷ್ಟಳಾಗಲಾರಳು. ನಿನ್ನೀ ಜೀವನದ ದುರ್ಬಲ ತೆಯ ಬಗ್ಗೆ ಕ್ಷಮಿಸಬಲ್ಲಳು. ಪ್ರೇಮವು ಕೇವಲ ಸಂಪತ್ತಿನ ಸಹಚರವೇನು? ವಿಪತ್ತಿನದೇಕಲ್ಲ?"

"ಅವಳ ರುಚಿ-ಪ್ರವೃತ್ತಿಗಳನ್ನು ನಾನು ಚನ್ನಾಗಿ ಬಲ್ಲೆ. ನನ್ನ ದುರ್ಬಲತೆಯನ್ನು ಅವಳೆಂದೂ ಕ್ಷಮಿಸಲಾರಳು. ಎಲ್ಲ ಸಂಗತಿಯನ್ನು ಕೇಳಿಕೊಂಡ ಬಳಿಕ ಅವಳು ನನ್ನನ್ನು ಕೆಲಸಕ್ಕೆ ಬಾರದವನೆಂದು ಭಾವಿಸಿ ತಿರಸ್ಕರಿಸಬಹುದು; ನನ್ನನ್ನು ಮೋರೆ ಎತ್ತಿ ಕೂಡ ನೋಡಲಿಕ್ಕಿಲ್ಲ. ಅವಳ ತಿರಸ್ಕಾರ-ಅವಹೇಲನೆಗಳನ್ನು ನಾನು ಸಹಿಸಲಾರೆನು. ಬ್ಲೇಕರೇ, ನಾನು ಅವಳೆದುರಿಗೆ ಇದೆಲ್ಲ ಸಂಗತಿಯನ್ನು ಸರ್ವಥಾ ಬಿಚ್ಚಿ ಹೇಳಲಾರೆನು."

"ಹಾಗಾದರೆ ನೀನು ನಿನ್ನ ಸೋದರತ್ತೆಯ ಬಳಿಗೆ ಹೋಗು; ಹಾಗು ಅವಳೆದುರಿಗೆ ಯಾವುದನ್ನೂ ಮರೆಮಾಜದೆ ಸರಲ ಭಾವದಿಂದ ನಿನ್ನ ಸಂಕಟದ ಸಂಗತಿಯನ್ನರುಹು. ಯಾವಳು ಜೀವನಾಂತ್ಯದಲ್ಲಿ ತನ್ನ ಸರ್ವಸ್ವವನ್ನೂ ನಿನಗೆ ಕೊಡಲಿರುವಳೋ, ಅವಳು ನಿನ್ನನ್ನು ಈ ವಿಪತ್ತಿನಿಂದ ಪಾರುಗಾಣಿಸಲಾರಳೆಂದು ಅನಿಸುವದಿಲ್ಲ"

ಅದನ್ನು ಕೇಳಿ ಕಿಲ್ಡೇಯರನು ವ್ಯಗ್ರಭಾವದಿಂದ:—"ಅಲ್ಲ-ಅಲ್ಲ, ಅದರ ಫಲವು ಈಗಿನಗಿಂತಲೂ ಕೆಟ್ಟದ್ದಾಗುವದು. ನನ್ನ ಸಂಗತಿಯನ್ನು ಕೇಳಿ ಅವಳು ಸಿಟ್ಟಿನಿಂದ ಉರಿಯಹತ್ತುವಳು; ಹಾಗು ಆ ಕೂಡಲೆ ಅವಳು ತನ್ನ ಹೊಸ ಮೃತ್ಯುಲೇಖವನ್ನು ಹಂಮೊಗೆದು, ನನ್ನ ಹಿತಕ್ಕೆ ವಿರುದ್ಧವಾದ ಮತ್ತೊಂದು ಮೃತ್ಯುಲೇಖವನ್ನು ಬರೆಯುವಳು. ಅದರಿಂದ ಅವಳು ತೀರಿಕೊಂಡ ಮೇಲೆ ನನಗೊಂದು ಪೇನ್ಸ ಕೂಡ ಅವಳ ಆಸ್ತಿಯಿಂದ ದೊರೆಯುವ ಆಶೆ ಉಳಿಯಲಿಕ್ಕಿಲ್ಲ. ನಾನು ಅವಳ ಸ್ವಭಾವವನ್ನು ಚನ್ನಾಗಿ ಬಲ್ಲೆನು. ಅವಳ ಅನುಗ್ರಹಕ್ಕಾಗಿ ಭಿಕ್ಷೆ ಬೇಡಿದರೆ ನನ್ನ ಎಲ್ಲ ಆಶೆ-ಆಕಾಂಕ್ಷೆಗಳೂ ಲೋಪವಾಗುವವು. ಇಲ್ಲ, ನಾನು ಈ ಕಠಿಣವಾದ ಸಂಕಟದೊಳಗಿಂದ ಪಾರಾಗುವ ಯಾವ ಮಾರ್ಗವೂ ನನಗೆ ದೊರೆಯುವದಿಲ್ಲ. ನನ್ನ ಮೂರ್ಖತನಕ್ಕೆ ಯೋಗ್ಯವಾದ ಶಿಕ್ಷೆಯನ್ನು ನಾನು ಭೋಗಿಸಲೇ ಬೇಕು. ನನ್ನನ್ನು ಸೆರೆಹಿಡಿದೊಯ್ದ ಬಳಿಕ ನನಗೆ ಕಾರಾಗೃಹದ ಶಿಕ್ಷೆಯೇ ಆಗುವುದು. ನಾನು ಯಾವ ಸನ್ಮಾನ್ಯ ರೆಜಿಮೆಂಟಿನಲ್ಲಿ ಸೇರಿಕೊಂಡಿರುವೆನೋ ನನ್ನ ದೋಷದಿಂದಲೇ ಅದರ ಒಳ್ಳೇ ಹೆಸರಿಗೆ ಕಲಂಕ ಹತ್ತುವದು. ಹೀಗೆ ಅಪಮಾನಗೊಂಡ, ಕಲಂಕಹೊಂದಿದ, ಶಿಕ್ಷೆಪಟ್ಟ ನಾನು ನನ್ನ ಜೀವನದ ಸಕಲ ಆಶೆ-ಆಕಾಂಕ್ಷೆಗಳನ್ನು ತೊರೆದು, ಆ ಕಲುಷಿತ ಹಾಗು ತಿರಸ್ಕೃತ ಜೀವನವನ್ನು ಸಾಗಿಸುವದು ಕೇವಲ ವಿಡಂಬನವೇ ಸರಿ. ನನ್ನ ಆಗು-ಹೋಗುಗಳು ಅಂಥವೇ ಆಗಿದ್ದರೆ ಅವಕ್ಕೆ ಯಾರೇನು ಮಾಡುವರು? ಇಲ್ಲ, ಧ್ವಂಸದ ಹಾದಿಯಿಂದ ಹಿಂದಿರುಗಲಿಕ್ಕೆ ಆಸ್ಪದವೇ ಇಲ್ಲ. ಈ ದುಸ್ಸಹ ಚಿಂತೆಯಿಂದ ನಾನು ಬೇಗನೆ

ಹುಚ್ಚನಾಗುವದೇ ನಿಜ." ಹೀಗೆಂದು ಹೇಳಿ ಕಿಲ್ಡೀಯಾರನು ಎರಡೂ ಕೈಗ ಳಿಂದ ತನ್ನ ಮೋರೆ ಮುಚ್ಚಿಕೊಂಡು ಅಳಹತ್ತಿದನು.

ಅವನನ್ನು ಸಮಾಧಾನ ಪಡಿಸಲಿಕ್ಕೆ ತಕ್ಕದಾದ ಯಾವ ಮಾತೂ ಬ್ಲೇಕನಿಗೆ ಸೂಚಿಸಲಿಲ್ಲ; ಆದರೆ ಆ ಹತಭಾಗಿಯ ದುಃಖವು ಅವನ ಕಠಿಣ ವಾದ ಅಂತಃಕರಣದಲ್ಲಿ ಸಂಪೂರ್ಣ ಸಹಾನುಭೂತಿಯನ್ನುಂಟು ಮಾಡಿತು. ಅವನು ಕರುಣಾದೃಷ್ಟಿಯಿಂದ ಕಿಲ್ಡೀಯಾರನ ಮುಖವನ್ನು ನಾಲ್ಕಾರು ನಿಮಿಷಗಳ ವರೆಗೆ ನೋಡಹತ್ತಿದನು. ಆಗ ಅವನು ತನ್ನ ಮನಸ್ಸಿನಲ್ಲೇ ಭಾವಿಸಿದ್ದೇನಂದರೆ :—"ಈತನು ಅಜ್ಞಾನಪೂರ್ವಕವಾಗಿ ಈ ಕಾಯಿದೆಗೆ ವಿರುದ್ಧವಾದ ಕೆಲಸ ಮಾಡಿರುವನು; ಆದರೆ ಇದರಿಂದ ಇವನನ್ನು ಉಳಿಸಿ ಕೊಳ್ಳುವ ಉಪಾಯವೇನು?"

ಏನೇ ಆಗಲಿ ಬ್ಲೇಕನು ಕೊನೆಗೆ ಒಕ್ಕೇ ಧೈರ್ಯವಾಗಿ ಹೇಳಿದನೇ ನಂದರೆ:—"ನೀನು ಆ ಹರಳು ಕಲ್ಲಿನ ವ್ಯಾಪಾರಿಗಳ ಬಾಕಿಯಲ್ಲಿ ಬಹು ಭಾಗ ವನ್ನು ನಾಳೆಯೇ ಕೊಡದಿದ್ದರೆ ಅವರು ಖಂಡಿತವಾಗಿಯೂ ನಿನ್ನ ಬಗ್ಗೆ ವಾರಂಟ ತೆಗೆಸುವರು; ಹಾಗು ನಿನ್ನನ್ನು ಸೆರೆಹಿಡಿಯೊಯ್ಯುವರು. ಆದ್ದರಿಂದ ಅವರ ಬಾಕಿಯೊಳಗಿನ ಬಹು ಭಾಗವನ್ನು ಈ ಅವಧಿಯಲ್ಲಿ ಯಾವ ಉಪಾ ಯದಿಂದಲೂ ನೀನು ಸಂಗ್ರಹಿಸಲಾರೆಯಾ?"

ಕಿಲ್ಡೀಯಾರನು ತನ್ನ ಮೋರೆಯನ್ನೆತ್ತಿ ಕೆಂಪಡದಂತಹ ತನ್ನ ಎರಡೂ ಕಣ್ಣುಗಳನ್ನು ಬ್ಲೇಕನ ಮುಖದ ಕಡೆಗೆ ಹೊರಳಿಸಿ ಸಿಟ್ಟಿನಿಂದ:—"ಯಾವ ಉಪಾಯದಿಂದಲೂ ಅದು ಸಾಧ್ಯವಿಲ್ಲೆಂದು ತಮಗೆ ಈ ಮೊದಲೇ ತಿಳಿಸಿರು ತ್ತೇನೆ. ಜೀವಕ್ಕೆ ಪಣತೊಟ್ಟು ಪ್ರಯತ್ನಿಸಿದರೂ ನಾನು ಅದಾರಿಂದಲೂ ಈಗ ಹತ್ತು ಪೌಂಡು ಸಾಲ ಕೂಡ ದೊರಕಿಸಲಾರೆನು."

ಬ್ಲೇಕ:—"ಕಿಲ್ಡೀಯಾರ, ಕೇಳು. ನಾನು ಪತ್ತೇದಾರಿಕೆಯನ್ನೇನೋ ಮಾಡುತ್ತಿರುತ್ತೇನೆ; ಆದರೆ ಬಹುಶಃ ಎಲ್ಲ ಕಡೆಗೂ ನನಗೆ ಪ್ರತಿಫಲ ದೊರೆ ಯುವದೇ ಕಡಿಮೆ. ಈ ವ್ಯವಸಾಯವು ನನಗಂತೂ ಲಾಭದಾಯಕವಾಗಿಲ್ಲ. ಅದರಿಂದ ನಾನು ಧನಿಕನಾಗಿಲ್ಲ; ಆದರೆ ನಿನ್ನೀ ಶೋಚನೀಯ ಅವಸ್ಥೆ ಕಂಡು ನನ್ನ ಅಂತರಂಗದಲ್ಲಿ ಕಳವಳವುಂಟಾಗಿದೆ. ನಿನ್ನ ಈ ಸಂಕಟಸಮಯದಲ್ಲಿ ಬರೀ ಬಾಯಿ ಸಹಾನುಭೂತಿ ತೋರುವದರಿಂದ ನಿನಗೇನೂ ಪ್ರಯೋಜನವಿಲ್ಲ. ನೀನು ನಾಳೆ ಬೆಳಿಗ್ಗೆ ನನ್ನ ಮನೆಗೆ ಬಂದು ನನ್ನನ್ನು ಅತ್ಯವಶ್ಯವಾಗಿ ಕಾಣು; ಅಂದರೆ ನಾನು ನಿನಗೆ ಶಕ್ಯವಾದಷ್ಟು ಹಣವನ್ನೊದಗಿಸಿ ಕೊಟ್ಟು, ಈ ವಿಪತ್ತಿ ನೊಳಗಿಂದ ನಿನ್ನನ್ನುಳಿಸಲು ಪ್ರಯತ್ನಿಸುವೆನು."

ಕಿಲ್ಡೇಯಾರನಿಗೆ ಥಡ ಕಾಣದ ಸಾಗರದಿಂದ ದಂಡೆಗೆ ತಲುಪಿದಂತಾಯಿತು. ಕೃತಜ್ಞತೆಯಿಂದ ಭಾರವಾದ ಕಂಠದಿಂದ ಅವನು:—"ಬ್ಲೇಕರೇ, ನೀವು ನನ್ನ ಮೃತದೇಹಕ್ಕೆ ಪ್ರಾಣವನ್ನಿತ್ತಿರಿ. ನಿಮ್ಮ ವಿಷಯವಾಗಿ ಹೇಗೆ ಕೃತಜ್ಞತೆ ತೋರಬೇಕೆಂಬದೇ ನನಗೆ ತಿಳಿಯದಾಗಿದೆ."

ಬ್ಲೇಕ:—"ನನಗದರ ಆವಶ್ಯಕತೆಯೇ ಇಲ್ಲ. ವಿಪನ್ನಗ್ರಸ್ತರಿಗೆ ಉಪಕಾರ ಮಾಡುವವೇ ನನಗೆ ಸುಖ; ನಾನೇನು ಹೇಳಿ ಕೇಳಿ ಒಬ್ಬೊಂಟಿಗ. ಸಂಸಾರದಲ್ಲಿ ನನಗೆ ಆರ್ಥಿಕ ಕೊರತೆ ಇಲ್ಲ. ನಾಳೆ ಬೆಳಿಗ್ಗೆ ತಪ್ಪದೆ ಬಾ ಆ!"

ಕಿಲ್ಡೇಯಾರನು ಕೆಲ ನಿಮಿಷಗಳ ವರೆಗೆ ಏನನ್ನೋ ಯೋಚಿಸಿದ ನಂತರ ಒಮ್ಮೆಲೆ ಅತ್ಯಂತ ಗಂಭೀರನಾಗಿ:—"ಆ ಬಗ್ಗೆ ಯೋಚಿಸಲೇ ಬೇಕಾಗಿದೆ. ನೀವು ನನ್ನ ಹಿತಕರ್ತೃಗಳಾದ ಬಂಧುಗಳು. ಆದುದರಿಂದ ನಿಮ್ಮಲ್ಲಿ ಸಾಲ ಪಡೆಯಲು ನನ್ನ ಮನಸ್ಸು ಒಪ್ಪುವದಿಲ್ಲ."

ಬ್ಲೇಕ:—"ನಿನ್ನ ಮನಸ್ಸು ನಿಮಿಷ ಮಾತ್ರದಲ್ಲಿ ಹೊರಳಿತೇಕೆ? ನನ್ನ ಸಾಲ ತೀರಿಸುವ ಬಗ್ಗೆ ನೀನು ತೊಂದರೆಪಡಬೇಕಾಗಿಲ್ಲ. ನಿನಗೆ ಯಾವಾಗ ಅನುಕೂಲವಾದೀತೋ, ಆಗಲೆ ನನ್ನ ಹಣ ನನಗೆ ತಿರುಗಿ ಕೊಡು. ನಾಳೆ ಬೆಳಿಗ್ಗೆ ಸುಮಾರು ಹತ್ತುಗಂಟೆಗೆ ನಾನು ನಿನ್ನ ದಾರಿ ಕಾಯುತ್ತ ಮನೆಯಲ್ಲೇ ಕುಳಿತಿರುತ್ತೇನೆ. ನನ್ನ ಮನೆಯ ಪತ್ತೆಯು ನಿನಗೆ ಜ್ಞಾಪಕವಿದೆಯಷ್ಟೆ?"

ಅಂದು ಬ್ಲೇಕನ ಜೇಬಿನಲ್ಲಿ ಆತನ ಬ್ಯಾಂಕಿನ ಚೆಕ್‌ಬುಕ್ ಇರಲಿಲ್ಲ; ಇದ್ದಿದ್ದರೆ ಆತನು ಆಗಲೆ ಕಿಲ್ಡೇಯಾರನು ರತ್ನಾಭರಣದ ವ್ಯಾಪಾರಿಗೆ ಕೊಡಬೇಕಾಗಿದ್ದ ಎಲ್ಲ ಹಣದ ಬಗ್ಗೆಯೂ ಚೆಕ್ ಕೊಟ್ಟು ಬಿಡುತ್ತಿದ್ದನು.

ಬ್ಲೇಕನು ಹೊರಟು ಹೋದ ಬಳಿಕ ಎಷ್ಟೋ ಹೊತ್ತಿನ ವರೆಗೆ ಕಿಲ್ಡೇಯಾರನು ಅತ್ಯಂತ ಉತ್ತೇಜಿತ ಭಾವದಿಂದ ಆ ಕೋಣೆಯೊಳಗೆ ತಿರುಗಾಡುತ್ತಿದ್ದನು. ಬ್ಲೇಕನು ತನ್ನನ್ನು ಸಂಕಟದಿಂದ ಪಾರು ಮಾಡಲು ತನಗೆ ಹಣ ಕೊಟ್ಟಾನೆಂಬದರ ಕಲ್ಪನೆ ಕೂಡ ಅವನಿಗಿರಲಿಲ್ಲ. ಬ್ಲೇಕನ ಆ ಅಭಿವಚನಕ್ಕಾಗಿ ಆತನು ಅತ್ಯಂತ ಬೆರಗುಗೊಂಡನು.

ಆದರೆ ಬ್ಲೇಕನಂತಹ ಅಕಪಟ ಹಿತೈಷಿ ಸ್ನೇಹಿತನಿಂದ ಸಹಾಯ್ಯ ಪಡೆಯುವದೂ ಕೂಡ ಅವನ ಆತ್ಮಸನ್ಮಾನ-ಅವನ ಆತ್ಮಾಭಿಮಾನಕ್ಕೆ ಒಗ್ಗಲಿಲ್ಲ. ಎಷ್ಟೋ ಹೊತ್ತು ಯೋಚಿಸಿದ ನಂತರ ಅವನು ನಿರ್ಧರಿಸಿದ್ದೇನಂದರೆ:—"ಈ ವಿಪತ್ತಿನೊಳಗಿಂದ ಪಾರಾಗಲಿಕ್ಕೆಂದು ಬ್ಲೇಕನೆದುರಿಗೆ ಕೈಯೊಡ್ಡಲಾಗದು. 'ಹಿತೈಷಿ ಬಂಧುವನ್ನು ತನ್ನ ಸಾವುಕಾರ'ನನ್ನಾಗಿ ಮಾಡಿಕೊಳ್ಳಲಾಗದು." ಹೀಗೆ ಯೋಚಿಸುತ್ತಿರುವಾಗಲೇ ಆತನ ತಲೆಯಲ್ಲೊಂದು ಹೊಸ ಯುಕ್ತಿಯು

ಹೊಳೆಯಿತು. ಅದೊಂದು ಅತಿ ಹೀನವಾದ ಬೇತು. ಇದಿಲಕ್ಷ್ಮಿಯು ಬಡ ಕೊಳ್ಳದಿದ್ದರೆ ಅದಾವ ಸಭ್ಯಗೃಹಸ್ಥನ ತಲೆಯಲ್ಲೂ ಅಂಥ ಹೀನ ವಿಚಾರವು ತಲೆದೋರಲಿಕ್ಕಿಲ್ಲ. ಪಿಶಾಚಿಯು ಆತನನ್ನು ಆಗ ಮರುಳಗೊಳಿಸಿಬಿಟ್ಟಿತು.

ಆಗ ಕಿಲ್ಡೇಯರಾರನು ತನ್ನ ಮನಸ್ಸಿನಲ್ಲೇ:—"ಇದರಲ್ಲಿ ತಪ್ಪೇನು? ಪ್ರಪಂಚದಲ್ಲಿ ಪಾಪ-ಪುಣ್ಯ ಇವುಗಳೆಲ್ಲ ಬರೀ ಮಾತಿನಲ್ಲೇ. ಪಾಪವು ಬೈಲಿಗೆ ಬಿದ್ದರೇ ಅದಕ್ಕೆ ಪಾಪವೆನ್ನುವರು. ಈ ಭೂಮಂಡಲದಲ್ಲಿ ಪಾಪ ಮಾಡದವ ರಾರು? ಪಾಪ ಮಾಡುತ್ತಿರುವ, ಆದರೆ ಅದರ ಪತ್ತೆ ಹತ್ತದಂಥ ಮಹಾ ಪಾಪಿ ಷ್ಠರು ಸಮಾಜದಲ್ಲಿ ಸನ್ಮಾನಿತರೂ ಗೌರವಸ್ಥರೂ ಪ್ರತಿಷ್ಠಿತರೂ ಎಂದಿರುವರ ಲ್ಲವೆ? ನಾನಾದರೂ ಆ ಕೆಲಸ ಮಾಡಿದರೆ ಸಿಕ್ಕಬೀಳುವ ಸಂಭವವೆಲ್ಲಿದೆ? ಅವರ ಮನೆಯ ಎಲ್ಲ ಭಾಗಗಳೂ ನನಗೆ ಚೆನ್ನಾಗಿ ಗೊತ್ತಿವೆ. ರತ್ನಾಭರಣಗಳು ಯಾವ ಭಾಗದಲ್ಲಿ, ಯಾವ ಕೋಣೆಯಲ್ಲಿ, ಯಾವ ಟ್ರಂಕಿನಲ್ಲಿರುತ್ತವೆಂಬದು ಕೂಡ ನನಗೆ ಪಕ್ಕಾ ಗೊತ್ತಿದೆ. ನಾನು ತೀರ ಸಹಜವಾಗಿ ಅವುಗಳನ್ನೆಲ್ಲ ಎತ್ತಿ ಬಡೆಯ ಬಲ್ಲೆನು. ಅವುಗಳನ್ನು ಒತ್ತಿ ಹಾಕಿದರೆ, ಬೇಕಾದ ಸಾವುಕಾರನು ನನಗೆ ಬೇಕಿರುವಷ್ಟು ಹಣವನ್ನು ಸಹಜವಾಗಿ ಕೊಡುವನು. ಆ ಹಣವನ್ನು ನಾನು ಆ್ಯಸಾ-ಲಿಬರ್ನ ಕಂಪನಿಯವರ ಸಾಲಕ್ಕೆ ಕೊಟ್ಟರೆ ಅವರ ಸಾಲ ತೀರಿ ಹೋಗುವದು. ಅದಾವನೂ ನನ್ನನ್ನು ಕಳ್ಳನೆಂದು ಸಂದೇಹಗೊಳ್ಳಲಾರನು. ಆ ಕಳವು ಯಾವನೊಬ್ಬ ಪಕ್ಕಾ ಕಳ್ಳನಿಂದಲೇ ಆಗಿರುತ್ತದೆಂದು ಎಲ್ಲರೂ ನಂಬುವರು. ಅಹುದು; ನಾನು ಇದೇ ಮಾರ್ಗವನ್ನು ಹಿಡಿಯಬೇಕು."

---

## ಈ ರಾಸ್ಕಲ್ಲನು ಇಂಥ ದುಃಸಾಹಸ ಮಾಡಿದನೆ?

ಅಂದು ರಾತ್ರಿ ನೇಭಿಲ್ ಹರಕೋರ್ಟನು ತನ್ನ ಭೇಯಾರ ಸ್ಟ್ರೀಟಿನೊಳ ಗಿನ ಮನೆಯಿಂದ ಯಾವಾಗ ಹೊರಬಿದ್ದನೋ ಆಗ ಸುಮಾರು ಹನ್ನೊಂದು ಗಂಟೆಯಾಗಿತ್ತು. ದಟ್ಟವಾದ ಮಂಜು ನಾಲ್ಕೂ ಕಡೆಗೆ ಆವರಿಸಿದ್ದಿತು. ಲಂಡನ್ನಿನ ಪಿಕಾಡೇಲಿನ ತುದಿಗೆ ಹಾಯಿಡ್ ಪಾರ್ಕಿನ ಕೂಟಿನಲ್ಲೊಂದು ಕ್ಲಬ್ಬಿದ್ದಿತು. ಹರಕೋರ್ಟನು ಕಾಲು ನಡಿಗೆಯಿಂದಲೇ ಆ ಕ್ಲಬ್ಬಿನ ಕಡೆಗೆ ಸಾಗಿದನು. ಅವನ ಮೈಮೇಲೆ ರಾತ್ರಿಯ ಉಡುಪಿದ್ದಿತು. ಆಗ ಆತನ ಮನಸ್ಸು ಅತ್ಯಂತ ಪ್ರಫುಲ್ಲವಾಗಿದ್ದಿತು. ಮನಸ್ಸಿನ ಆನಂದವನ್ನು ಮನಸ್ಸಿ ನಲ್ಲಿ ಅಡಗಿಸಿಕೊಳ್ಳಲಾರದೆ ಆತನು ನಡುನಡುವೆ ಶಿಳ್ಳು ಹಾಕಿ ಹೊರಹೊರಡಿ ಸುತ್ತಿದ್ದನು; ಹಾಗು ಆಗಾಗ್ಗೆ ಮನದಲ್ಲೇ ನಗುತ್ತಿದ್ದನು.

ನೇಭಿಲ ಹರಕೋರ್ಟನು ಅತ್ಯಂತ ನಿಷ್ಠೂರ. ಯಾರ ಮೇಲಾದರೂ

ಯಾವುದೊಂದು ಕಾರಣದಿಂದ ಆತ ಸಿಟ್ಟಾದರೆ ಅವನ್ನು ಮುಂದೆ ಎಂದೂ ಮರೆ ಯುವ ಹಾಗು ಕ್ಷಮಿಸದಂತಹ ಪ್ರಕೃತಿಯವನದು. ಅವನಂತಹ ಅನುದಾರ, ಕಪಟಿ, ಡಾಂಭಿಕ, ಕುತ್ಸಿತನಾದ ಪ್ರಾಣಿಯು ಸಚರಾಚರ ಪ್ರಾಣಿಗಳಲ್ಲಿ ಇನ್ನಾರೂ ದೊರೆಕುತ್ತಿರಲಿಲ್ಲ. ಆತನು ತನ್ನ ಪ್ರಣಯದ ವೈರಿಯಾದ ಬ್ರಾವುನ್ ಕಿಲ್ಡೇಯಾರನನ್ನು ಸರ್ವನಾಶ ಪಡಿಸಲೋಸುಗ ವಿಧವಿಧದಿಂದ ಪ್ರಯತ್ನ ಪಡುತ್ತಲಿದ್ದನು. ತನ್ನ ಆಶೆಯು ಈಡೇರಲಿಕ್ಕಿನ್ನು ಹೆಚ್ಚು ಅವ ಕಾಶ ಹಿಡಿಯಲಿಕ್ಕಿಲ್ಲೆಂದು ಇಷ್ಟು ದಿನಗಳ ನಂತರ ಅವನಿಗೀಗ ತಿಳಿಯಿತು. ಕಿಲ್ಡೇಯಾರನು ಯಾವ ಬಗೆಯಿಂದ ಅತ್ಯಂತ ಲಾಂಛಿತನಾಗುವನೋ ಹಾಗು ಕಲಂಕಿತನಾಗುವನೋ ಅದರಿಂದ ಅವನಿನ್ನು ಸಮಾಜದಲ್ಲಿ ಮೋರೆ ಕೂಡ ತೋರದಂತಾಗುವನು. ಆತನ ಜೀವನದ ಎಲ್ಲ ಆಶೆ-ಸುಖ-ಶಾಂತಿ ಗಳು ನಷ್ಟವಾಗುವವು. ತಿರಸ್ಕೃತವಾದ ಆ ಜೀವನದಲ್ಲಿ ಆತನು ಅತಿ ಕಷ್ಟ ದಿಂದ ಜೀವಿಸಿರುವನು, ಅಥವಾ ಕ್ಷೋಭ, ದುಃಖ, ಮರ್ಮವೇದನೆ ಇವು ಗಳಿಂದ ಆತ್ಮಹತ್ಯೆ ಮಾಡಿಕೊಂಡು, ಎಲ್ಲ ಕಷ್ಟಗಳೊಳಗಿಂದ ಮುಕ್ತಿ ಪಡೆಯು ವನು. ಅವನು ಕಿಲ್ಡೇಯಾರನ ಹಿತಕರ್ತೃವೆಂದಾಗಿ ಅವನನ್ನು ಜೂಜಿನ ಅಡ್ಡೆಗೊಯ್ದು ಅವನಿಗೆ ಜೂಜಾಡುವ ಚಟವನ್ನು ಹಚ್ಚಿದ್ದನು. ಜೂಜಿ ನ ಮೋಹದಿಂದ ಮಬ್ಬಿಗೆ ಕೆಡವಿ ಅವನ ಸರ್ವಸ್ವವನ್ನೂ ಹಾಳು ಮಾಡಿಸಿ ದ್ದನು. ಸಾ-ಲಿಬರ್ನ ಕಂಪನಿಯವರಿಂದ ಕಿಲ್ಡೇಯಾರನಿಗೆ ರತ್ನಾಭರಣ ಗಳನ್ನು ಸಾಲ ಕೊಡಿಸಿ, ಆ ಎಲ್ಲ ಅಲಂಕಾರಗಳನ್ನು ಬೇರೆಯವರಲ್ಲಿ ಒತ್ತೀ ಇಡಿಸಿ, ಜೂಜಿಗಾಗಿ ಹಣ ದೊರಕಿಸುವ ಸಹಜ ಉಪಾಯವನ್ನು ಆತನಿಗೆ ಹೇಳಿಕೊಟ್ಟವನೇ ಈ ಹರಕೋರ್ಟನು! ಹರಕೋರ್ಟನು ಹಿತಕರ್ತೃವೆಂತಾಗಿ ದಿನಾಲು ಆ ಸಂಸಾರಜ್ಞಾನಶೂನ್ಯನೂ ಸರಲಚರಿತ್ರನೂ ಆದ ಕಿಲ್ಡೇಯಾರ ಯುವಕನನ್ನು ಶೋಚನೀಯ ಅಧಃಪತನದ ಕೊನೆಯ ಮೆಟ್ಟಲಿಗೊಯ್ದು ತಲುಪಿಸಿದ್ದನು. ಸಾ-ಲಿಬರ್ನ ಕಂಪನಿಯವರು ನಾಳೆ ಬೆಳಿಗ್ಗೇ ವಾರಂಟು ತೆಗೆ ಯಿಸಿ ಕಿಲ್ಡೇಯಾರನನ್ನು ಸೆರೆಹಿಡಿಸುವರೆಂಬದು ಈತನಿಗೆ ಯಾವಾಗ ತಿಳಿ ಯಿತೋ ಹಾಗು ಆ ಪೇಚಿನೊಳಗಿಂದ ಪಾರಾಗಲಿಕ್ಕೆ ಆ ಯುವಕನಿಗೆ ಅನ್ಯ ಮಾರ್ಗವಾವುದೂ ಇಲ್ಲೆಂಬದು ಗೊತ್ತಾಯಿತೋ ಆಗ ಈತನು ಉಲ್ಲಾಸ ದಿಂದ ಮನಸ್ಸಿನಲ್ಲೇ:—"ಇಂದಿಗೆ ನನ್ನ ಪ್ರಯತ್ನಗಳು ಫಲಿಸಿದಂತಾದವು; ನನ್ನ ಆಕಾಂಕ್ಷೆಗಳು ಈಡೇರಿದಂತಾದವು. ಪ್ರತಿಹಿಂಸೆಯನ್ನು ಕುರಿತು ವ್ಯವ ಹರಿಸುತ್ತಿರುವಾಗ ಇಂದಿನಷ್ಟು ಆನಂದವನ್ನು ನಾನೆಂದೂ ಹೊಂದಿರಲಿಲ್ಲ."

ನೇಭಿಲ ಹರಕೋರ್ಟನು ತನ್ನ ಕ್ಲಬ್ಬಿಗೆ ನಡೆದಿರುವಾಗಲೇ ದಾರಿಯಲ್ಲಿ

ಅಸ್ಪುಟವಾಗಿ:—"ಇವನ ಕೈಯಲ್ಲೊಂದು ಪೇನ್ಸು ಕೂಡ ಇಲ್ಲೆಂಬದು ನನಗೆ ಗೊತ್ತಿದೆ. ಯಾರಿಂದಲೂ ಈತನು ಕೈಗಡ-ಸಾಲ ಪಡೆಯುವ ಆಶೆ ಇಲ್ಲ. ಈ ಸ್ಥಿತಿಯಲ್ಲಿ ಆ ರತ್ನದ ವ್ಯಾಪಾರಿಯ ಸಾಲವನ್ನು ಇವನೆಂತು ತೀರಿಸುವನು? ಆದರಿಂದ ಈತನನ್ನು ನಾಳೆ ಖಂಡಿತವಾಗಿಯೂ ಸೆರೆ ಹಿಡಿಯುವರು. ಆ ಮೇಲೆ ಕ್ರಿಮಿನಲ್ ಕೇಸಾಗಿ ಇವನು ಜೇಲಿಗೇ ಹೋಗಬೇಕು! ಈತನಿಗೆ ಜೇಲಿನ ಶಿಕ್ಷೆಯಾಗಲಿ-ಆಗದಿರಲಿ, ಇವನನ್ನು ಸೆರೆ ಹಿಡಿಯೊಡನೆಯೇ ಈತನ ಹೆಸರಿಗೆ ಕಲಂಕವು ಹತ್ತಿಹೋಗುವದು. ಇವನು ಡಾಫನಿಯನ್ನು ಲಗ್ನವಾಗುವ ಆಶೆಯನ್ನು ಬಿಡಲೇ ಬೇಕು. ಇವನ ಈ ಕಲಂಕದಿಂದ ಈತನ ರೆಜಿಮೆಂಟಿನ ಚಾಕರಿಯಂತೂ ಹೋಗೇಹೋಗುವದು; ಅಲ್ಲದೆ ಇವನ ಸೋದರತ್ತೆಯು ಈ ಗುಣಧರ ಸೋದರಳಿಯನ ಅವಗುಣಗಳನ್ನು ತಿಳಿದು ಇವನನ್ನು ತನ್ನ ಸಂಪತ್ತಿನ ಉತ್ತರಾಧಿಕಾರಕ್ಕೆ ವಂಚಿತನನ್ನಾಗ ಮಾಡುವಳು ಇವನು ನಾಚಿಕೆಯಿಂದಲೂ ಅವಮಾನದಿಂದಲೂ ದೇಶಾಂತರಕ್ಕೆ ಹೋಗಿ ಅಜ್ಞಾತ ಅಪರಿಚಿತ ಸಮಾಜದಲ್ಲಿ ಮೋರೆಯಡಗಿಸಿಕೊಳ್ಳಬೇಕು. ಎಂಥ ಮೋಜದು! ಆ ಬಳಿಕ ನಾನು ಡಾಫನೀ ಸುಂದರಿಯನ್ನು ವರಿಸುವ ಬಗ್ಗೆ ಪ್ರಯತ್ನಿಸುವೆನು. ಆ ನನ್ನ ಪ್ರಯತ್ನವು ಫಲಿಸಲಾರದೇ? ಈ ರಾಸ್ಕಲನು ಎಲ್ಲಿಂದಲೋ ಓಡಿ ಬಂದು ನನಗೆ ವಿಘ್ನವಾಗಿದ್ದನು! ಅವನು ನನ್ನ ಬಾಯಿ ತುತ್ತನ್ನೇ ಕಿತ್ತುಕೊಳ್ಳಲು ಪ್ರಯತ್ನಿಸಿದ್ದನಲ್ಲವೆ? ಎಂಥ ಸ್ಪರ್ಧೆಯಿದು! ಎಂಥ ಕರ್ಮವೋ ಅಂಥವೇ ಫಲವು!"

ಹರಕೋರ್ಟನು ಅತ್ತಿತ್ತ ನೋಡದೆ ಆತ್ಮಚಿಂತೆಯಲ್ಲಿ ಸಂಪೂರ್ಣ ಮಗ್ನನಾಗಿ ಸಾಗಿದ್ದನು. ಆತನು ಒಮ್ಮೆಲೆ ಆ ಕಡೆಯ ಫೂಟಪಾಥದಕಡೆಗೆ ಕಣ್ಣೆತ್ತಿ ನೋಡಿ ಮೈ ಮರೆದನು. ಆತನ ಚಿಂತಾಪ್ರವಾಹಕ್ಕೆ ಒಮ್ಮೆಲೆ ತಡೆಯುಂಟಾಯಿತು. ಬ್ರಾವುನ್ ಕಿಲ್ಡೇಯಾರನು ಅನ್ಯಮನಸ್ಕನಾಗಿ ಆ ಕಡೆಯ ಫೂಟಪಾಥದಲ್ಲಿ ನಡೆದಿರುವನೆಂಬದನ್ನು ಈತನು ಕಂಡನು. ಉಜ್ವಲ ದೀಪ ಪ್ರಕಾಶದಲ್ಲಿ ನೋಡಲಾಗಿ, ಅಲ್ಲಿ ಹೋಗುತ್ತಿರುವವನು ಕಿಲ್ಡೇಯಾರನೆ ಎಂಬದು ಇವರಿಗೆ ಖಾತ್ರಿಯಾಯಿತು. ಇವನು ಅವನನ್ನು ಗುರ್ತಿಸಿದನು; ಆದರೆ ಆತ ಈತನ ಕಡೆಗೆ ನೋಡಲೂ ಇಲ್ಲ, ಈತನನ್ನು ಗುರ್ತಿಸಲೂ ಇಲ್ಲ. ಆದರಿಂದ ಹರಕೋರ್ಟನು ಒತ್ತಟ್ಟಿಗೆ ಸರಿದು ಒಂದು ಮನೆಯ ಹಿಂಬದಿಯಲ್ಲಿ ಅಡಗಿಕೊಂಡನು; ಹಾಗು ಅಲ್ಲಿ ನಿಂತುಕೊಂಡೇ ಕಿಲ್ಡೇಯಾರನು ಯಾವ ಕಡೆಗೆ ಹೊರಟಿರುವನೆಂಬದನ್ನು ತೀಕ್ಷ್ಣದೃಷ್ಟಿಯಿಂದ ನೋಡಹತ್ತಿದನು.

ಆಗ ಹರಕೋರ್ಟನು ತನ್ನ ಮನಸ್ಸಿನಲ್ಲೇ:—"ಎಂಥ ಆಶ್ಚರ್ಯವಿದು! ಇಷ್ಟು ಸರಿ ರಾತ್ರಿಯಲ್ಲಿ ಕಿಲ್ಡೇಯಾರನು ಮಾಸಿದ ಉಡುಪಿನಿಂದ ಅದೇಕೆ

ಕ್ರುಕ್‌ಸ್ಟ್ರೀಟಿನ ಕಡೆಗೆ ಹೊರಟಿರುವನು? ಈತನ ಉದ್ದೇಶವನ್ನು ತಿಳಿಯದೇ ಬಿಡುವಂತಿಲ್ಲ. ಆದ್ದರಿಂದ ನಾನೀಗ ನನ್ನ ಬೇರೆ ಎಲ್ಲ ಕೆಲಸಗಳನ್ನು ಬದಿಗೊತ್ತಿ ಈತನನ್ನೇ ಅನುಸರಿಸುವೆನು."

ಕಿಲ್ಡೇಯಾರನು ತನ್ನಾ ಹಿತೈಷಿ ಬಂಧುವನ್ನು ನೋಡಲೇ ಇಲ್ಲ. ಆತನು ಬೇರೆ ಯಾವ ಕಡೆಗೂ ನೋಡದೆ ತನ್ನ ದುರಭಿಪ್ರಾಯವು ಯಾವ ಬಗೆಯಾಗಿ ಸಿದ್ಧಿಸುವದೋ, ರತ್ನಾಭರಣಗಳನ್ನು ಅಪಹರಿಸಿ ಬೇರೆ ಯಾರಿಗೂ ಕಾಣದ ಹಾಗೆ ಲಾರ್ಡ ಮೆಕಿಂಡೇಲನ ಮೇಲುಪ್ಪರಿಗೆಯಿಂದ ಹೇಗೆ ಹೊರಬೀಳಬೇಕೊ ಎಂಬದನ್ನೇ ಯೋಚಿಸುತ್ತ-ಯೋಚಿಸುತ್ತ ಚಂಚಲ ಮನಸ್ಸಿನಿಂದ ತಾನು ಹೋಗತಕ್ಕ ಮಾರ್ಗವನ್ನು ತುಳಿಯುತ್ತಿದ್ದನು. ಹರಕೋರ್ಟನು ಆತನನ್ನು ಅನುಸರಿಸುತ್ತ ತನ್ನ ಮನದಲ್ಲೇ:—ಈತನ ಉದ್ದೇ ವು ಒಳ್ಳೆಯದೆಂದು ತೋರುವದಿಲ್ಲ. ಈತನು ಒಮ್ಮೆಲೆ ದಿಗ್ಭ್ರಾಂತನಂತಾಗಿದ್ದಾನೆ. ಈ ಅವಸ್ಥೆಯಲ್ಲಿ ಹಣ ಸಂಗ್ರಹಿಸುವದಕ್ಕೆ ಬೇರೆ ಉಪಾಯಗಾಣದೆ, ಇವನು ಬಹುಶಃ ಎಲ್ಲಿಗೋ ಕಳವಿಗೆಂದು ಹೊರಟಿರಬಹುದಾಗಿದೆ. ನೋಡೋಣ, ಈತನ ಗುರಿಯಾವದರೂ ಎಲ್ಲಿಯವರೆಗೆಂಬದನ್ನು? ಈತನನ್ನು ನನ್ನ ನಜರಿನ ಆಚೆಗೆ ಹೋಗಗೊಡಬಾರದು."

ಲಾರ್ಡ ಮೆಕಿಂಡೇಲನ ವಿಸ್ತೀರ್ಣವಾದ ಕಟ್ಟಡದ ಹಿಂಬದಿಯಲ್ಲಿ ಐದಾರು ಗುಂಟೆಗಳ ಪ್ರವೇಶದಲ್ಲಿ ಸುಂದರವಾದ ಉದ್ಯಾನವನವಿದ್ದಿತು. ಆ ಉಪವನದಲ್ಲಿ ನಾನಾ ಬಗೆಯ ಹೂ-ಹಣ್ಣುಗಳ ಗಿಡಗಳಿದ್ದವು. ಆ ಉದ್ಯಾನವನವು ಮೇಲುಪ್ಪರಿಗೆಯ ಕಿಟಕಿಗೆ ಹೊಂದಿದ್ದಿತು. ಕತ್ತಲೆ ಬಿದ್ದನಂತರ ಆ ಕಡೆಗೆ ಯಾರೂ ಸುಳಿದಾಡುತ್ತಿರಲಿಲ್ಲ. ರಾತ್ರಿ ಹನ್ನೊಂದರ ನಂತರ ಕಿಲ್ಡೇಯಾರನು ಆ ನಿರ್ಜನ ಉದ್ಯಾನದಲ್ಲಿ ಪ್ರವೇಶಿಸಿ, ಸಪ್ಪಳವಾಗದ ಹಾಗೆ ನಡೆಯುತ್ತ ಮೇಲಂತಸ್ತಿನ ಕೆಳಗಡೆಗೆ ಹೋದನು. ಅವನು ತನ್ನ ತಲೆಯ ಮೇಲಿನ ಟೊಪ್ಪಿಗೆಯನ್ನು ಹುಬ್ಬುಗಳ ವರೆಗೂ ಜಗ್ಗಿಕೊಂಡು ಕೋಟಿನ ಕಾಲರನ್ನು ಬಿಚ್ಚಿ ಅದನ್ನು ಕಿವಿಯ ವರೆಗೆ ಎಳೆದುಕೊಂಡು ತನ್ನ ಮುಖದ ಬಹು ಭಾಗವನ್ನು ಮುಚ್ಚಿಬಿಟ್ಟನು. ಆತನ ಜೇಬಿನಲ್ಲೊಂದು ಪಿಸ್ತೂಲಿದ್ದಿತು; ಆದರೆ ಅದನ್ನು ಉಪಯೋಗಿಸಿಕೊಳ್ಳುವ ಇಚ್ಛೆಯು ಅವನಿಗಿರಲಿಲ್ಲ.

ಆ ಕಟ್ಟಡದ ಹಿಂಬದಿಗೆ ಎತ್ತರವಾದ ಗೋಡೆ. ಆ ಗೋಡೆಗೆ ಹೊಂದಿದ್ದ ಗಿಡವೊಂದು ನೆಲದಿಂದ ಆ ಗೋಡೆಯ ಮೇಲ್ಬದಿಯ ವರೆಗೂ ಹತ್ತಿಕೊಂಡಿದ್ದಿತು. ಅದರಿಂದ ಅವನಿಗೆ ಆ ಗಿಡದ ಸಹಾಯದಿಂದ ಗೋಡೆಯನ್ನೇರಿ ಅಲ್ಲಿಂದ ಮೇಲುಪ್ಪರಿಗೆಯ ಕಿಟಕಿಯನ್ನೇರಲಿಕ್ಕೆ ತೊಂದರೆಯಾಗಲಿಲ್ಲ.

ಆಗ ಭೋಜನಶಾಲೆಯಲ್ಲಿ ಕತ್ತಲು ಗವಿಸಿತ್ತು. ಭೋಜನ ಶಾಲೆಯ ಕಿಟಕಿಯ ಎದುರಿಗೇ ಒಂದು ಲತಾಕುಂಜವಿದ್ದಿತು. ಅದನ್ನು ಹಿಡಿದು ಮೇಲಕ್ಕೇರಿ ಕಿಟಕಿಯ ಮೇಲ್ಬದಿಯ ಒಳಗಿನ ಬೆಣೆಯನ್ನು ತನ್ನ ಜೇಬಿನೊಳಗಿನ ಚೂರಿಯಿಂದ ಸರಿಸಿದನು. ಕೂಡಲೆ ಆ ಕವವು ತೆರೆಯಲ್ಪಟ್ಟಿತು. ಆಗ ಆತ ನಿಶ್ಶಬ್ದದಿಂದ ಆ ಕಿಟಕಿಯ ಮೂಲಕ ಭೋಜನಶಾಲೆಗೆ ತಲುಪಿದನು. ಆ ಭೋಜನ ಶಾಲೆಯು ಈತನಿಗೆ ವಿಶೇಷ ಪರಿಚಿತವಾಗಿದ್ದಿತು. ಅವನ ಮನಸ್ಸಿನ ಸಂಕಲ್ಪವು ಸ್ಥಿರವಿದ್ದರೂ ಆತನು ಆ ಚೌರ್ಯ ಕರ್ಮದಲ್ಲಿ ಕೇವಲ ಹೊಸಬನು. ಅದರಿಂದ ಆತನ ಎದೆಯು ಡವ ಡವ ಎಂದು ಹಾರ ಹತ್ತಿತು. ಆದರೂ ಆತನು ಕೃತಸಂಕಲ್ಪದಿಂದ ಪರಾವೃತ್ತನಾಗಲಿಲ್ಲ;

ಕಿಲ್ಡೇರಿಯರನು ಆ ಭೋಜನಶಾಲೆಯೊಳಗಿಂದ ಕತ್ತಲಲ್ಲೇ ನಡೆದು ನಡು ಮನೆಗೆ ಹೋದನು. ಆ ಪ್ರಶಸ್ತವಾದ ನಡುಮನೆಯಲ್ಲಿ ಕೆಲ ಯಾರ್ಡು ನಡೆದು ಹೋದರೆ ಮೇಲಂತಸ್ತನ್ನೇರುವ ಮೆಟ್ಟಲುಗಳಿದ್ದವು. ಆತನು ಮೆಲ್ಲ ಮೆಲ್ಲನೆ ಆ ಸುಂಗಮರವರೀ ಕಲ್ಲಿನ ಪಾವಟಿಗೆಗಳ ಬಳಿಗೆ ಬಂದು ನಿಂತನು. ತಾನು ಈ ಪಾವಟಿಗೆಗಳ ಮೂಲಕ ಈ ನೊವಲೆಸ್ಕ್ರೀ ನಾರಿ ಈ ಅಟ್ಟವನ್ನು ಹತ್ತಿರುತ್ತೇನೆಂದು ಅವನು ಮನಸ್ಸಿನಲ್ಲೇ ಅಂದುಕೊಂಡನು. ಆಗ ಲಾರ್ಡ ಮತ್ತು ಲೇಡೀ ಮೆಂಡೇಲರ ಆದರ, ಶಿಷ್ಟಾಚಾರ, ಉಪಚಾರಗಳೂ ಡಾಫನಿಯ ಸರಲತಾಪೂರ್ಣ ಸಪ್ರೇಮ ಸಂಭಾಷಣವೂ ಆತನಿಗೆ ನೆನಪಾದವು. 'ಎಲೋ, ಇಂದು ಇನೆಂಥ ತ್ಯಾಜ್ಯ ಕೆಲಸಕ್ಕೆ ತೊಡಗಿರುವೆ?' ಎಂದಂದು ಒಂದು ಕ್ಷಣವೇ ವಿವೇಕವು ಸುತೀವ್ರನಾಗಿ ಆತನ ಎದೆಯನ್ನು ಹಿಡಿದು ಹಿಂಡಿದಂತಾಯಿತು. ಅದರಿಂದ ಆತನಿಗೆ ವೇವನೆಗಳಾಗಿ ವಿಹ್ವಲನಾದನು; ಆದರೆ ಪಿಶಾಚಿಯು ಆ ಕೂಡಲೆ ಆತನನ್ನು ಉತ್ಸಾಹಿತಗೊಳಿಸಿತು. ಅದರಿಂದ ಅವನು ಮನಸ್ಸಿನಲ್ಲಿ:—'ಆ ಅಲಂಕಾರಗಳನ್ನು ನಾನು ಪಡೆಯಲೇ ಬೇಕು; ಅವುಗಳಿಲ್ಲವೆ ನನ್ನನ್ನು ರಕ್ಷಿಸಿಕೊಳ್ಳಲು ಬೇರೆ ಉಪಾಯವೇ ಇಲ್ಲ. ಧ್ವಂಸದ ಹಾದಿಯನ್ನು ಹಿಡಿದಿರುವ ನಾನು ಇನ್ನು ನಾಚಿಕೊಂಡರೆ ಫಲವೇನು? ಒಂದು ವೇಳೆ ನಾನು ಈ ಕಳವಿನಲ್ಲಿ ಸಿಕ್ಕು ಬಿದ್ದರೆ ನನ್ನ ಅವಸ್ಥೆಯು ಹೆಚ್ಚೇನು ಕೆಡಬೇಕಾಗಿದೆ? ನಾಳೆ ಆ ಸಾ ಲಿಬರ್ನ ಕಂಪನಿಯ ಸಾಲವನ್ನು ಕೊಡಲಾಗದಿದ್ದರೆ ಲಾಂಛನೆ ಮತ್ತು ಕೈದಿನ ಶಿಕ್ಷೆ ಇವುಗಳಿಂದ ನನ್ನ ಬಿಡುಗಡೆಯು ಹೇಗೂ ಆಗುವಂತಿಲ್ಲ."

ಆ ಪಾವಟಿಗೆಗಳಿಗೆ ಸಮೀಪದಲ್ಲೇ ಮನೆಯ ಕಾವಲುಗಾರನ ನಿವಾಸ ಸ್ಥಳ; ಅದರ ಮತ್ತೊಂದು ದಿಕ್ಕಿಗೆ ವಾಚನಾಲಯ. ವಾಚನಾಲಯದ ಒಂದು

ಬಾಗಿಲವು ನಡುಮನೆಯ ಕಡೆಗೆ ತೆರೆಯಲ್ಪಟ್ಟಿತ್ತು. ವಾಚನಾಲಯದಲ್ಲಿ ಉಜ್ವಲವಾದ ವಿದ್ಯುದ್ದೀಪವು ಉರಿಯುತ್ತಿತ್ತು. ಲಾರ್ಡ ಮೆಸಿಂಡೇಲನು ಆಗಲೂ ವಾಚನಾಲಯದಲ್ಲಿ ಕುಳಿತು ತನ್ನ ವಾಚನವನ್ನು ನಡೆಸಿದ್ದನು. ವಾಚನಾಲಯಕ್ಕೆ ಸಮೀಪದಲ್ಲೇ ದೇವರ ಕೋಣೆ. ಆಗಲೂ ಆ ದೇವರ ಕೋಣೆ ಯೊಳಗಿಂದ ಮಧುರ ಸಂಗೀತದ ಮೃದು ಲಹರಿಗಳು ವಾಯುತರಂಗಗಳೊ ಡನೆ ಕೂಡಿ ಬರುತ್ತಿದ್ದವು. ಆ ಕಂಠಸ್ವರವು ಕಿಲ್ಡೇಯಾರನಿಗೆ ಸುಪರಿಚಿತವಾ ದದ್ದು. ಆ ಸಂಗೀತವನ್ನು ಅವನು ಆ ಕೋಣೆಯಲ್ಲಿ ಕುಳಿತು ಎಷ್ಟೋ ಸಾರೆ ಕೇಳಿಕೊಂಡಿದ್ದನು. ಆದರೂ ಅದು ಹಳೆಯದಾಗಿರಲಿಲ್ಲ. ಕಿಲ್ಡೇಯಾರನು ಅಂಜಿಕೆಯಿಂದ ಒಮ್ಮೆ ನಾಲ್ಕೂ ಕಡೆಗೆ ಹೊರಳಿ ನೋಡಿದನು. ಅನುತಾಪಾ ಗ್ನಿಯು ಆತನ ಹೃದಯದಲ್ಲಿ ಉರಿಯಹತ್ತಿತು. ಅವನು ಆಗ ಮನಸ್ಸಿನಲ್ಲೇ: 'ನಾನೆಂಥ ಪಶುವು? ಇಷ್ಟು ವಿಶ್ವಾಸಘಾತ, ಇಂಥ ಕುಕರ್ಮಗಳನ್ನು ಮನುಷ್ಯ ನಾದವನು ಮಾಡಬಹುದೇ? ನನ್ನ ಸರ್ವ ನಾಶವಾದರೂ ಚಿಂತೆ ಇಲ್ಲ; ನಾನೀ ಕೆಲಸವನ್ನು ಮಾಡಲಾರೆನು."

ಆದರೆ ಇಷ್ಟು ಮುಂದರಿದು ಬಂದು ನಿಷ್ಫಲ ಮನೋರಥನಾಗಿ ಮತ್ತೆ ಹಿಂದಿರುಗಿ ಹೋಗುವ ಪ್ರವೃತ್ತಿಯು ಅವನಿಗಾಗಲಿಲ್ಲ. ಅವನಿಗೆ ಜ್ಞಾಪಕ ವಾಯಿತೇನಂದರೆ:—"ಡಾಫನಿಯ ಮಲಗುವ ಕೋಣೆಯಲ್ಲಿ ವಿರಾಜಿಸುತ್ತಿ ರುವ ಮೇಜಿನ ಮೇಲೆ ಕೆಂಪು ತೊಗಲಿನ ಬ್ಯಾಗಿನೊಳಗೆ ರತ್ನಾಭರಣಗಳು ಇಟ್ಟಿರಿಸಲ್ಪಟ್ಟಿವೆ. ಆ ಕೋಣೆಗೆ ಕೀಲೀ ಹಾಕಿರುವದಿಲ್ಲ." ಕಿಲ್ಡೇಯಾರನು ಮತ್ತೆ ಯೋಚಿಸುತ್ತ ನಿಲ್ಲದೆ ಅಟ್ಟದ ಪಾವಟಿಗೆಗಳನ್ನೇರಿದನು; ಹಾಗು ಆ ಕೋಣೆಯನ್ನು ಹೊಕ್ಕು ಡಾಫನಿಗೆ ತಾನು ಕೊಟ್ಟಿದ್ದ ವಜ್ರ-ವೈಢೂರ್ಯಗಳ ಕಾಣಿಕೆಯ ವಸ್ತುಗಳನ್ನು ಅಂದರೆ ಉಂಗುರ, ಈಅರಿಂಗ್ಸು, ಬ್ರೆಸಲೆಟ್, ಕ್ರೂಚ್, ವಜ್ರ ಮತ್ತು ರುಬಿಗಳಿಂದ ಯುಕ್ತವಾದ ಒಂದು ಬಹುಮೂಲ್ಯ ವಾಚ ಇವೆಲ್ಲವುಗಳನ್ನು ತಕ್ಕೊಂಡು ತನ್ನ ಜೇಬಿಗೆ ಸೇರಿಸಿದನು. ಆ ಕೂಡಲೆ ಅಲ್ಲಿದ್ದ ಚೀಟಿಗಳ ಒಂದು ಗಂಟು ಅವನ ದೃಷ್ಟಿಗೆ ಬಿತ್ತು. ಆ ಚೀಟಿಗಳೆಲ್ಲವೂ ರೇಶ್ಮೆಯ ದಾರದಿಂದ ಬಿಗಿಯಲ್ಪಟ್ಟಿದ್ದವು. ಅವುಗಳೆಲ್ಲ ತಾನು ಡಾಫನಿಗೆ ಕಳಿಸಿದ್ದ ಪ್ರಣಯ ಪತ್ರಗಳಾಗಿದ್ದವು. ಪತ್ರಗಳನ್ನು ನೋಡುತ್ತಲೇ ಆತನ ಎದೆಯು ನಡುಗಹತ್ತಿತು. ಅವನು ಜಡತ್ವ ಹೊಂದಿ ಅಲ್ಲಿಯೇ ನಿಂತುಬಿಟ್ಟನು. ಬಳಿಕ ನಿಟ್ಟುಸಿರುಗರೆದು ಅಸ್ಫುಟವಾಗಿ:—"ಹಾಯ! ಹಾಯ! ನಾನಿಲ್ಲಿಗೇಕೆ ಬಂದೆನು? ಈ ಬಗೆಯ ದುರ್ಗತಿಯು ನನಗೇಕುಂಟಾಯಿತು? ಈ ಕಳವನ್ನು ನಾನೇ ಮಾಡಿರುತ್ತೇನೆಂಬದು ಅವಳಿಗೆ ತಿಳಿದರೆ, ಆಗ ಆಕೆಗೇನೆನಿಸೀತು?...."

ಅಷ್ಟರಲ್ಲಿ ಅವನ ಹಿಂಬದಿಗೆ ವಸ್ತ್ರಮೇಲಿನ ಉಡುಪಿನ ಧಸ್ಸ-ಫಸ್ಸ ಎಂದಾದ ಶಬ್ದವನ್ನು ಕೇಳಿ ಅವನು ಬಾಗಿಲ ಕಡೆಗೆ ಹಿಂದಿರುಗಿ ನೋಡಿದನು. ಆ ಕೋಣೆಯ ಒಂದು ಮೂಲೆಯಲ್ಲೊಂದು ದೀಪವು ಮಿಣಕು ಮಿಣಕಾಗಿ ಉರಿಯುತ್ತಿತ್ತು. ಕಿಲ್ಡೀಯಾರನು ಆ ಮಂದಪ್ರಕಾಶದಲ್ಲಿ ಏನು ಕಂಡನೋ ಅದರಿಂದ ಅವನ ಶ್ವಾಸವೇ ಕಟ್ಟಾಗಹತ್ತಿತು. ಆಗ ಆತನ ಪ್ರಿಯತಮೆಯು-ಡಾಫನಿಯು ಆ ಕೋಣೆಯನ್ನು ಪ್ರವೇಶಿಸುತ್ತಿದ್ದಳು. ಬ್ರಾವುನನು ಆ ಮೊದಲು ಅವಳ ಕಾಲ ಶಬ್ದವನ್ನು ಕೇಳಿರಲಿಲ್ಲ. ಅವಳ ಗಾಯನವೂ ಪಿಯಾನೋದ ಧ್ವನಿಯೂ ಯಾವಾಗ ನಿಂತವೆಂಬದರ ಕಡೆಗೂ ಅವನ ಲಕ್ಷ್ಯವಿರಲಿಲ್ಲ. ಅವನು ಬಿರು ಗಾಳಿಗೆ ಸಿಕ್ಕ ಬಾಳೇ ಎಲೆಯಂತೆ ನಡುಗಹತ್ತಿದನು; ಆದರೆ ಈಗ ಆತ್ಮರಕ್ಷ ಣೆಗೆ ತೊಡಗದಿದ್ದರೆ ಬೇರೆ ಉಪಾಯವೇ ಇಲ್ಲೆಂದು ತಿಳಿದು, ಲಗುಬಗನೆ ತನ್ನ ಜೇಬಿನೊಳಗಿನ ಪಿಸ್ತೂಲನ್ನು ಹೊರತೆಗೆದು ಡಾಫನಿಯ ತಲೆಗೆ ಗುರಿ ಹಿಡಿ ದನು; ಹಾಗು ಅದರೊಡನೆಯೇ ವಿಕೃತ ಸ್ವರದಲ್ಲಿ:—"ಏನಾದರೂ ಒದರಾಡಿ-ಚೀರಾಡಿದರೆ ನಿನಗೆ ಪ್ರಾಣ ಸಂಕಟವೇ ಎಂದು ತಿಳಿ" ಎಂದಂದನು.

ಡಾಫನಿಯ ಸೊಂಡೆಯು ಒಣಗಿ ಹೋಯಿತು; ಆದರೂ ಅವಳು ಅಂಜಿದ ಯಾವ ಲಕ್ಷಣವನ್ನೂ ತೋರ್ಪಡಿಸದೆ, ಮತ್ತೆ ಒಂದೆರಡು ಹೆಜ್ಜೆ ಮುಂದೆಯೇ ಬಂದಳು; ಹಾಗು ಆ ಮೇಲೆ ಮೆಲ್ಲನೆ:—"ನೀನು ನನ್ನ ಆಭರಣ ಗಳನ್ನು ಕಳವು ಮಾಡಿರುವೆ. ಅವುಗಳನ್ನು ಹಿಂದಿರುಗಿ ಕೊಡದಿದ್ದರೆ ನೀನು ಇಲ್ಲಿಂದ ಹೊರಗೆ ಹೋಗಲಾರೆ."

ಅದಕ್ಕೆ ಕಿಲ್ಡೀಯಾರನು ಅಸ್ಫುಟವಾಗಿ:—"ಮಿಸ್, ಅದಾಗದು! ನಾನು ಏನೇನು ತಕ್ಕೊಂಡಿರುವೆನೋ ಅವಾವನ್ನೂ ತಿರುಗಿ ಕೊಡಲಾರೆನು" ಎಂದು ವಿಕೃತ ಸ್ವರದಲ್ಲೇ ಮತ್ತೆ ಹೇಳಿದನು.

ಡಾಫನಿ:—"ತಿರುಗಿ ಕೊಡುವದಿಲ್ಲವೆ? ಕಳವು ಮಾಡುತ್ತಿರುವದನ್ನು ಹಿಡಿದಿದ್ದರೂ ಹೀಗೆಂದು ಹೇಳುವ ಧೈರ್ಯವೇ? ನನ್ನ ಅಲಂಕಾರಗಳನ್ನು ಕದ್ದು, ನಿರ್ವಿಘ್ನದಿಂದ ಓಡಿಹೋಗಬಹುದೆಂದು ತಿಳಿದಿದ್ದೆಯೇನು?"

ಕಿಲ್ಡೆ:—ಆದರೆ ನನ್ನನ್ನು ನಿರ್ವಿಘ್ನವಾಗಿ ಹೋಗಗೊಡುವವೇ ನಿನಗೆ ಮಂಗಲಕರವು. ನೀನು ಬೇಗನೆ ನನ್ನೆದುರಿನಿಂದ ಹಿಂದಕ್ಕೆ ಸರಿ; ನನಗೆ ದಾರಿ ಬಿಡು."

ಡಾಫನಿ:—"ಇಲ್ಲ; ನಾನು ಖಂಡಿತವಾಗಿಯೂ ಸರಿಯಲಾರೆ. ಮೊದ-ಲು ನನ್ನ ಆಭರಣಗಳನ್ನೆಲ್ಲ ಹೊರಗೆ ತೆಗೆದಿಡು. ಇಲ್ಲದಿದ್ದರೆ ನಾನು........" ಎಂದಂದು, ಡಾಫನಿಯು ಮತ್ತೇನನ್ನೂ ಮಾತಾಡಲಾರದೆ ಕಲ್ಲಿನಂತೆ ಸುಮ್ಮನೆ

ನಿಂತುಬಿಟ್ಟಳು. ಅವಳು ಆ ಅಸ್ಪಷ್ಟವಾದ ಬೆಳಕಿನಲ್ಲಿ ಕಳ್ಳನ ಮೋರೆಯ ಕಡೆಗೆ ನೋಡಿ ಬೆವೆತು ಹೋದಳು. ಡಾಫನಿಯು ತನ್ನನ್ನು ಗುರತಿಸಲೇ ಇಲ್ಲವೆಂದು ಬ್ರಾವುನನು ತಿಳಿದನು. ಅವಳು ತನ್ನ ಕೈಯೊಳಗಿನ ಪಿಸ್ತೂಲನ್ನು ಕಂಡು ಗಾಬರಿಗೊಂಡು ಸುಮ್ಮನೆ ನಿಂತುಬಿಟ್ಟಳೆಂದೇ ಅವನು ತರ್ಕಿಸಿದನು; ಆದರೆ ಇವೆಲ್ಲ ನಿಜವಿರಲಿಲ್ಲ. ಡಾಫನಿಯು ಮೊಟ್ಟಮೊದಲು ಆತನನ್ನು ಗುರ್ತಿಸಲಿಲ್ಲವೇನೋ ನಿಜ; ಆದರೆ ಆಕೆಯು ಯಾವಾಗ ಆತನನ್ನು ಗುರ್ತಿಸಿದಳೋ ಆಗಲೆ ಅವಳ ವಾಣಿಯು ಕಟ್ಟಾಯಿತು.

ಬಳಿಕ ಕಿಲ್ಡೇಯಾರನು ದೃಢಸ್ವರದಿಂದ:—"ಸರಿದು ನಿಂತುಕೋ. ನಿನಗೆ ಕೊಂಚವೂ ಅನಿಷ್ಟ ಬಗೆಯಬೇಕೆಂದು ನನ್ನಿಚ್ಛೆಯಿಲ್ಲ."

ಅದನ್ನು ಕೇಳಿ ಡಾಫನಿಯು ಅಸ್ಫುಟವಾದ ಆರ್ತನಾದ ಮಾಡಿ ಒಂದೆರಡು ಹೆಜ್ಜೆ ಹಿಂಜರಿದಳು.

ಅವಳು ಇನ್ನು ಕೂಗಿ ಜನರನ್ನು ನೆರೆಯಿಸುವಳೆಂದು ಬಗೆದ ಕಿಲ್ಡೇಯಾರನು ಪಿಸ್ತೂಲನ್ನು ಜೇಬಿನಲ್ಲಿಟ್ಟುಕೊಂಡು ಒಮ್ಮೆಲೆ ಡಾಫನಿಯ ಬಳಿಗೆ ಹಾರಿ ಅವಳ ಬಾಯಿಯನ್ನು ಒತ್ತಿ ಹಿಡಿದನು. ಕೂಡಲೆ ಡಾಫನಿಯು ಮೂರ್ಛೆ ಹೊಂದಿ ಆವನ ಮೈಮೇಲೆಯೇ ಬಿದ್ದಳು. ಅವನು ಅವಳನ್ನು ಪಕ್ಕದಲ್ಲಿದ್ದ ಬೆಂಚಿನ ಮೇಲೆ ಮಲಗಿಸಹೋದನು. ಆಗ ಡಾಫನಿಯ ದೇಹವು ಅವನ ಕೈಯಿಂದ ಜಾರಿ ದಪ್ಪ ಎಂದು ಕೆಳಗಿನ ಹಾಸುಗಲ್ಲಿನ ಮೇಲೆ ಬಿದ್ದುಬಿಟ್ಟಿತು!

ಕಿಲ್ಡೇಯಾರನು ಆ ಸಪ್ಪಳವನ್ನು ಕೇಳಿ ಗಾಬರಿಗೊಂಡು:—ಎಂಥ ವಿಪತ್ತಿದು! ಈ ಸಪ್ಪಳವು ಕೆಳಗಿನ ಜನರಿಗೆ ಕೇಳಿಸಿರಬಹುದಲ್ಲವೆ? ಅಂಜಿಕೆಯಿಂದ ಆತನ ಮೋರೆಯು ಕಪ್ಪಿಟ್ಟಿತು. ಓಡಿಹೋಗಲಿಕ್ಕೆಂದು ಆತನು ಅತ್ಯಂತ ವ್ಯಗ್ರನಾದನು; ಆದರೆ ಆತನು ಯಾವ ದಾರಿಯಿಂದ ಬಂದಿದ್ದನೋ, ಅದೇ ದಾರಿಯಿಂದ ಹಿಂದಿರುಗಿ ಹೋಗಲಿಕ್ಕೆ ಸಾಹಸಪಡಲಿಲ್ಲ. ಅವನು ಆ ರತ್ನಾಭರಣಗಳನ್ನು ಜೇಬಿನಲ್ಲಿರಿಸಿಕೊಂಡು ಕಿಟಕಿಯ ಬಾಗಿಲು ತೆರೆದನು; ಹಾಗು ಅದರ ಸಲಾಕೆಗಳ ಮೇಲಿಂದ ಬದಿಯ ಆ ಲತಾಕುಂಜದ ಯಾವದೊಂದು ಹರಿಯನ್ನು ಹಿಡಿದು ಬಹು ಕಷ್ಟದಿಂದ ಕೆಳಗಿಳಿದು ಬಂದನು. ಆ ಬಳಿಕ ಆ ಎತ್ತರವಾದ ಗೋಡೆಯ ಮೇಲಿಂದ ಗಿಡಕ್ಕೆ ಇಳಿದು ಅಲ್ಲಿಂದ ಉಪವನಕ್ಕೆ ತಲುಪಿದನು. ಅವನು ಆ ಉದ್ಯಾನವನದೊಳಗಿಂದ ಲಗುಬಗನೆ ಹೊರಗೆ ಹೋಗಲು ಮುಂದಾದನು. ಅಷ್ಟರಲ್ಲೊಂದು ದೀರ್ಘ ದೇಹದ ಮನುಷ್ಯಾಕೃತಿಯು ಆತನೆದುರಿಗೆ ಬಂದು, ಒಮ್ಮೆಲೆ ಇವನ ದಾರಿಯನ್ನು ಕಟ್ಟು ಮಾಡಿಕೊಂಡು ನಿಂತಿತು. ಅದರಿಂದ ಇವನಿಂದ ಬೇಗನೆ ಆ ಉಪ

ವನವನ್ನು ದಾಟಿ ಹೋಗಲಾಗಲಿಲ್ಲ. ಆಗಂತುಕ ವ್ಯಕ್ತಿಯು ಅಕಸ್ಮಾತ್ತಾಗಿ ಕಿಲ್ಡೇಯಾರನ ಮೋರೆಗೆ ಬಹು ಬಲವಾಗಿ ಗುದ್ದಿದನು. ಆ ಅತರ್ಕಿತ ಆಕ್ರಮಣದಿಂದ ಕಿಲ್ಡೇಯಾರನ ತಲೆಯು ತಿರುಗಹತ್ತಿತು. ಅವನು ತನ್ನ ಜೋಲಿ ಸಂಬಾಳಿಸಿಕೊಳ್ಳಲಾರದೆ ಒಮ್ಮೆಲೆ ನೆಲಕ್ಕೆ ಬಿದ್ದುಬಿಟ್ಟನು; ಹಾಗು ಹಿಂಬದಿಯ ಒಂದು ಮರದ ಬೊಡ್ಡಿಗೆ ಅವನ ತಲೆಯು ಬಡೆಯಿತು. ಆ ಪೆಟ್ಟಿನಿಂದ ಕಿಲ್ಡೇಯಾರನಿಗೆ ಬವಳಿಯೇ ಬಂದು ಬಿಟ್ಟಿತು!

ಆ ಪರಿಸ್ಥಿತಿಯಲ್ಲಿ ಬ್ರಾವುನ್ ಕಿಲ್ಡೇಯಾರನ ಮೇಲೆ ಏರಿ ಹೋದವನು ಅವನ ಹಿತಕರ್ತೃ ಬಂಧುವಾದ ನೇಭಿಲ ಹರಕೋರ್ಟನೇ ಎಂಬದನ್ನು ನಮ್ಮ ವಾಚಕರಿಗೆ ಬಿಚ್ಚಿ ಹೇಳುವ ಅವಶ್ಯಕತೆ ಇಲ್ಲ. ಆತನು ಆ ಉದ್ಯಾನದ ವರೆಗೂ ಕಿಲ್ಡೇಯಾರನನ್ನನುಸರಿಸಿ ಬಂದು, ಕಿಲ್ಡೇಯಾರನು ಒಳಗೆ ಮನೆಯನ್ನು ಪ್ರವೇಶಿಸಿದ ಬಳಿಕ ಅವನು ಆ ಉಪವನದಲ್ಲೇ ಒತ್ತಟ್ಟಿಗಿದ್ದ ಒಂದು ಕಟ್ಟಿಗೆಯ ಬೆಂಚಿನ ಮೇಲೆ ಕುಳಿತು, ಕಿಲ್ಡೇಯಾರನು ಮರಳಿ ಬರುವ ಮಾರ್ಗವನ್ನು ನಿರೀಕ್ಷಿಸುತ್ತಿದ್ದನು. ಕಿಲ್ಡೇಯಾರನು ಹಾಗೆ ಸಂಜ್ಞಾಹೀನನಾಗಿ ಬಿದ್ದುದನ್ನು ಕಂಡು ಇವನು ಅವನ ದೇಹದ ಮೇಲೆ ಬಿದ್ದು ಅವನ ಜೇಬಿನೊಳಗೆ ಕೈ ಹಾಕಿದನು; ಹಾಗು ಆತನು ಕದ್ದು ತಂದಿದ್ದ ರತ್ನಾಲಂಕಾರಗಳನ್ನೆಲ್ಲ ಕಿತ್ತುಕೊಂಡನು. ಆ ಮೇಲೆ ಅವನು ಅವುಗಳನ್ನು ತನ್ನ ಜೇಬಿಗೆ ಹಾಕಿಕೊಂಡು ಒತ್ತರದಿಂದ ಓಡಿ ಆ ಉಪವನವನ್ನು ದಾಟಿ ಹೋದನು. ದಾರಿಯಲ್ಲಿ ಯಾವ ಮನುಷ್ಯರೂ ಅವನಿಗೆ ಭೇಟಿಯಾಗಲಿಲ್ಲ. ಅವನು ಪಿಕಾಡೇಲಿನ ಸಮೀಪಕ್ಕೆ ಬಂದು ಒಂದು ದೀರ್ಘವಾದ ಉಸಿರುಗರೆದನು; ಹಾಗು ತನ್ನ ಮನಸ್ಸಿನ ಆನಂದವನ್ನು ಮನಸ್ಸಿನಲ್ಲೇ ಈ ರೀತಿಯಾಗಿ ಹೇಳಿಕೊಂಡನು: "ಈ ರಾಸ್ಕಲ್ಲನು ಇಂಥ ದುಸ್ಸಾಹಸ ಮಾಡಿಯಾನೆಂಬದನ್ನು ಮೊದಲು ನಾನು ಅರಿತಿರಲಿಲ್ಲ. ನಾನು ಇಂದು ಅದಾವ ಶುಭ ಮುಹೂರ್ತದಲ್ಲಿ ಅವನನ್ನು ಹಿಂಬಾಲಿಸಿ ಹೋದೆನೊ! ಆತನು ಇಷ್ಟರಲ್ಲಿ ಖಂಡಿತವಾಗಿಯೂ ಹಿಡಿಯಲ್ಪಟ್ಟಿರಬಹುದು. ಆತನಿಗದಾವ ದುರ್ಗತಿಯಾಗುವದೆಂಬದು ನಾಳೆಯೇ ತಿಳಿಯುವದು. ನಾನು ಆತನನ್ನು ಕಲಂಕಿತನನ್ನಾಗ ಮಾಡಬೇಕೆಂದು ಪ್ರಯತ್ನಿಸಿದ್ದೆನು; ಆದರೆ ಆ ಹತಭಾಗಿಯು ಅವಮಾನವನ್ನು ತಪ್ಪಿಸಿಕೊಳ್ಳುವ ಪ್ರಯತ್ನಕ್ಕೆ ತೊಡಗಿ, ತಾನಾಗಿಯೇ ಜೇಲಿನ ದಾರಿ ಹಿಡಿದಿರುವನು. ಎಷ್ಟು ಆನಂದ! ಎಷ್ಟು ಸಂತೋಷ! ದೇವರೇ ನನಗೆ ಬೆಂಬಲನಾಗಿರುವನು."

---

## ಟಾಯಗರದೊಡನೆ ನನ್ನನ್ನನುಸರಿಸು.

ಬ್ರಾವುನ್ ಕಿಲ್ಡೇಯಾರನ ತಲೆಗೆ ಹಿಂಬದಿಯ ಗಿಡದ ಬೊಡ್ಡೆ ತಾಕಿ ಅವನು ಮೂರ್ಛಿತಾಳಿದ್ದರೂ ಅವನ ತಲೆಗೆ ಅಷ್ಟು ಬಲವಾಗಿ ಪೆಟ್ಟಾಗಿರಲಿಲ್ಲ. ಶೀತಲವಾದ ವಾಯುವನ್ನು ಅರ್ಧ ಗಂಟೆಯ ವರೆಗೆ ಬಡಿಸಿಕೊಂಡ ಬಳಿಕ ಅವನಿಗೆ ಚೇತನೆಯುಂಟಾಯಿತು. ಆಗ ಅವನಿಗೆ ಮೆಲ್ಲ ಮೆಲ್ಲನೆ ಆ ಮೊದಲು ನಡೆದ ಸಂಗತಿಯೆಲ್ಲವೂ ಜ್ಞಾಪಕಕ್ಕೆ ಬಂತು. ಇನ್ನು ತಾನೇನು ಮಾಡಬೇಕೆಂಬದನ್ನು ನಿರ್ಧರಿಸುವ ಮೊದಲೇ ಸಮೀಪದಲ್ಲಿ ಹಲವು ಜನರ ಕಂಠಸ್ವರವೂ ಕಾಲ ಸಪ್ಪಳವೂ ಅವನಿಗೆ ಕೇಳಬಂದಿತು. ತನ್ನನ್ನು ಎಲ್ಲಿ ಪ್ರತಿಬಂಧಿಸುವರೋ ಎಂಬ ಸಂದೇಹದಿಂದ ಆತನ ಸರ್ವಾಂಗವೂ ನಡುಗಹತ್ತಿತು.

ಡಾಫನಿ ಭಾರನನ್ನಳು ಸ್ವಲ್ಪ ವೇಳೆ ಮೂರ್ಛೆಹೊಂದಿ ಬಿದ್ದನಂತರ ವೈ ಮೇಲೆ ಎಚ್ಚರ ಹುಟ್ಟಿ ಮೆಲ್ಲ ಮೆಲ್ಲನೆ ಎದ್ದು ತನ್ನ ತಂದೆಯ ಬಳಿಗೆ ಹೋದಳು. ಆಗಲೂ ಆತನು ವಾಚನಾಲಯದಲ್ಲೇ ಕುಳಿತು ಓದುತ್ತಿದ್ದನು. ಆತನಿಗೆ ಮಗಳಿಂದ ಕಳವಿನ ಸಂಗತಿಯು ತಿಳಿಯಲು, ಅವನು ಕ್ರೋಧದಿಂದಲೂ ಕ್ಷೋಭದಿಂದಲೂ ಸಂತಪ್ತನಾದನು; ಹಾಗು ಆ ಕೂಡಲೆ ಇಬ್ಬರು ಪೋಲೀಸರನ್ನು ಕರೆಯಿಸಿ, ಅವರನ್ನು ಜೊತೆಗೆ ಕರೆದುಕೊಂಡು, ತನ್ನ ಮನೆಯ ಆಳುಗಳೊಡನೆ ಕಳ್ಳರ ಪತ್ತೆಗೆಂದು ವ್ಯಸ್ತನಾಗಿ ಉಪವನದಲ್ಲಿ ಪ್ರವೇಶಿಸಿದನು. ಪ್ರತಿಯೊಬ್ಬ ಆಳಿನ ಕೈಯಲ್ಲೂ ಒಂದೊಂದು ಲಾಂದರ. ಆ ಲಾಂದರಗಳ ಉಜ್ವಲವಾದ ಬೆಳಕಿನಿಂದ ಗಿಡಬಳ್ಳಿಗಳಿಂದ ಯುಕ್ತವಾದ ಆ ಉಪವನದ ಕತ್ತಲುಪ್ರದೇಶವಲ್ಲಿ ಬಹು ದೂರದ ವರೆಗೂ ಪ್ರಕಾಶ ಬಿದ್ದಿತು ಕಳ್ಳನು ಉಪವನದೊಳಗಿಂದಲೇ ಓಡಿ ಹೋಗಿರುವನೆಂದು ಲಾರ್ಡ ಮೋಸಿಂಡೇಲನು ತಿಳಿದಿದ್ದನು.

ಸಮೀಪದಲ್ಲೇ ಬಹು ಜನರ ಕೋಲಾಹಲ ಮತ್ತು ಕಾಲಸಪ್ಪಳವನ್ನು ಕೇಳಿದ್ದ ಕಿಲ್ಡೇಯಾರನು ತನ್ನ ಮನದಲ್ಲೇ "ದೇವರು ಎಂಥ ಕಡುವಿಪತ್ತಿಗೀಡು ಮಾಡಿದನಲ್ಲ! ನಾನು ಒಂದು ವೇಳೆ ಇಲ್ಲಿ ಹಿಡಿಯಲ್ಪಟ್ಟರೆ ತೀರಿಯೇ ಹೋಯಿತು. ನಾನು ಖಂಡಿತವಾಗಿಯೂ ದೀರ್ಘಕಾಲದವರೆಗೆ ಜೇಲಿನ ಶಿಕ್ಷೆ ಹೊಂದಬೇಕಾಗುತ್ತದೆ. ಕಲಂಕ, ಲಾಂಛನಗಳ ಬಗ್ಗೆಯಂತೂ ಮಾತೇ ತೆಗೆಯುವಂತಿಲ್ಲ. ದೇವಾ, ಜಗನ್ನಾಯಕಾ! ದೀನ ಬಂಧೋ! ನೀನೇ ಈ ಪ್ರಸಂಗದಲ್ಲಿ ನನ್ನನ್ನು ರಕ್ಷಿಸುವವನು."

ಮನುಷ್ಯನು ಯಾವಾಗ ಕೆಟ್ಟ ಕೆಲಸಗಳಿಗೆ ಪ್ರವೃತ್ತನಾಗುವನೋ ಆಗ ದೇವರ ನಾಮವು ಒಮ್ಮೆ ಕೂಡ ಆತನ ಬಾಯಿಂದ ಹೊರಡುವದಿಲ್ಲ; ಆದರೆ

ಆ ಪಾಪಕೃತ್ಯದಲ್ಲಿ ಸಿಕ್ಕು ಬೀಳುವ ಪ್ರಸಂಗ ಒದಗಿದಾಗ ಮಾತ್ರ ಗದಗದನೆ ನಡುಗುತ್ತ ಅವನನ್ನು ಪ್ರಾರ್ಥಿಸಹತ್ತುತ್ತಾನೆ. ಮಾನವ ಚರಿತ್ರದಲ್ಲಿ ಇದೊಂದು ವಿಶೇಷ ಆದ್ಭುತವು. ತಾನೀಗ ಓಡತೊಡಗಿದರೆ ಖಂಡಿತವಾಗಿಯೂ ಹಿಡಿಯಲ್ಪಡುವೆನೆಂದು ಕಿಲ್ಡೇಯಾರನಿಗೆ ತಿಳಿಯಿತು; ಅಲ್ಲದೆ ಈ ಉಪವನದ ಹೊರಗಡೆಯಲ್ಲೂ ಪಹರೆಯವರನ್ನು ನಿಯಮಿಸಿರಬಹುದು. ಹೀಗಿದ್ದರೂ ತಾನೇನೂ ಪ್ರಯತ್ನಿಸದೆ ಅವರ ಕೈಗೆ ಸಿಕ್ಕು ಬೀಳಬೇಕೆಂದು ಅವನಿಗನಿಸಲಿಲ್ಲ. ಬಿದ್ದಲ್ಲಿಂದ ತಾನು ಎದ್ದು ನಿಂತರೆ ಎಲ್ಲಿ ಬೇರೆಯವರ ಕಣ್ಣಿಗೆ ಬೀಳುವೆನೋ ಎಂಬ ಅಂಜಿಕೆಯಿಂದ ಎದ್ದೇಳದೆ, ಹಾಗೆಯೇ ಹೊರಳಾಡುತ್ತ ಸರಿದಾಡುತ್ತ ಗಿಡ-ಮರಗಳ ಕೆಳಗಡೆಯಲ್ಲೇ ಹಿಂದೆ ಹಿಂದಕ್ಕೆ ಸರಿಯಹತ್ತಿದನು; ಆದರೆ ಕರ್ಮಫಲವು ತಪ್ಪಿದ್ದಲ್ಲ. ಆತನು ಕೆಲ ಗಜ ದೂರ ಸರಿದನೋ ಇಲ್ಲವೋ ಅಷ್ಟರಲ್ಲೇ ಅವನನ್ನು ಒಬ್ಬ ಪೋಲೀಸನು ಕಂಡನು. ಇವನನ್ನು ದೃಷ್ಟಿಸಿದ್ದೊಂದೇ ತಡ, ಆ ಪೋಲೀಸನು ಓಡಿ ಬಂದವನೇ ಇವನ ಮೈಮೇಲೆಯೇ ಬಿದ್ದನು; ಹಾಗು ನಿಮಿಷಾರ್ಧದಲ್ಲಿ ಇವನನ್ನು ಆಕ್ರಮಿಸಿಯೇ ಬಿಟ್ಟನು! ಕಿಲ್ಡೇಯಾರನು ಆತ್ಮರಕ್ಷಣೆಗೆ ಬೇರೆ ಉಪಾಯವನ್ನೇ ಕಾಣದಾಗಲು, ಆ ಪೋಲೀಸನ ಕೈಯೊಳಗಿಂದ ಪಾರಾಗಲಿಕ್ಕೆಂದು ಆತನ ಕೆನ್ನೆಗೊಮ್ಮೆ ಚನ್ನಾಗಿ ಏಟು ಕೊಟ್ಟನು; ಆದರೆ ಆ ಪೋಲೀಸನು ಆತನಿಂಡ ಹಾಗೆ ಪೆಟ್ಟುತಿಂದರೂ ಕೂಡ ತನ್ನ ಕೈಯೊಳಗಿನ ಬೇಟೆಯನ್ನು ಬಿಡಲಿಲ್ಲ; ಅವನು ತನ್ನ ಎರಡೂ ಕೈಗಳಿಂದ ಕಿಲ್ಡೇಯಾರನನ್ನು ಬಿಗಿದು ಹಿಡಿದನು. ತಾನೇ ಶಿಫಾರಸು ಪಡೆಯಲೋಸುಗ ಆ ಪೋಲೀಸನು ಆಗ ಬೇರೆ ಯಾರನ್ನೂ ಕರೆಯಲಿಲ್ಲ. ತಾವಿಬ್ಬರೇ ಬಡಿದಾಡುತ್ತಾಡುತ್ತ ನೆಲಕ್ಕೆ ಬಿದ್ದರು.

ಮಣ್ಣಲ್ಲಿ ಬಿದ್ದು ಕೆಲ ಹೊತ್ತು ಗುದ್ದಾಡಿದ ಮೇಲೆ ಕಿಲ್ಡೇಯಾರನು ಪೋಲೀಸನ ಹಿಡಿತದಿಂದ ಪಾರಾಗಿ ಊರ್ಧ್ವಶ್ವಾಸದಿಂದ ಓಡಹತ್ತಿದನು. ಅವನು ಬಹು ಕಷ್ಟದಿಂದ ಆ ಉಪವನವನ್ನು ದಾಟಿ ಬಂದು ಹೊರಗಿನ ಕಾರ್ಗತ್ತಲೆಯಲ್ಲಿ ಎತ್ತ ಮಾಯವಾದನೋ ಅದನ್ನು ಯಾರೂ ಕಂಡುಹಿಡಿಯದಾದರು. ಕೆಲ ಹೊತ್ತಿನ ಮೇಲೆ ಕಿಲ್ಡೇಯಾರನು ಬಹು ದೂರದಲ್ಲಿ ವಿದ್ಯುದ್ದೀಪಗಳಿಂದ ಬೆಳಗುತ್ತಿದ್ದ ರಾಜಬೀದಿಗೆ ಬಂದು ತುಸ ಶಾಂತನಾದನು. ಆಗ ಆತನು ತನ್ನ ಮನಸ್ಸಿನಲ್ಲೇ:—"ನಾನು ಕಳವು ಮಾಡಿಕೊಂಡು ಬಂದ ಮೇಲೆ ಆ ಉದ್ಯಾನವನದಲ್ಲಿ ನನ್ನನ್ನು ಒಮ್ಮೆಲೆ ಆಕ್ರಮಿಸಿದ್ದನಲ್ಲಾ, ಆತನಾರು? ಅಲ್ಲಿಗೆ ಈ ಮಧ್ಯರಾತ್ರಿಯಲ್ಲಿ ಅವನೇತಕ್ಕೆಂದು ಬಂದಿದ್ದನು? ಅವನೇನು ಲಾರ್ಡ ಮೆಕಿಂಡೇಲನ ಯಾವನೊಬ್ಬ ಪರಿಚಾರಕನೇ?

ನನಗಂತೂ ಹಾಗೆಂದೆನಿಸುವದಿಲ್ಲ. ಹೇಗಾದರೇನು, ಅವನೂ ನನ್ನಂತೆಯೇ ಕಳ್ಳತನಕ್ಕೆ ಬಂದಿದ್ದನೆ? ... ಹೀಗೆಂದವನೇ ಕಿಲ್ಡೀಯಾರನು ಒಮ್ಮೆಲೆ ತನ್ನ ಜೇಬಿಗೆ ಕೈಯಿಕ್ಕಿದನು. ಅದು ತೀರ ಬರಿದಾಗಿದ್ದಿತು. ಅವನು ನಡುಗುವ ಕೈಗಳಿಂದ ತನ್ನ ಪ್ರತಿಯೊಂದು ಜೇಬನ್ನು ಮೂರು ಮೂರು ಸಾರೆ ಹುಡುಕಿದನು. ಯಾವ ಜೇಬಿನಲ್ಲೂ ಒಂದೂ ಅಲಂಕಾರ ಸಿಗಲಿಲ್ಲ. ಅವನು ವ್ಯಾಕುಲ ಭಾವದಿಂದ, ಕುಗ್ಗಿದ ದನಿಯಿಂದ ತನ್ನಷ್ಟಕ್ಕೇ:—"ಎಲ್ಲವೂ ಹಾಳಾಯಿತು. ಯಾವನೊಬ್ಬ ಕಳ್ಳನು ಖಂಡಿತವಾಗಿಯೂ ಈ ಕಳ್ಳನನ್ನು ಸುಲಿದಿರುವನು! ನನ್ನ ತಲೆಯು ಗಿಡದ ಬೊಡ್ಡೆಗೆ ತಾಕಿ ನನಗೆ ಬವಳಿ ಬಂದಾಗ ಆ ದರವಡೆ ಖೋರನು ನನ್ನ ಜೇಬು ಸುಲಿದು ನಿರ್ವಿಘ್ನವಾಗಿ ಓಡಿ ಹೋಗಿರುತ್ತಾನೆ. ಆ ಕಳ್ಳನು ನಾನು ಕಳವುಮಾಡಿಕೊಂಡು ಓಡಿ ಬಂದದ್ದನ್ನು ನೋಡಿರಬೇಕು. ನಾನು ಕಳವು ಮಾಡಿಕೊಂಡು ಬರುತ್ತಿರುವದನ್ನೇ ಆತನು ನಿರೀಕ್ಷಿಸುತ್ತ ಆ ಆ ಉಪವನದಲ್ಲಿ ಅಡಗಿಕೊಂಡು ಕುಳಿತಿರಬೇಕು. ಎಲಲ! ನನ್ನದೆಂಥ ದುರ್ಭಾಗ್ಯವಪ್ಪಾ! ಮನುಷ್ಯನಿಗೆ ಯಾವದು ಅತ್ಯಂತ ಗರ್ಹ್ಯವೋ ಯಾವದು ಅತ್ಯಂತ ತಿರಸ್ಕರಣೀಯವೋ ಅದನ್ನೇ ನಾನು ಮಾಡಿದೆನು. ಕಲಂಕ ಸಾಗರದಲ್ಲಿ ಮುಳುಗಿದೆನು, ಆದರೆ ಯಾವ ಹೇತುವಿನಿಂದ ನಾನೀ ಘೋರ ಕೃತ್ಯವನ್ನೆಸಗಿದೆನೋ ಅದು ಸಫಲವಾಗಲಿಲ್ಲ. ಈಗಿನ ನನ್ನ ಅವಸ್ಥೆಯು ಮೊದಲಿಗಿಂತಲೂ ಹೆಚ್ಚು ಸಂಕಟಜನಕವಾಗಿ ಬಿಟ್ಟಿತು. ಡಾಫನಿಗೆ ಯಾವ ರತ್ನಾಭರಣಗಳನ್ನೆಲ್ಲ ಕಾಣಿಕೆ ಎಂದು ಕೊಟ್ಟಿದ್ದೆನೋ, ಅವುಗಳನ್ನು ಕದ್ದು ಶಿಕ್ಷೆಗೆ ಪಾತ್ರನಾದೆನು; ಅಲ್ಲದೆ ಸಾಲಿಬರ್ನ ಕಂಪನಿಯ ಸಾಲ ತೀರಿಸಲಿಕ್ಕೂ ಆಗಲಿಲ್ಲ ಅವರು ನಾಳೆಯೇ ನನ್ನನ್ನು ಹಿಡಿದೊಯ್ಯುವರು. ನಾನಿನ್ನೆಲ್ಲಿ ಹಣ ಪಡೆಯುವದು? ಇಲ್ಲ, ಈ ಸಂಕಟದೊಳಗಿಂದ ಪಾರಾಗಲಿಕ್ಕೆ ನನಗಿನ್ನು ಬೇರೆ ಉಪಾಯವೇ ಇಲ್ಲ. ಕತ್ತಲೆ, ನಾಲ್ಕೂ ಕಡೆಗೆ ಘೋರವಾದ ಕಾರ್ಗತ್ತಲೆ! ವಿಪತ್ತಿನ ಮೋಡಗಳು ತಲೆಯ ಮೇಲೆ ಮುಸುಕಿರುವವು. ಇನ್ನು ನಾನೇನು ಮಾಡಲಿ?"

ಕ್ಷೋಭ, ದುಃಖ, ನಾಚಿಕೆ, ಅನುತಾಪ ಮುಂತಾದವುಗಳಿಂದ ಕಿಲ್ಡೀಯಾರನು ಹುಚ್ಚನಂತಾದನು. ವಿಶೇಷವಾಗಿ ಮತ್ತೂ ಒಂದು ಬಲವಾದ ಸಂದೇಹವು ಅವನ ಮನಸ್ಸಿನಲ್ಲಿ ಹುಟ್ಟಿತು. ಆತನು ಅಧೀರನಾಗಿಬಿಟ್ಟನು. ಡಾಫನಿಯು ನನ್ನನ್ನು ಗುರ್ತಿಸಿದಳೇ? ಆ ಕೋಣೆಯೊಳಗಿನ ಬೆಳಕು ಅಷ್ಟು ಉಜ್ವಲವಾಗಿರದಿದ್ದರೂ ಆ ದೀಪವು ನನ್ನ ಹಿಂದುಗಡೆಯಲ್ಲಿದ್ದರೂ ಡಾಫನಿಗೆ ನನ್ನ ಮುಖವು ಸ್ಪಷ್ಟವಾಗಿ ಕಂಡಿರದಿದ್ದರೂ ಆದರೂ-ಅವಳು ಬಹು ದಿನಗಳಿಂದಲೂ-ಬಹುಶಃ ದಿನಾಲು-ನನ್ನನ್ನು ನೋಡಿರುತ್ತಾಳೆ. ನನ್ನ ಭಾಷಣವನ್ನು

ಕೇಳಿದ್ದಾಳೆ, ನನ್ನ ಪ್ರತಿಯೊಂದು ಹಾವಭಾವಗಳನ್ನು ಕಂಡುಕೊಂಡಿದ್ದಾಳಾದ್ದರಿಂದ ಇಂದು ಅವಳು ನನ್ನ ಮುಖವನ್ನು ಸ್ಪಷ್ಟವಾಗಿ ನೋಡದಿದ್ದರೂ ಅವಳು ನನ್ನನ್ನು ಗುರ್ತಿಸಲಾರಳೆ? ಡಾಫಸಿಯು ನನ್ನೊಡನೆ ಮಾತನ್ನಾಡ ಆಡುತ್ತಲೆ ಒಮ್ಮೆಲೆ ನಿರ್ವಾಕ್ಯಳಾಗಿ, ವಿಸ್ಮಯ-ವಿಸ್ಫೂರಿತ ನೇತ್ರಗಳಿಂದ ನೋಡಿ, ಅಷ್ಟು ಹೆಚ್ಚಾಗಿ ವಿಹ್ವಳಲೂ ಚಂಚಲಳೂ ಆದ ಕಾರಣವೇನು? ಅವಳು ಆಗ ನನ್ನನ್ನು ಒಮ್ಮೆಲೆ ಗುರ್ತಿಸಿದ್ದೇ ಅದಕ್ಕೆ ಕಾರಣವಲ್ಲವೆ?"

ಕಿಲ್ಡೀಯಾರನು ಅದನ್ನೆಲ್ಲ ಆಲೋಚಿಸಿ ಕ್ರೋಧಭರದಿಂದ:—"ಡಾಫಸಿಯು ನನ್ನನ್ನು ಖಂಡಿತವಾಗಿಯೂ ಗುರ್ತಿಸಿರುತ್ತಾಳೆ; ಆದರೆ ಇದಕ್ಕೆ ಉಪಾಯವೇನು? ನನ್ನಲ್ಲಿ ಅವಳು ಯಾವ ನಂಬಿಗೆ, ಎಷ್ಟು ಪ್ರೀತಿ, ಎಂಥ ಸಹಾನುಭೂತಿಗಳನ್ನಿಟ್ಟಿದ್ದಳೋ ಅವನ್ನೆಲ್ಲ ಕಳೆಕೊಂಡೆನು. ನಾನು ಅವಳ ಪ್ರೇಮಕ್ಕೆ ತೀರ ಅಯೋಗ್ಯನು. ಅವಳು ನನ್ನ ಹೇಸಿ ಜೀವನವನ್ನು ತಿಳಿದುಕೊಂಡಳು. ಈ ಬಗ್ಗೆ ನನಗಿನ್ನು ದುಃಖಿಸುವ ಅಧಿಕಾರವಾದರೂ ಇದೆಯೇ?"

ಬ್ರಾವುನ್ ಕಿಲ್ಡೀಯಾರನು ಉನ್ಮಾದನಂತೆ ದಾರಿ ಹಿಡಿದು ಸಾಗಿದ್ದನು. ತಾನು ಯಾವ ಕಡೆಗೆ ನಡೆದಿರುತ್ತೇನೆಂಬದರ ಕಡೆಗೆ ಅವನ ಲಕ್ಷ್ಯವೇ ಇರಲಿಲ್ಲ. ಎಲ್ಲಿಗೆ ಹೋಗಬೇಕೆಂಬುದನ್ನೂ ಆತನು ನಿರ್ಧರಿಸಿಕೊಂಡಿರಲಿಲ್ಲ. ಅದೇ ರೀತಿಯಿಂದ ನಡೆದಿರಲು, ಅವನು ಗ್ರಸ್‌ಭೇನ ಸ್ಕ್ವೇಅರಿಗೆ ಹೋಗಿ ತಲುಪಿದನು. ಆಗ ಆತನಿಗೆ ತಿಳಿಯಬಂದುದೇನಂದರೆ, ತಮ್ಮ ಬೆಲಗ್ರೇಡಿಯಾ ದಂಡಿನ ಶಿಬಿರವು ಬಹು ಹಿಂದೆಯೇ ಬಿಟ್ಟು ಬಂದಿರುವೆನೆಂದು. ಕೂಡಲೆ ಅವನು ಗಕ್ಕನೆ ನಿಂತುಕೊಂಡನು. ಅತ್ತಿತ್ತ ಹೊರಳಿ ನೋಡಿ ಸಮೀಪದಲ್ಲಿಯೇ ಇದ್ದ 'ಡ್ಯೂಕ್ ಸ್ಟ್ರಿಟ್' ಎಂಬ ಗಲ್ಲಿಯಲ್ಲಿ ಉದ್ದೇಶವಿಹೀನವಾಗಿಯೇ ಹೊಕ್ಕು, ಕೊಂಚ ದೂರ ಹೋದ ಕೂಡಲೆ ಎದುರಗಡೆಯಲ್ಲೇ ಉಜ್ವಲ ದೀಪಮಾಲೆಗಳಿಂದ ಬೆಳಗುತ್ತಿದ್ದ ಸುಪ್ರಶಸ್ತಾದ ಆಕ್ಸಫರ್ಡ ಸ್ಟ್ರೀಟು ಕಾಣಿಸಹತ್ತಿತು. ಅವನು ಆ ದಾರಿಯಲ್ಲಿ ನಿಂತು ಎರಡು-ಮೂರು ನಿಮಿಷಗಳವರೆಗೆ ಏನನ್ನೋ ಯೋಚಿಸಿದನು. ಯಾವುದೊ ಒಂದನ್ನು ಮನಸ್ಸಿನಲ್ಲಿ ನಿರ್ಧರಿಸಿಕೊಳ್ಳಲು, ಆತನ ಮಾನಸಿಕ ಉದ್ವೇಗವೂ ಚಾಂಚಲ್ಯವೂ ಅಲ್ಪಮಟ್ಟಿಗೆ ಶಾಂತವಾದವು. ಸಮೀಪದಲ್ಲೇ ಟ್ಯಾಕ್ಸಿಗಳ ಅಡ್ಡೆ ಕಾಣಿಸಲು, ಮೆಲ್ಲಮೆಲ್ಲನೆ ಅಲ್ಲಿಗೆ ಹೋದನು; ಹಾಗು ಒಬ್ಬ ಟ್ಯಾಕ್ಸಿ ಡ್ರಾಯವ್ಹರನನ್ನು ಕುರಿತು:—"ಶೋಫಾರಸಾಬ, ನನ್ನನ್ನು ಭೇಯಾರ ಸ್ಟ್ರೀಟನೊಳಗಿರುವ ಸುಪ್ರಸಿದ್ಧ ಪತ್ತೆದಾರನಾದ ರಾಬರ್ಟ ಬ್ಲೇಕರ ಮನೆಗೊಯ್ದು ಬಿಡಬೇಕು. ಅವನ ಮನೆಯ ನಂಬರು ನನಗೆ ನೆನಪಿಲ್ಲ. ನಿನಗವರ ಮನೆಯ ನಂಬರು ಗೊತ್ತಿದೆಯೋ!" ಎನ್ನಲು,

ಶೋಫಾರ: —"ಒಳ್ಳೇದು, ನನಗದು ಗೊತ್ತಿದೆ. ನಾನು ಎಷ್ಟೋ ಸಾರೆ ಅವನ ಮನೆಗೆ ಹೋಗಿರುತ್ತೇನೆ."

ಕಿಲ್ಡೇಯಾರ:—"ಹಾಗಾದರೆ ನೀನು ಈಗಲೆ ನನ್ನನ್ನು ಅವರ ಮನೆ ಗೊಯ್ದು ಬಿಡುವೆಯಾ?"

ಶೋಫಾರ;—"ಅದಾವ ಕಠಿಣ ಕೆಲಸ? ಹತ್ತಿರಿ ಟ್ಯಾಕ್ಸಿಯನ್ನು."

ಕೂಡಲೆ ಕಿಲ್ಡೇಯಾರನು ಆತನ ಟ್ಯಾಕ್ಸಿಯನ್ನು ಆರೋಹಿಸಿದನು. ಕೆಲ ನಿಮಿಷಗಳಲ್ಲೇ ಅದು ಬ್ಲೇಕನ ಮನೆಯ ಬಾಗಿಲಿಗೆ ಹೋಗಿ ತಲುಪಿತು. ಆಗ ಮಧ್ಯರಾತ್ರಿಯಾಗಿದ್ದಿತು. ಬ್ಲೇಕನ ಮನೆಯ ಅಡಿಗೆಯವಳಾದ ವಾರ್ಡೇಳು ಮನೆಗೆಲಸಗಳನ್ನೆಲ್ಲ ಮುಗಿಸಿಕೊಂಡು ತನ್ನ ಬಹು ಭಾರವಾದ ದೇಹನನ್ನು ಹಾಸಿಗೆಯ ಮೇಲೆ ಚಲ್ಲಿಕೊಟ್ಟು ಮೂಗು-ಬಾಯಿಗಳಿಂದ ಬಹುಗಟ್ಟಿಯಾಗಿ ಶ್ವಾಸ ಬಿಡುತ್ತ ಗೊರಿಕೆ ಹೊಡೆಯುತ್ತ ನಿದ್ರಾಸುಖವನ್ನು ಅನುಭೋಗಿಸುತ್ತಿದ್ದಳು. ಬ್ಲೇಕನು ಮಾತ್ರ ಆಗಲೂ ನಿದ್ರೆ ಹೋಗಿರಲಿಲ್ಲ. ತಲೆಬಾಗಿಲ ಬಳಿಯ ಗಂಟೆ ಬಡೆದ ಸಪ್ಪಳ ಕೇಳಲು, ಆತನು ಸ್ವಂತ ಮೇಲಟ್ಟದಿಂ ಇಳಿದು ಬಂದು ಬಾಗಿಲ ತೆರೆದನು; ಹಾಗು ಹೊರಗಡೆಗೆ ನಿಂತಿದ್ದ ಬ್ರಾಮ್ನನ ಕಿಲ್ಡೇಯಾರನನ್ನು ಸಂಗಡ ಕರೆಕೊಂಡು ಅಟ್ಟವನ್ನೇರಿ ತನ್ನ ಕೂಡ್ರುವ ಕೋಣೆಗೆ ತಲುಪಿದನು. ಆ ಕೋಣೆಯೊಳಗಿನ ಮಿಂಚಿನ ದೀಪಿಗೆಯ ಉಜ್ವಲವಾದ ಪ್ರಕಾಶದಲ್ಲಿ ಕಿಲ್ಡೇಯಾರನ ಮಾಸಿದ ಹಾಗು ಅಲ್ಲಲ್ಲಿ ಹರಿದ ಉಡುಪನ್ನೂ ತುಚ್ಛನಂತಿರುವ ಆತನ ಹಾವಭಾವಗಳನ್ನೂ ಕಂಡು ಅತ್ಯಂತ ವಿಸ್ಮಿತನಾದನು. ನೇಭಿಲ ಹರಕೋರ್ಟನ ಬಲವಾದ ಮುಷ್ಟ್ಯಾಘಾತದಿಂದ ಅದುವರೆಗೂ ಆತನ ಮುಖವು ಬಾಡಿತ್ತು. ಲಾರ್ಡ ಮೆಸಿಂಡೇಲನ ಅಟ್ಟದಿಂದ ಇಳಿದು ಓಡಿ ಬರುವಾಗ ಒಂದು ಲತೆಯ ಹರಿಯು ತಾಕಿ ಆತನ ಕಪಾಳದಲ್ಲಿ ಒತ್ತಟ್ಟಿಗೆ ರಕ್ತ ಬಂದಿತ್ತು. ಅದನ್ನೆಲ್ಲ ಕಂಡ ಬ್ಲೇಕನು ಯಾವ ಸಂಗತಿಯನ್ನೂ ತಿಳಿಯದೆ ತೀಕ್ಷ್ಣದೃಷ್ಟಿಯಿಂದ ಅವನ ಮೋರೆಯನ್ನೇ ನೋಡಹತ್ತಿದನು. ಬಳಿಕ ಅವನು:—"ಕಿಲ್ಡೇಯಾರ, ಪ್ರಸಂಗವೇನು? ನೀನೀಗ ಎಲ್ಲಿಂದ ಬಂದೆ? ಬೇಗನೆ ತಿಳಿಸು."

ಕಿಲ್ಡೇಯಾರನು ಹತಾಶಭಾವದಿಂದ ಅಲ್ಲಿಯದೊಂದು ಕುರ್ಚಿಯ ಮೇಲೆ ಕುಳಿತವನೇ ನಿಟ್ಟುಸಿರುಗರೆದು:—"ಪ್ರಸಂಗವೆಂಥದು? ನನ್ನ ಮುಂಡ ಮೋಚಿತು. ತಮಗೆ ಮೋರೆ ತೋರಿಸಲಿಕ್ಕೆ ಕೂಡ ನನಗೆ ನಾಚಿಕೆಯೆನಿಸುತ್ತದೆ. ಲಂಡನ್ನಿನೊಳಗಿನ ಎಲ್ಲಕ್ಕೂ ನೀಚ ತೀರ ತಿರಸ್ಕೃತ ಅಪರಾಧಿಗೂ ನನಗೂ ಮತ್ತಾವ ಅಭ್ಯಂತರವೂ ಇಲ್ಲ. ಮಹಾ ಪಾಪಿಷ್ಠನೂ ಕೂಡ ತಪ್ಪು

ಗಳ ದಯೆಗೆ ವಂಚಿತನಾಗಲಿಕ್ಕೆಂದು ನನಗನಿಸುತ್ತದೆ. ಅಂತೆಯೇ ನಾನು ತಮ್ಮ ಕೃಪೆಗೆ ಪಾತ್ರನಾಗಿರುತ್ತೇನೆ. ತಾವು ನನ್ನನ್ನು ಸಂರಕ್ಷಿಸಬೇಕು."

ಬ್ಲೇಕ:—"ತುಸ ಶಾಂತನಾಗು. ಏನೇನಾಗಿದೆ ಎಂಬದನ್ನೆಲ್ಲವನ್ನೂ ಬಿಚ್ಚಿ ಹೇಳು."

ಬಳಿಕ ಕಿಲ್ಡೇಯಾರನು ತೀರ ವ್ಯಾಕುಲಭಾವದಿಂದ, ಬಿಗಿದ ಕಂಠದಿಂದ ತನ್ನ ಎಲ್ಲ ಸಂಗತಿಯನ್ನು-ದುರ್ವರ್ತಿ ಮತ್ತು ದುಷ್ಕೃತಿಯ ಸಂಗತಿಯನ್ನು ಸವಿಸ್ತಾರವಾಗಿ ಬ್ಲೇಕನಿಗೆ ತಿಳಿಸಿದನು. ಕೊಂಚವನ್ನೂ ಮುಚ್ಚಿಡಲಿಲ್ಲ. ಬ್ಲೇಕನ್ನು ಮಂತ್ರಮುಗ್ಧನಾದ ಪಿಶಾಚಿಯಂತೆ ನಿಃಸ್ತಬ್ಧನಾಗಿ ಕುಳಿತು, ಮನಸ್ಸನ್ನು ಸ್ವಲ್ಪವೂ ಚಂಚಲಗೊಳಿಸದೆ ಆತನ ಎಲ್ಲ ಸಂಗತಿಯನ್ನು ಕೇಳಿಕೊಂಡನು. ಅವನ ಸಂಗತಿಯನ್ನೆಲ್ಲ ಕೇಳುವದಾದ ಬಳಿಕ ದೀರ್ಘನಿಶ್ವಾಸವ ಬಿಟ್ಟು ಅತ್ಯಂತ ಗಂಭೀರನಾಗಿ ಬ್ಲೇಕನು ಆತನ ಮೋರೆಯ ಕಡೆಗೆ ಟಕಮಕವೆಂದು ನೋಡತೊಡಗಿದನು; ಹಾಗು ಮೆಲ್ಲಮೆಲ್ಲನೆ "ನಿನ್ನ ಸಂಗತಿಯು ಅತ್ಯಂತ ಅದ್ಭುತವಾಗಿರುವದರಿಂದ ಇದನ್ನು ನಂಬಲಿಕ್ಕೆ ಕೂಡ ನನ್ನ ಮನಸ್ಸು ಒಪ್ಪುವದಿಲ್ಲ. ಕೊನೆಗೆ ಕಳವು ಮಾಡುವ ಪ್ರವೃತ್ತಿಯು ನಿನಗುಂಟಾಯಿತೇ? ನಿನ್ನ ದೇಹದಲ್ಲೇನು ಪಿಶಾಚಿ ಸಂಚರಿಸಿರುವದೋ? ಇನ್ನೇನು ಹೇಳಲಿ? ನಿನ್ನ ವೃತ್ತಾಂತವನ್ನು ಕೇಳಿ ನಾನೆಷ್ಟು ಮರ್ಮಾಹತನಾಗಿರುತ್ತೇನೆಂಬದನ್ನು ನಿನಗೆ ಬಾಯಿಂದ ತಿಳಿಸಲು ಶಕ್ತನಿಲ್ಲ;

ಕಿಲ್ಡೇಯಾರ:—"ಬ್ಲೇಕರೇ, ನನಗೆ ನನ್ನ ವಿಷಯದಲ್ಲೇ ಎಷ್ಟು ತಿರಸ್ಕಾರವುಂಟಾಗಿವೆಯೋ, ತಾವು ಅದಕ್ಕಿಂತಲೂ ನನ್ನನ್ನು ಹೆಚ್ಚು ತಿರಸ್ಕರಿಸಲಾರಿರಿ. ನನ್ನ ಮನಸ್ಸಿನಲ್ಲಿ ಎಷ್ಟು ವ್ಯಥೆಯುಂಟಾಗಿದೆಯೋ ಮರಣ ವ್ಯಥೆಯು ಅದಕ್ಕಿಂತ ಎಷ್ಟೋ ತುಚ್ಛವಾಗಿರುವದು."

ಬ್ಲೇಕ:—"ನೀನು ಯಾವ ಅಪರಾಧ ಮಾಡಿರುತ್ತೀಯೋ ಅದಕ್ಕೆ ಶಿಕ್ಷೆಯೆಂದರೆ ದೀರ್ಘವಾದ ಕಾರಾಗೃಹವಾಸ. ಮೈತುಂಬ ಎಚ್ಚರವಿದ್ದ ಸಭ್ಯ ಗೃಹಸ್ಥರೆಲ್ಲಾದರೂ ಇಂಥ ದುಷ್ಕರ್ಮ ಮಾಡುವರೆ? ಯಾವಾಗ ನೀನು ಆ ಸಂಕಲ್ಪ ಮಾಡಿದೆಯೋ ಆಗ ನಿಜವಾಗಿಯೂ ನಿನ್ನ ತಲೆಯು ತಾಳದಪ್ಪಿರಬೇಕು."

ಕಿಲ್ಡೆ:—"ಆಗ ನಾನು ಉನ್ಮತ್ತನಾಗಿದ್ದೆನೆಂದೆನಿಸುತ್ತದೆ. ನನ್ನೀ ಉನ್ಮತ್ತತೆಯ ನೆವವು ನನ್ನ ಆತ್ಮಸಮರ್ಥನಕ್ಕೆ ತಕ್ಕದ್ದಾಗಿಲ್ಲವೆ?"

ಬ್ಲೇಕ;—"ಕಳವು ಮಾಡಿ ಆತ್ಮಸಮರ್ಥನದ ಅನುಕೂಲತೆಗೆ ಎಂಥ ಹಂಚಿಕೆ ತೆಗೆದೆಯಲ್ಲ! ಇದೇನು ಬಾಯಿಂದ ಆಡುವಂಥ ಮಾತೇ? ನಾನು ನಿನಗೆ ಧನಸಹಾಯ ಮಾಡಬೇಕೆಂದಿದ್ದೆ. ನೀನು ನಾಳೆ ಬೆಳಗ್ಗೆ ನನ್ನ ಬಳಿಗೆ ಬಂ

ದೊಡನೆಯೇ ನಿನ್ನ ಎಲ್ಲ ಸಾಲ ತೀರಿಸುವ ವ್ಯವಸ್ಥೆ ಮಾಡುತ್ತಿದ್ದೆನು; ಹಾಗು ಪ್ರಾಪ್ತ ಸಂಕಟದೊಳಗಿಂದ ನೀನು ಮುಕ್ತನಾಗುತ್ತಿದ್ದೆ; ಆದರೆ ನೀನು ನನ್ನ ಮಾತನ್ನು ದುರ್ಲಕ್ಷಿಸಿ, ಇಂಥ ಘೋರ ಕೃತ್ಯವನ್ನೆಸಗಲಿಕ್ಕೇಕೆ ಪ್ರಯತ್ನಿಸಿದೆ?"

ಕಿಲ್ಡೇ:—"ತಮ್ಮಂತಹ ಹಿತೈಷಿ ಬಂಧುಗಳ ಬಳಿಯಿಂದ ಧನಸಹಾಯ್ಯ ಪಡೆಯುವದು ನನ್ನ ಆತ್ಮಸನ್ಮಾನಕ್ಕೆ ಆಘಾತವಾದಂತಾಯಿತು. ನನ್ನ ದುರಭಿಮಾನವೇ ನನ್ನನ್ನೀ ಅಧಃಪಾತಕ್ಕೆ ಗುರಿ ಮಾಡಿದೆ! ನಾನು ನನ್ನಾ ಗರ್ವವನ್ನು ತ್ಯಜಿಸಿ ನಾಳೆ ಬೆಳಿಗ್ಗೆ ನಿಮ್ಮ ಬಳಿಗೆ ಬಂದಿದ್ದರೆ, ನನ್ನ ದುರ್ಗತಿಯು ಇಷ್ಟಾಗುತ್ತಿದ್ದಿತೇ? ನಾನು ಈಗ ಯಾವ ತಪ್ಪು ಮಾಡಿರುವೆನೋ ಇದಕ್ಕೆ ಬದಲು ನಾನು ನನ್ನ ಬಲಗೈಯನ್ನು ಕತ್ತರಿಸಿ ಬಿಟ್ಟಿದ್ದರೂ ಆ ಭ್ರಮವು ಅಷ್ಟೊಂದು ದೊಡ್ಡದಾಗುತ್ತಿರಲಿಲ್ಲ."

ಬ್ಲೇಕ:—"ನೀನು ಅಂತಃಕರಣಪೂರ್ವಕವಾಗಿ ಇದನ್ನೆಲ್ಲ ಹೇಳುತ್ತೀ ಎಂಬದನ್ನು ನಾನು ನಂಬುತ್ತೇನೆ ನೀನು ಲಾರ್ಡ ಮೆಸಿಂಡೇಲರ ಮನೆಯನ್ನು ಗೌಪ್ಯವಾಗಿಯೂ ಅನಧಿಕಾರದಿಂದಲೂ ಹೊಕ್ಕು ಅವರ ಮ:ಗಳ ರತ್ನಾಭರಣಗಳನ್ನೆಲ್ಲ ಅಪಹರಿಸಿ, ಆ ಮೇಲೆ ಬೇರೆ ಕಳ್ಳನಿಗೆ ಅವನ್ನೆಲ್ಲ ಸಮರ್ಪಿಸಿದ್ದು ಇದೆಲ್ಲವೂ ಬಹು ಭಯಂಕರ ಕೃತ್ಯವೇ. ಇದೆಲ್ಲ ಘಟನೆ ನಡೆದ ಬಳಿಕ ನೀನು ಹುಚ್ಚನಾಗದಿದ್ದದ್ದನ್ನು ಕಂಡು ನನಗೆ ಬಹು ಚೋಜಿಗವೆನಿಸುತ್ತದೆ. ನೀ ನಿನ್ನ ಬಿಂದು ಮಾತ್ರವೂ ನನ್ನ ದಯೆಗೆ ಪಾತ್ರನಲ್ಲ; ನಿನಗೆ ಆಶ್ರಯ ಕೊಡುವದೂ ನನ್ನ ಕರ್ತವ್ಯವಲ್ಲ. ನೀನು ನಿನ್ನ ದುಷ್ಕರ್ಮದ ಫಲವನ್ನು ಅನುಭೋಗಿಸು. ನಿನ್ನನ್ನು ಈಗಿಂದೀಗಲೇ ಪೋಲೀಸರ ವಶಪಡಿಸುವದೇ ನನ್ನ ಕರ್ತವ್ಯವು. ಯಾವುದು ನ್ಯಾಯಸಮ್ಮತವೋ ನಾನು ಅದನ್ನೇ ಮಾಡುವವನು."

ಆಗ ಕಿಲ್ಡೇಯಾರನು ಅಸ್ಫುಟವಾಗಿ:—"ನಾನು ಮಹಾ ಪಾಪಿಯು. ಆದರಿಂದ ನಿಮ್ಮ ಕರುಣೆಗೆ ಪಾತ್ರನಲ್ಲ. ನಿಮಗೆ ಯಾವುದು ಉಚಿತವೆನಿಸುವದೋ ಅದರಂತೆಯೇ ಮಾಡಿರಿ."

ಹೀಗೆಂದು ನುಡಿದವನೇ ಹತಾಶನಾಗಿ ಒತ್ತಟ್ಟಿಗೆ ನೋಡುತ್ತ ಕುಳಿತನು. ಅವನ ಕಣ್ಣುಗಳೊಳಗಿಂದ ಅಶ್ರುಗಳುದುರಹತ್ತಿದವು. ಆತನ ಹೃದಯದ ರಕ್ತವೇ ಅಶ್ರುವಾಗಿ ಹನಿ ಹನಿ ಎಂದು ಕಣ್ಣುಗಳಿಂದ ಹರಿಯಹತ್ತಿತು. ಆತನ ಮುಖವು ಕೇವಲ ಹೆಣದ ಮುಖದ ಹಾಗೆ ಕಾಂತಿಹೀನವಾಯಿತು. ಬ್ಲೇಕನು ಅವನ ಮೋರೆಯ ಕಡೆಗೆ ನೋಡಿ ತನ್ನ ಮನಸ್ಸಿನಲ್ಲಿಯೇ:—"ಇವನಂತಹ ಹತಭಾಗ್ಯ ವ್ಯಕ್ತಿಯು ಈ ಲೋಕದಲ್ಲಿ ಬೇರಿಲ್ಲ."

ಬ್ಲೇಕನು ಆತನ ಮುಖವನ್ನು ಮತ್ತೊಂದೆರಡು ಸಾರೆ ನೋಡಿದನು. ಅಧಃಪತಿತನೂ ಪಾಪಗರ್ತದಲ್ಲಿ ಬಿದ್ದವನೂ ವಿಪದ್ಗ್ರಸ್ತ ಹತಭಾಗಿಯೂ ಆದ ಆ ಕಿಲ್ಡೆಯಾರನ ಬಗ್ಗೆ ಕರುಣ ಹೃದಯಿಯಾದ ಬ್ಲೇಕನಲ್ಲಿ ದಯೆಯುಂಟಾಯಿತು; ಈ ಮೊದಲು ಆತನಲ್ಲುಂಟಾದ ರೋಷವು ಎತ್ತಲೋ ಮಾಯವಾಗಿ ಬಿಟ್ಟಿತು. ಅವನ ಹತಾಶಪೂರ್ಣ ಮುಖವನ್ನು ಕಂಡು ಇವನಿಂದ ಮತ್ತೆ ತಡೆಯಲಾಗಲಿಲ್ಲ. ಅದರಿಂದ ಬ್ಲೇಕನು ಕರುಣ ಸ್ವರದಿಂದ:"ಬ್ರಾವುನ. ನಿನ್ನ ಮನಸ್ಸಿಗಾಗಿರುವ ಕಷ್ಟವನ್ನು ತಿಳಿದೆನು. ನಿನ್ನೀ ಕಷ್ಟವು ಯಾತರಿಂದ ಹೆಚ್ಚುವುದೋ ಅಂಥ ಯಾವ ಕೃತ್ಯವನ್ನು ಮಾಡಲಿಕ್ಕೂ ನನ್ನಿಂದಾಗದು. ಅನುತಪ್ತನಾದವನ ಕಷ್ಟವನ್ನು ಕಂಡು ನನ್ನಿಂದ ಸುಮ್ಮನಿರಲಾಗುವದಿಲ್ಲ. ಇದೇ ನನ್ನಲ್ಲಿಯ ಹುಟ್ಟು ದುರ್ಬಲತೆ. ನಾನು ನಿನಗೆ ಈಗ ತಿಳಿಸುವದೇನಂದರೆ, ಇನ್ನು ಮೇಲೆ ನನ್ನ ಕೈಯಿಂದ ನಿನಗಾವ ಅನಿಷ್ಟವೂ ಘಟಿಸಲಾರದು. ನೀನು ಹೇಳಿದ್ದನ್ನೆಲ್ಲ ನಾನು ತೀರ ಗೌಪ್ಯವಿರಿಸುವೆನು. ನಾನು ಈ ಮೊದಲು ವಚನ ಕೊಟ್ಟಂತೆ ನಾಳೆ ಬೆಳಿಗ್ಗೇನೇ ನಿನಗೆ ಹಣ ಕೊಡುತ್ತೇನೆ. ಅದರಿಂದ ನೀನು ರತ್ನವ್ಯಾಪಾರಿಯ ಸಾಲವನ್ನು ತೀರಿಸಿಬಿಡು. ಇದಕ್ಕಿಂತಲೂ ಹೆಚ್ಚು ನಾನು ನಿನಗೇನು ಸಹಾಯ ಮಾಡಲಿ?"

ಕಿಲ್ಡೇಯಾರನು ಆವೇಗಭರದಿಂದ. "ನನ್ನ ಎಲ್ಲ ಸಂಗತಿಯನ್ನು ತಿಳಿದೂ ತಿಳಿದು ನೀವು ನನಗೆ ಹಣ ಕೊಡುವಿರಾ? ಬ್ಲೇಕರೇ, ನೀವೇನು ಮನುಷ್ಯರೊ? ದೇವರು ದಯೆಯ ಸಾಗರನೆಂದು ಕೇಳುತ್ತೇನೆ; ಆದರೆ ನಿಮ್ಮಲ್ಲಿಯ ದಯೆಯನ್ನು ಕಂಡು ದೇವರಲ್ಲಿ ಆ ಬಗೆಯ ದಯೆಯಿರಬಹುದೆಂದು ನಂಬಬೇಕಾಗುತ್ತದೆ. ಧನ್ಯ! ಧನ್ಯ ಬ್ಲೇಕರೇ! ನಾನು ಖಂಡಿತವಾಗಿಯೂ ನಿಮ್ಮ ಸಹಾಯವನ್ನು ಗ್ರಹಿಸುವೆನು ನನ್ನಲ್ಲಿಯ ಅಹಂಕಾರ, ದುರಭಿಮಾನ, ದರ್ಪ ಇವುಗಳೆಲ್ಲ ಚೂರ್ಣವಾಗಿವೆ."

ಆಗ ಬ್ಲೇಕನು ಗಂಭೀರ ಭಾವದಿಂದ: —"ನಾಳೆ ಬೆಳಿಗ್ಗೆ ನೀನು ಖಂಡಿತವಾಗಿಯೂ ಹಣ ಪಡೆಯುವೆ: ಆದರೆ ನೀನು ಅಷ್ಟರಿಂದ ಸಂರಕ್ಷಿಸಲ್ಪಡುವೆಯೋ ಇಲ್ಲವೋ ಅನುಮಾನವೇ ಸರಿ. ನೀನು ಕಳವು ಮಾಡಿ ಓಡಿ ಬರುವ ಕಾಲದಲ್ಲಿ ಯಾವ ಪೋಲೀಸನು ನಿನ್ನನ್ನು ಹಿಡಿದಿದ್ದನೋ ಅವನು ನಿನ್ನನ್ನು ಗುರ್ತಿಸಬಲ್ಲನಾದರೆ, ನೀನು ಉಳಕೊಳ್ಳುವ ಸಂಭವವಿಲ್ಲ."

ಕಿಲ್ಡೆ:—"ಇಲ್ಲ; ಆತನು ನನ್ನನ್ನು ಗುರ್ತಿಸಿಲ್ಲ. ಆಗ ಲಾಂದರವು ಬಹಳ ದೂರದಲ್ಲಿತ್ತು. ಅದರಿಂದ ಅವನಿಗೆ ನನ್ನ ಮೋರೆ ಕಾಣಿಸಲಿಲ್ಲ. ನಾನು ಕತ್ತಲೆಯಲ್ಲೇ ಆತನ ಹಿಡಿತದೊಳಗಿಂದ ಪಾರಾಗಿ ಓಡಿಬಂದಿರುತ್ತೇನೆ."

ಬ್ಲೇಕ.—"ಒಂದು ವೇಳೆ ಅವನು ನಿನ್ನನ್ನು ಗುರ್ತಿಸದಿದ್ದರೂ ಗುರ್ತಿಸ ದಿರಲಿ, ಆದರೆ ಮಿಸ್ ಡಾಫನಿ ಭಾರನನ್ನ? ಅವಳ ಕೋಣೆಯಲ್ಲಿ ಬೆಳಕಿದ್ದಿತು; ಆದರಿಂದ ಅವಳು ನಿನ್ನನ್ನು ಗುರ್ತಿಸಲಿಲ್ಲೆಂಬದು ಶಕ್ಯವಾದೀತೇ? ಹಾಗೆನ್ನುವ ದೇನು ನಂಬತಕ್ಕ ಮಾತೇ?"

ಕಿಲ್ಡೆ: –ಅವಳೂ ನನ್ನನ್ನು ಗುರ್ತಿಸಿದಳೆಂದು ಹೇಳಲಿಕ್ಕಾಗುವದಿಲ್ಲ. ಆ ದೀಪವು ನನ್ನ ಹಿಂದುಗಡೆಯಲ್ಲಿ ಮಿಣುಮಿಣುಕಾಗಿ ಉರಿಯುತ್ತಿತ್ತು, ಆದರಿಂದ ನನ್ನ ಮೋರೆಯ ಮೇಲೆ ಅದರ ಬೆಳಕು ಬೀಳಲಿಲ್ಲ; ಅಲ್ಲದೆ ನನ್ನ ಮೋರೆಯು ಉಡುಪಿನಿಂದ ಹೆಚ್ಚಾಗಿ ಮುಚ್ಚಲ್ಪಟ್ಟಿತ್ತು, ಆದರೂ ನನ್ನ ಹಾವ ಭಾವಗಳು ಹೇಗೆ ಅಡಗಿಸಲಾದಾವು? ಅವುಗಳನ್ನು ಕಂಡ ಅವಳಲ್ಲಿ ಒಂದುವೇಳೆ ಸಂದೇಹ ಹುಟ್ಟಿದ್ದರೂ ಹುಟ್ಟಿರಬಹುದು; ಆದರೆ ನಾನು ಆಕೆಗೆ ಆಗ ಏನೇನು ಹೇಳಿದೆನೋ ಅದನ್ನೆಲ್ಲ ನನ್ನ ಸ್ವಾಭಾವಿಕವಾದ ದನಿಯಲ್ಲಿ ಹೇಳಿರದೆ, ವಿಕೃತ ದನಿಯಿಂದಲೇ ಹೇಳಿರುತ್ತೇನೆ.'

ಬ್ಲೇಕ:—'ಒಂದು ವೇಳೆ ಅವಳು ನಿನ್ನನ್ನು ಗುರ್ತಿಸಿರದಿದ್ದರೆ, ಆ ಪೋಲೀಸನಿಗೂ ನಿನ್ನ ಗುರ್ತು ಹತ್ತಿರದಿದ್ದರೆ, ನೀನು ಈ ಭಯಂಕರ ದುಷ್ಕರ್ಮ ಮಾಡಿದ್ದರೂ ಕೂಡ ಈ ಗಂಡಾಂತರದಿಂದ ಪಾರಾದರೂ ಪಾರಾಗ... ... .."

ಬ್ಲೇಕನ ನುಡಿಯು ಸಂಪೂರ್ಣವಾಗುವ ಮೊದಲೇ ಅವನ ಮನೆಯ ಟೆಲಿಫೋನಿನ ಗಂಟೆಯು 'ಘಣಣಣಣ' ಎಂದು ಒಂದೇಸವನೆ ಬಡಿಯ ಹತ್ತಿತು. ಕೂಡಲೆ ಅವನು ಅಲ್ಲಿಂದ ಎದ್ದು ಸಕ್ಕದಲ್ಲಿದ್ದ ಟೆಲಿಫೋನ ರೂ-ಮಿಗೆ ಹೋದನು, ಹಾಗು ಅಲ್ಲಿ ಒಂದೆರಡು ನಿಮಿಷಗಳ ವರೆಗೆ ಅದಾರ ಸಂಗಡವೋ ಟೆಲಿಫೋನಿನ ಮೂಲಕ ಮಾತನಾಡಿದನು. ತದನಂತರ ಅವನು ರಿಸೀವ್ಹರನ್ನು ಕೆಳಗಿಟ್ಟು ಕಿಲ್ಡೆಯಾರನ ಬಳಿಗೆ ಯಾವಾಗ ಬಂದನೋ, ಆಗ ಆತನ ಕಣ್ಣುಗಳಲ್ಲಿ ಅಸ್ವಾಭಾವಿಕವಾದ ಕಾಂತಿಯೂ ಮುಖವು ಅತ್ಯಂತ ಉದ್ವೇಗಕರವೂ ಆಗಿರುವುದು ಕಾಣಿಸಿತು.

ಬ್ಲೇಕನು ಬಂದವನೇ ಕಿಲ್ಡೇಯಾರನನ್ನುದ್ದೇಶಿಸಿ –"ಟೆಲಿಫೋನಿನಲ್ಲಿ ಲಾರ್ಡ ಮೆಸಿಂಡೇಲನೊಡನೆ ಸಂಭಾಷಣವಾಯಿತು. ಕೂಡಲೆ ನಾನು ತನ್ನ ಮನೆಗೆ ಬಂದು ತನ್ನಲ್ಲಾಗಿರುವ ಆ ಕಳವಿನ ಪತ್ತೆ ಹಚ್ಚುವ ಕೆಲಸವನ್ನು ಕೈಕೊಳ್ಳಬೇಕೆಂದು ಒತ್ತಾಯಪಡಿಸಿದನು."

ಕಿಲ್ಡೆಯಾರನು ಮುಖವನ್ನು ತಗ್ಗಿಸಿ: –"ಎಂಥ ಗಂಡಾಂತರವಿದು? ಇದರಿಂದ ನೀವು ಇಬ್ಬಗೆಯ ಸಂಕಟಕ್ಕೆ ಸಿಕ್ಕಂತಾಗಲಿಲ್ಲವೆ? ನೀವು ಅವರ ಈ ಇಚ್ಛೆಯಂತೆ ನಡೆಯುವಿರಾ?"

"ಹೌದು. ನಾನು ಈಗಲೇ ಬರುತ್ತೇನೆಂದು ಅವರಿಗೆ ತಿಳಿಸಿದ್ದೇನೆ."

"ಅಂತೆಯೆ ನಾನನ್ನುವುದು! ನೀವು ಅವರಿಗೆ ಸುಳ್ಳು ಹೇಳಬಹುದೆಂದು ನಾನು ತಿಳಿದುಕೊಳ್ಳುವದೇ ಅನುಚಿತವು; ಆದರೆ ನೀವು ಸರಳ ರೀತಿಯಿಂದ ಕಾರ್ಯ ಮಾಡಬೇಕಾದರೆ ನನ್ನನ್ನು ಹಿಡಕೊಡದ ಹೊರತು ಬೇರೆ ಉಪಾಯ ವೇನಿದೆ?"

ಬ್ಲೇಕ:—"ನಾನು ಕಳವಿನ ಪತ್ತೆ ನಡೆಸುವೆನು. ಯಾವ ಕಳ್ಳನು ಅಲಂಕಾರಗಳನ್ನು ಎತ್ತಿ ಒಡೆದಿರುವನೋ ಅವನನ್ನೇ ಹಿಡಿಯಲು ಪ್ರಯತ್ನಿಸುವೆನು; ನಿನ್ನನ್ನು ಹಿಡಿದು ಕೊಡಲಾರೆನು. ನಾನು ನಿನಗೆ ಈ ಮೊದಲೇ ಅಭಯವನ್ನಿತ್ತಿದ್ದೇನೆ. ನೀನು ಆ ನನ್ನ ಅಭಿವಚನವನ್ನು ನಂಬಿ ನಿಶ್ಚಿಂತನಾಗಿರು. ಇಷ್ಟೇ ಅಲ್ಲ, ಮಿಸ್ ಡಾಫನೀ ಭಾರನನ್ನಳು ನಿನ್ನಲ್ಲಿ ಅನುಮಾನಗೊಂಡರೂ ನಾನವಳ ಸಂದೇಹವನ್ನು ದೂರೀಕರಿಸಲು ಪ್ರಯತ್ನಿಸದಿರಲಾರೆನು."

ಕಿಲ್ಡೆ:—"ನಿಮ್ಮ ಮಾತು ಕೇಳಿ ನಾನು ಚಿಂತಾರಹಿತನಾದೆನು; ಆದರೆ ನನ್ನಿಂದ ನಿಮಗೆ ಕೆಟ್ಟ ಹೆಸರು ಬರಬಾರದೆಂದೇ ನನ್ನ ಅಭಿಪ್ರಾಯು."

"ನಿನ್ನ ಅಭಿಪ್ರಾಯಕ್ಕಿಂತಲೂ ನಾನು ಅಪಹೃತವಾದ ಅಲಂಕಾರಗಳ ಬಗ್ಗೆಯೇ ಹೆಚ್ಚು ಯೋಚಿಸುತ್ತಿರುವೆನು. ಅವುಗಳನ್ನು ಪತ್ತೆ ಹಚ್ಚುವದು ಬಹು ಕಠಿಣ ಕೆಲಸವು; ಇಷ್ಟೇ ಅಲ್ಲ, ಅವು ಪತ್ತೆ ಹತ್ತುವ ಸಂಭವವೇ ಕಡಿಮೆ."

ಆ ಭಯಂಕರವಾದ ಥಂಡಿಯ ರಾತ್ರಿಯಲ್ಲೂ ಕಿಲ್ಡೇಯಾರನ ಹಣೆಯ ಮೇಲೆ ದೊಡ್ಡ ದೊಡ್ಡವಾದ ಬೆವರಿನ ಹನಿಗಳು ಕಾಣಿಸಿಕೊಂಡವು. ಅವನು ಅವುಗಳನ್ನು ತನ್ನ ಜೇಬಿನೊಳಗಿನ ಕರವಸ್ತ್ರದಿಂದ ಒರಿಸಿಕೊಂಡನು. ಆ ಮೇಲೆ ವ್ಯಗ್ರಭಾವದಿಂದ;—"ನೀವು ಆ ಪ್ರಯತ್ನಕ್ಕೇ ತೊಡಗಬೇಡಿರಿ. ನೀವು ಒಂದುವೇಳೆ ಆ ಕಳ್ಳನನ್ನು ಹಿಡಿದರೆ, ಆ ಮೇಲೆ ನೀವು ನನ್ನನ್ನೂ ಹಿಡಿಯಲೇ ಬೇಕಾದೀತು. ದಾರಿಹೋಕ ದರವಡೆಖೋರನು ಹಿಡಿಯಲ್ಪಟ್ಟರೆ, ಅವನು ಕಳ್ಳನನ್ನಾದರೂ ನಿಶ್ಚಿಂತನನ್ನೇಕಾಗಗೊಡುವನು?"

ಬ್ಲೇಕ:—"ದಾರಿಹೋಕನು ಸಿಗಬೇಕು; ಆದರೆ ನಿನಗಾವ ಅನಿಷ್ಟವೂ ಘಟಿಸಬಾರದು, ಈ ರೀತಿಯಾಗಿಯೇ ನಾನು ನನ್ನ ಪ್ರಯತ್ನ ನಡೆಯಿಸುವೆನು. ಕಳವಿನ ಪತ್ತೆಮಾಡುವದನ್ನು ವಹಿಸಿಕೊಂಡು ಆ ಬಗ್ಗೆ ಏನೂ ಕೆಲಸ ಮಾಡದೆ ಲಾರ್ಡ ಮೆಸಿಂಡೇಲನನ್ನು ಠಕ್ಕಿಸಲಿಕ್ಕೆ ಪ್ರಯತ್ನಿಸುವಂತಹ ಅಧರ್ಮಾಚಾರಣೆಯು ನನ್ನಿಂದಾಗದು. ಅದು ಅತ್ಯಂತ ವಿಶ್ವಾಸಘಾತದ ಕೆಲಸವಾಗುವದು; ಆದರೆ ಒಂದು ಸಂಗತಿಯನ್ನು ನಾನು ತಿಳಿದಿರುವದಿಲ್ಲ. ಕಸಬುಗಾರ ಕಳ್ಳನು ಲಾರ್ಡ ಮೆಸಿಂಡೇಲನ ಉಪವನಕ್ಕೆ ರಾತ್ರಿ ಹನ್ನೊಂದಕ್ಕೆ

ಯಾವ ಉದ್ದೇಶದಿಂದ ಬಂದಿದ್ದನು? ನಿನ್ನನ್ನು ಆಕ್ರಮಿಸಿದ್ದ ಕಳ್ಳನು ಕಸಬುಗಾರ ಕಳ್ಳನೆಂದು ನಾನು ನಂಬುವುದಿಲ್ಲ."

ಕಿಲ್ಡೆ:—"ಕಸಬುಗಾರ ಕಳ್ಳನಲ್ಲವೆ ಬೇರೆ ಮೋಜಿನ ಕಳ್ಳನು ಅದಾವ ಉದ್ದೇಶದಿಂದ ಆಗ್ಗೆ ಅಲ್ಲಿಗೆ ಬಂದಿರಬೇಕೆಂಬದು ನನಗೂ ತಿಳಿಯದಾಗಿದೆ."

ಬ್ಲೇಕ:—ಈ ಸಂಗತಿಯೇ ನನಗೆ ಎಲ್ಲಕ್ಕೂ ಹೆಚ್ಚು ರಹಸ್ಯದ್ದಾಗಿ ತೋರುತ್ತವೆ. ಆ ಮನುಷ್ಯನು ನಿನ್ನ ಅಭಿಪ್ರಾಯವನ್ನು ತಿಳಿವೇ ನೀನು ಮರಳಿ ಬರುವ ದಾರಿ ನೋಡುತ್ತ ಅಲ್ಲೇ ಕುಳಿತಿದ್ದನೇನು? ಆದರೆ ನೀನು ನಿನ್ನಾ ಬೇತನ್ನು ಬಹುಶಃ ಅದಾರಿಗೂ ತಿಳಿಯಗೊಟ್ಟಿರಲಾರೆ. ಆ ಮನುಷ್ಯನು ನಿನ್ನನ್ನು ಆಕ್ರಮಣ ಮಾಡಿದ್ದಾದರೂ ಎಲ್ಲಿ ಎಂಬದನ್ನು ನೀನು ಚನ್ನಾಗಿ ಜ್ಞಾಪಿಸಿಕೊಂಡು ಹೇಳಬಲ್ಲೆಯಾ?"

ಕಿಲ್ಡೇ:—ಚನ್ನಾಗಿ ಹೇಳಬಲ್ಲೆನು. ಲಾರ್ಡ ಮೆಸಿಂಡೇಲರ ಮನೆಯ ಒಳಂಗಳದ ಸುತ್ತಲೂ ಎತ್ತರವಾದ ಗೋಡಯಿವೆ. ಅದರಾಚೆಗೆ ಉಪವನ. ಉಪವನದ ತುದಿಗೆ ತಂತಿಯ ಬೇಲಿ. ಉಪವನದೊಳಗೆ ಪ್ರವೇಶ ಮಾಡಬೇಕಾದರೆ ಹಿತ್ತಲ ಕಡೆಯ ಬಾಗಿಲದ ಹೊರಗೋಡೆಯಲ್ಲಿ ಯಾವ ಬಾಗಿಲವಿವೆಯೋ ಅದನ್ನು ತೆರೆವೇ ಹೋಗಬೇಕಾಗುವದು. ಆ ಬಾಗಿಲು ಒಳಗಿನಿಂದ ಮುಚ್ಚಲಾಗಿತ್ತು; ಆದರೆ ಆ ಬಾಗಿಲದಿಂದ ಉಪವನದ ಒಳಗೆ ಕಲ್ಲಿನ ಸಂದಿಯೊಳಗೆ ಗಾಲಿಯ ಗೇಟೊಂದಿವೆ. ತುಸ ದೂರದಲ್ಲೊಂದು ಬೆಂಚು ಇರಿಸಲಾಗಿದೆ. ನಾನು ಒಳಗಿನಿಂದ ಬಂದು ಬೆಂಚಿನ ಬಳಿಯಲ್ಲಿ ನಿಂತೊಡನೆಯೇ ಆ ದಾರಿಹೋಕನು ನನ್ನನ್ನು ಆಕ್ರಮಣ ಮಾಡಿದನು. ಆತನ ಬಲವಾದ ಮುಷ್ಟ್ಯಾಘಾತದಿಂದ ನನ್ನ ಜೋಲಿ ಹೋಯಿತು. ಸಮೀಪದಲ್ಲೇ ಇದ್ದ ದೊಡ್ಡ ಮರದ ಬೊಡ್ಡೆಗೆ ನನ್ನ ತಲೆಯು ಬಲವಾಗಿ ಅಪ್ಪಳಿಸಿತು. ಆ ಪೆಟ್ಟಿನಿಂದ ನನಗೆ ಮೂರ್ಛೆ ಬಂತು."

"ಆ ಮನುಷ್ಯನ ಮುಖಚರ್ಯೆಯು ಎಂತಿತ್ತೆಂಬದನ್ನು ಹೇಳಬಲ್ಲೆಯಾ?"

ಕಿಲ್ಡೇ:—"ಆ ಕಾರ್ಗತ್ತಲೆಯಲ್ಲಿ ಆತನ ದೇಹವು ದೀರ್ಘಾಕಾರದ್ದಾಗಿ ಕಾಣಿಸಿತು. ಅದರಿಂದ ಅವನು ಎತ್ತರಾದವನಿರಬೇಕು."

"ನೀನು ಈಗ ಏನೇನು ತಿಳಿಸಿರುತ್ತೀಯೋ ಅದನ್ನೆಲ್ಲ ಚೆನ್ನಾಗಿ ಲಕ್ಷ್ಯದಲ್ಲಿಟ್ಟೇ ನಾನು ನನ್ನ ಕೆಲಸಕ್ಕೆ ತೊಡಗುತ್ತೇನೆ. ನನ್ನ ಟಾಯಗರ ನಾಯಿಯ ಘ್ರಾಣ ಶಕ್ತಿಯು ಚೆನ್ನಾಗಿದೆ. ಅದು ಅದರ ಬಲದಿಂದ ನಿನ್ನನ್ನಾಕ್ರಮಿಸಿದವನ ಪತ್ತೆಯನ್ನು ಬೇಗನೆ ಹಚ್ಚದಿರಲಾರದು. ನಾನಿನ್ನು ತಡಮಾಡುವಂ

ತಿಲ್ಲ. ನನ್ನ ಉಡುಪನ್ನು ಪರಿವರ್ತಿಸಿಕೊಂಡವನೇ ಹೊರಡುತ್ತೇನೆ. ಲಾರ್ಡ ಮೆಸಿಂಡೇಲನನ್ನು ಕಾಣಲಿಕ್ಕೆ ಈಗಲೆ ಹೋಗುತ್ತೇನೆ.

ಬ್ಲೇಕನು ತನ್ನ ಮಲಗುವ ಕೋಣೆಯನ್ನು ಹೊಕ್ಕನು. ಅವನು ಉಡುಪನ್ನು ಬದಲಿಸಿಕೊಂಡು ತನ್ನ ಕೂಡ್ರುವ ಕೋಣೆಗೆ ಮರಳಿ ಬರುವಷ್ಟರಲ್ಲಿ ಸ್ಮಿತ್ಥನು ಎನೇವಾಗ್ರಹದಿಂದ ತಿರುಗಿ ಬಂದಿದ್ದನು. ಆತನು ವಿಸ್ಮಯಭರದಿಂದ ಕಿಲ್ಡೇಯಾರನ ಮುಖದ ಕಡೆಗೆ ನೋಡಿ ಬ್ಲೇಕನನ್ನು ಕುರಿತು.— 'ಒಡೆಯಾ. ಈ ಸರಿ ರಾತ್ರಿಯಲ್ಲಿ ತಾವೆತ್ತ ಹೊರಟಿರಿ?" ಎಂದು ಕೇಳಿದನು.

ಬ್ಲೇಕ. —"ಒಂದು ಕಳವಿನ ಪತ್ತೆಗಾಗಿ. ನೀನು ಟಾಯಗರವನ್ನು ತಕ್ಕೊಂಡು ನನ್ನೊಡನೆ ನಡೆ. ದಾರಿಯಲ್ಲಿ ನಿನಗೆ ಎಲ್ಲ ಸಂಗತಿಯನ್ನು ತಿಳಿಸುವೆನು ಕಿಲ್ಡೇಯಾರ, ನಾನು ಹಿಂದಿರುಗಿ ಬರುವವರೆಗೂ ನೀನಿಲ್ಲಿಯೇ ಕುಳಿತಿರು. ಒಂದುವೇಳೆ ಇಂದು ರಾತ್ರಿಯೇ ನನಗೆ ನಿನ್ನ ಅವಶ್ಯಕತೆಯುಂಟಾದೀತು."

ಹೀಗೆಂದು ಹೇಳಿ ಬ್ಲೇಕನು ಸ್ಮಿತ್ಥ ಮತ್ತು ಟಾಯಗರ ನಾಯಿ ಇವರುಗಳೊಡನೆ ಮನೆಯಿಂದ ಹೊರಬಿದ್ದು ಹೋದನು.

## ಈ ಕಳವೂ ಸಾಧಾರಣವಲ್ಲ; ಕಳ್ಳನೂ ಸಾಧಾರಣನಲ್ಲ.

ಬ್ಲೇಕನ ಬೇಕಾರ ಸ್ಟ್ರೀಟಿನೊಳಗಿನ ಮನೆಗೂ ಕ್ಲ್ರಾರ್ಕ್ ಸ್ಟ್ರೀಟಿನೊಳಗಿನ ಲಾರ್ಡ ಮೆಸಿಂಡೇಲನ ಮನೆಗೂ ಹೆಚ್ಚು ಅಂತರವಿರಲಿಲ್ಲ. ಬ್ಲೇಕನು ಸ್ಮಿತ್ಥ ಮತ್ತು ಟಾಯಗರನೊಡನೆ ಒಂದು ಬಾಡಿಗೆಯ ಟ್ಯಾಕ್ಸಿಯಲ್ಲಿ ಕುಳಿತು ಯಾವಾಗ ಲಾರ್ಡ ಮೆಸಿಂಡೇಲನ ಮನೆಯ ಎದುರಿಗೆ ಹೋದನೋ ಆಗ ಹನ್ನೆರಡೂವರೆ ಗಂಟೆಯಾಗಿತ್ತು. ಅವರು ಮೆಸಿಂಡೇಲನ ಮನೆಯ ತಲೆಬಾಗಿಲಲ್ಲಿ ಟ್ಯಾಕ್ಸಿಯಿಂದ ಇಳಿಯುತ್ತಿರುವಾಗಲೇ ಕೈಯಲ್ಲೊಂದು ಬ್ಯಾಟರಿ ಹಿಡಿದಿದ್ದ ದ್ವಾರರಕ್ಷಕನು ಅವರನ್ನು ಜೊತೆಗೆ ಕರೆದುಕೊಂಡು ಮೆಸಿಂಡೇಲನ ವಾಚನಾಲಯದ ಕೋಣೆಗೆ ಹೋದನು. ಅಲ್ಲಿದ್ದ ಲಾರ್ಡ ಮೆಸಿಂಡೇಲ ಹಾಗು ಆತನ ಮಗಳಾದ ಡಾಫನಿ ಭಾರನನ್ನ ಇವರುಗಳು ಬ್ಲೇಕಾದಿಗಳಿಗೆ ಸ್ವಾಗತವಿತ್ತರು. ಮೆಸಿಂಡೇಲನ ಪರಿವಾರದೊಂದಿಗೆ ಬ್ಲೇಕನ ಪರಿಚಯವು ಬಹು ದಿನದ್ದು. ಹಲವು ಮಂದಿ ದೊಡ್ಡ ಜನರಂತೆ ಲಾರ್ಡ ಮೆಸಿಂಡೇಲನಾದರೂ ಬ್ಲೇಕನಲ್ಲಿ ವಿಶ್ವಾಸವುಳ್ಳವನಾಗಿದ್ದನು; ಹಾಗು ಅವನಿಗೆ ಬ್ಲೇಕನ ನಿಪುಣತೆಯ ಬಗ್ಗೆ ಹೆಚ್ಚಾಗಿ ನಂಬಿಕೆಯಿತ್ತು. ಡಾಫನಿಯಾದರೂ ಬ್ಲೇಕನನ್ನು ಹೆಚ್ಚಾಗಿ ಸನ್ಮಾನಿಸುತ್ತಿದ್ದಳು.

ಲೇಡೀ ಮೆಸಿಂಡೇಲಳು ಅದುವರೆಗೂ ನಾಟಕದ ಥಿಏಟರಿನಿಂದ ಹಿಂತಿರುಗಿರಲಿಲ್ಲ ಬ್ಲೇಕನಿಗೆ ಡಾಫನಿಯ ಮುಖವು ಹೆಚ್ಚಾಗಿ ಬಾಡಿರುವಂತೆ ಗೋಚರವಾಯಿತು; ಆದರೆ ಅವಳ ಮುಖಭಾವದಲ್ಲಿ ಭಯ ಅಥವಾ ವ್ಯಾಕುಲತೆಗಳ ಚಿಹ್ನವು ಕೊಂಚವೂ ಇರಲಿಲ್ಲ. ಬ್ಲೇಕನು ಆ ಕೋಣೆಗೆ ತಲುಪಿದ ಕೂಡಲೆ ಲಾರ್ಡ ಮೆಸಿಂಡೇಲನು ಕುಳಿತಲ್ಲಿಂದೆದ್ದು ಬಂದು ಅವನಿಗೆ ಶೆಕ್ ಹ್ಯಾಂಡ ಕೊಟ್ಟನು; ಹಾಗು ಅಷ್ಟು ಗಭೀರ ರಾತ್ರಿಯಲ್ಲಿ ತನ್ನಲ್ಲಿಗೆ ಕಷ್ಟ ವಹಿಸಿ ಬಂದ ಬಗ್ಗೆ ಅವನನ್ನು ಹೊಗಳಿದನು. ಬಳಿಕ ತನ್ನಲ್ಲಾದ ಕಳವು ಹಾಗು ಕಳ್ಳತನ ನಡೆದದ್ದರ ಎಲ್ಲ ಸಂಗತಿಯನ್ನು ಅವನಿಗೆ ತಿಳಿಸಿದನು. ಬ್ಲೇಕನು ಅವರೆದುರಿಗಿನ ಕುರ್ಚಿಯಲ್ಲಿ ಕುಳಿತು ಅವೆಲ್ಲವನ್ನೂ ಕೇಳಿಕೊಂಡನು. ಆಗಿನ ಆತನ ಮುಖಭಾವದಿಂದ ಅವನು ಆ ಕಳವಿನ ಸಂಗತಿಯನ್ನು ಇದಕ್ಕೆ ಮೊದಲೇ ಕೇಳಿ ತಿಳಿದಿರುವನೆಂದು ಅದಾರೂ ಹೇಳರು.

ಮೆಸಿ:—"ನಾನು ಪೋಲೀಸರನ್ನು ವಾಪಸು ಕಳಿಸಿರುತ್ತೇನೆ. ಈ ಕಳವಿನ ಪತ್ತೆದಾರಿಕೆಯನ್ನು ಪೋಲೀಸರಿಗೊಪ್ಪಿಸುವ ಇಚ್ಛೆಯು ನನಗಿಲ್ಲವಾದ್ದರಿಂದಲೇ ನಾನು ನಿಮ್ಮನ್ನು ಕರೆಸಿರುವೆನು. ನೀವೇ ಈ ಕಳವಿನ ಪತ್ತೆಹಚ್ಚಬೇಕೆಂದು ನನ್ನ ಹೆಬ್ಬಯಕೆಯಿದೆ. ನೀವೇ ಆ ರತ್ನಾಭರಣಗಳನ್ನು ಪತ್ತೆಹಚ್ಚಿಕೊಡಬೇಕು; ಹಾಗು ಆ ಕಳ್ಳನನ್ನು ಹಿಡಿದು ಕೊಡಬೇಕು. ಥೂ! ಅವನೆಂಥ ರಾಸ್ಕಲ್ಲನು! ಅವನು ನನ್ನ ಮಗಳಿಗೆಷ್ಟು ಕಷ್ಟಕೊಟ್ಟನೊ? ಇವಳ ಮೇಲೆ ಗುಂಡು ಹಾರಿಸದಿದ್ದದ್ದೇ ನಮ್ಮಗಳ ಸುದೈವವೆನಬೇಕು."

ಬ್ಲೇಕ:—"ನಾನು ಪ್ರಯತ್ನಪಡಲಿಕ್ಕೆ ಕಡಿಮೆ ಮಾಡುವದಿಲ್ಲ. ಕಳ್ಳನು ಉಪವನದೊಳಗಿಂದ ಓಡಿ ಹೋದನೆಂದು ನೀವಂದಿರಿ; ನಾನು ಆ ಉಪವನವನ್ನೊಮ್ಮೆ ಪರೀಕ್ಷಿಸಿ ನೋಡುವೆನು. ಅಲ್ಲಿ ಕಳ್ಳನ ಯಾವದೊಂದು ಜೀನಸು ದೊರೆತರೆ ಅವರ ವಾಸನೆಯ ಮೂಲಕ ನನ್ನ ಈ 'ಬ್ಲಡ್-ಹಾವುಂಡ' ನಾಯಿಯು ತನ್ನ ಆಘ್ರಾಣಶಕ್ತಿಯ ಬಲದಿಂದ ಕಳ್ಳನ ಮಾರ್ಗವನ್ನು ಅನುಸರಿಸುವದು. ಅದಕ್ಕೆಂವೇ ನಾನು ನನ್ನೀ ಟಾಯಿಗರವನ್ನು ನನ್ನ ಜೊತೆಗೆ ಕರೆತಂದಿದ್ದೇನೆ."

ಮೆಸಿ:—"ನಿಮ್ಮ ಪ್ರಯತ್ನಕ್ಕೆ ಯಶ ದೊರೆಯಲೆಂದು ಬಯಸುವೆನು; ಆದರೆ ನೀವು ಏನನ್ನು ಹೇಳುವಿರೋ ಅದು ಸಹಜ ಸಾಧ್ಯವೆಂದು ನನಗನಿಸುವುದಿಲ್ಲ. ನಮ್ಮ ಡಾಫನಿಯು ನಿಮಗೆ ಈ ವಿಷಯದಲ್ಲಿ ಅಲ್ಪಸ್ವಲ್ಪ ಸಹಾಯ ಮಾಡಬಹುದೆಂದು ನನಗನಿಸುತ್ತದೆ. ಆ ಕಾಲಕ್ಕೆ ಅವಳ ಶಯನಾಗಾರದಲ್ಲಿ ಒಂದು ಸಣ್ಣ ದೀಪವು ಮಿಣುಕು ಮಿಣುಕಾಗಿ ಉರಿಯುತ್ತಿತ್ತು; ಅಲ್ಲದೆ

ಇವಳು ಆ ಕಳ್ಳನೆದುರಿಗೆ ನಿಂತು ಎರಡು ಮೂರು ನಿಮಿಷಗಳ ವರೆಗೆ ಮಾತ ನಾಡಿರುತ್ತಾಳೆ; ಮತ್ತು ಡಾಫನಿಯ ಸಂಗತಿಯನ್ನು ತಿಳಿದು ನನಗನಿಸುವ ದೇನಂದರೆ....” ಲಾರ್ಡ ಮೆಸಿಂಡೇಲನು ತನ್ನ ವಾಕ್ಯವನ್ನು ಪೂರ್ತಿಗೊಳಿಸದೆ ತನ್ನ ಮಗಳ ಮೋರೆಯ ಕಡೆಗೆ ನೋಡಿ:—“ಡಾಫನೀ, ನೀನು ಮತ್ತೆ ಇಷ್ಟು ಚಂಚಲಳೇಕಾದೆ? ಕಳ್ಳನ ಸಂಗತಿ ಹೇಳಿದಾಗ ನೀನು ಈ ಮೊದಲು ಹೀಗೆ ಯೇ ಚಂಚಲಳಾಗಿದ್ದೆ. ಅದೇನು ಸಂಗತಿಯೆಂಬದನ್ನಾದರೂ ಹೇಳಬಾರದೆ?”

ಡಾಫನಿ ಭಾರನನಳು ಯಾವ ಸಂಗತಿಯನ್ನೂ ಹೇಳಲಿಲ್ಲ. ಅವಳ ಅಂತಃಕರಣವು ಉಕ್ಕಿ ಉಕ್ಕಿ ಬರತೊಡಗಿತು. ಅವಳ ಕಣ್ಣುಗಳಲ್ಲಿ ಅಂಜಿ ಕೆಯ ಚಿಹ್ನವು ಒಡೆದು ಕಾಣಿಸಿತು. ಬ್ಲೇಕನು ಅದನ್ನೆಲ್ಲ ಲಕ್ಷ್ಯಿಸಿ, ಇವಳು ನಿಜವಾಗಿಯೂ ಕಳ್ಳನನ್ನು ಗುರ್ತಿಸಿರುತ್ತಾಳೆಂದು ತಿಳಿದನು.

ಲಾರ್ಡ ಮೆಸಿಂಡೇಲನು ಕನ್ಯೆಯ ಮುಖಭಾವವನ್ನು ಲಕ್ಷ್ಯಿಸಿ “ಡಾಫನಿ, ನಿನಗೇನಾಗಿದೆ?”

“ಅಪ್ಪಾ, ನನಗೇನೂ ಆಗಿಲ್ಲ.”

ಮೆಸಿ:—“ನಿನ್ನೀ ಮಾತಿನಲ್ಲಿ ನನಗೆ ನಂಬಿಗೆಯುಂಟಾಗುವದಿಲ್ಲ ಖಂ ಡಿತವಾಗಿಯೂ ನೀನು ಏನನ್ನೋ ಮುಚ್ಚುತ್ತೀ. ನೀನು ಇಷ್ಟು ಗಾಬರಿ ಗೊಂಡ ಕಾರಣವೇನು? ಹೇಳು.”

ಡಾಫನಿಯು ನಡುಗುವ ದನಿಯಿಂದ: “ಆ ಬಗ್ಗೆ ನನನ್ನು ಕೇಳಬೇಡಿರಿ.”

ಅದಕ್ಕೆ ಬ್ಲೇಕನು;—“ಮಿಸ್ ಭಾರನನ್ನಳು ಕಳ್ಳನ ವ್ಯವಹಾರದಿಂದ ಹೆಚ್ಚಾಗಿ ಅಂಜಿರುತ್ತಾಳೆ. ಈಕೆಯ ಆ ಭಯವು ಇನ್ನೂ ಅಡಗಿಲ್ಲ.”

ಲಾರ್ಡ ಮೆಸಿಂಡೇಲನು ಆವೇಗಭರದಿಂದ.—“ಅಲ್ಲ; ಇದು ಆ ವಿಷಯ ದ್ದಲ್ಲ. ಡಾಫನಿ, ಈ ಬಗೆಯ ನಿನ್ನ ಚಾಂಚಲ್ಯಕ್ಕೆ ಏನು ಕಾರಣವಾಯಿ ತೆಂಬದನ್ನು ತಿಳಿಸು.”

ಡಾಫನಿಯು ಮೋರೆ ತಗ್ಗಿಸಿ ಸಿಟ್ಟಿನಿಂದ:—“ಆ ಸಂಗತಿಯನ್ನು ನಿಮ್ಮೆ ದುರಿಗೆ ಹೇಳಲಾರೆನು.”

ಲಾರ್ಡ ಮೆಸಿಂಡೇಲನು ಕನ್ಯೆಯ ಆ ವಕ್ರ ನುಡಿಯಿಂದ ಸಿಟ್ಟಾಗಿ:— “ಯಾಕೆ ಹೇಳಲಾರೆ? ನಿಜವಾದುದನ್ನು ಹೇಳು. ನೀನು ಆ ಕಳ್ಳನ ಮುಖ ವನ್ನು ಸ್ಪಷ್ಟವಾಗಿ ನೋಡಿದ್ದೆಯಾ?”

ಡಾಫನಿ:—“ಇಲ್ಲವಪ್ಪಾ; ಸ್ಪಷ್ಟವಾಗಿ ಕಾಣಿಸಲಿಲ್ಲ. ಮೋರೆಯ ಲಕ್ಷಣ ವನ್ನು ಮಾತ್ರ ಕಂಡೆನು.”

ಮೆಸಿ:—“ನೀನು ಅವನನ್ನು ಗುರ್ತಿಸಿದೆಯಾ?”

ಡಾಫನಿ:—"ಅಪ್ಪಾ, ಇಲ್ಲ. ನಾನು ಅವನನ್ನು ಈ ಮೊದಲೆಂದೂ ನೋಡಿ ದಂತಿಲ್ಲ; ಆದರೆ-ಆದರೆ ಆ ಕಳ್ಳನು ಬಹುಮಟ್ಟಿಗೆ ಜ್ರಾವುನ ಕಿಲ್ಡೇಯಾರನಂತಿದ್ದನು."

ಡಾಫನಿಯು ಕಳ್ಳನನ್ನು ಗುರ್ತಿಸಿರುತ್ತಾಳೆಂಬ ಬಗ್ಗೆ ಬ್ಲೇಕನಿಗಿನ್ನಾವ ಸಂದೇಹವೂ ಉಳಿಯಲಿಲ್ಲ. ಸ್ಮಿತ್ಥನಿಗಾದರೂ ಹಾಗೆಯೇ ಅನಿಸಿತು. ಬ್ಲೇಕನು ಉತ್ಕಂಠಿತನಾಗಿ ಡಾಫನಿಯ ಕಡೆಗೆ ದಿಟ್ಟಿಸಿ ನೋಡಿದನು; ಹಾಗು ಲಾರ್ಡ ಮೆಸಿಂಡೇಲನ ಕಣ್ಣುಗಳಿಂದಂತೂ ಬೆಂಕಿಯ ಕಿಡಿಗಳೇ ಹಾರಹತ್ತಿದವು. ಅವನು ಮಗಳ ಕಡೆಗೆ ಕೆಕ್ಕರಿಸಿದ ಕಣ್ಣಿನಿಂದ ನೋಡಿ, ಗಟ್ಟಿಯಾಗಿ:—ಆ ಕಳ್ಳನು ಕಿಲ್ಡೇಯಾರನಂತಿದ್ದನೇ? ಹಾಗಾದರೆ ಆತನು ಖಂಡಿತವಾಗಿಯೂ ಕಿಲ್ಡೆಯಾರನೇ. ಈ ಸಂಗತಿಯು ನಂಬತಕ್ಕದ್ದೇ ಸರಿ. ಆತನು ದುಡ್ಡಿನ ಪೇಚಿಗೆ ಸಿಕ್ಕು ತನ್ನ ಮಾನ-ಮರ್ಯಾದೆಗಳಿಗೆ ಯೋಗ್ಯವಲ್ಲದ ಇಂಥ ಹೊಲ್ಲದ ಕೃತ್ಯಗಳಿಗೆ ಕೈಸೇಡಿದನೇ? ಅವನ ಸಂಬಂಧದ ಎಲ್ಲ ಸಂಗತಿಗಳೂ ನನ್ನ ಕಿವಿಗೆ ಬಿದ್ದಿವೆ. ಮೊದಲು ನಾನು ಅವುಗಳನ್ನೆಲ್ಲ ನಂಬಿರಲಿಲ್ಲ; ಆದರೆ ಈಗ ಅನಿಸುವದೇನಂದರೆ, ಅವೆಲ್ಲವೂ ಕಟ್ಟು ಕಥೆಗಳಲ್ಲ. ದುಡ್ಡಿನ ಅಭಾವಕ್ಕಾಗಿಯೇ ಕಿಲ್ಡೇಯಾರನು ಕಡೆಗೆ ಈ ಕುಕರ್ಮಕ್ಕೆ ತೊಡಗಿದನು. ಛೇ! ಛೇ! ಎಂಥ ನಾಚಿಕೆಗೇಡಿದು? ನಾನು ನನ್ನ ಮಗಳ ಲಗ್ನವನ್ನು ಒಬ್ಬ ಕಳ್ಳನ ಕೂಡ ನಿರ್ಧರಿಸಿದೆ ನಲ್ಲವೆ? ಆತನು ಇಷ್ಟು ಕೀಳನೇ? ಅವನ ಪ್ರವೃತ್ತಿಯು ಇಷ್ಟು ಹೀನತರದ್ದೇ? ಅವನು ಯಾವ ತುಚ್ಛ ಸಾಮುಗ್ರಿಗಳನ್ನೆಲ್ಲ ನಿನಗೆ ಕಾಣಿಕೆ ಎಂದು ಕೊಟ್ಟಿದ್ದನೋ, ಅಂಥವುಗಳನ್ನು ಕಳವು ಮಾಡಲಿಕ್ಕೆ ಅವನಿಗೆ ನಾಚಿಕೆ ಹೇಗೆ ಎನಿಸಲಿಲ್ಲವೋ ತಿಳಿಯದು!"

ತಂದೆಯ ಮಾತುಗಳನ್ನು ಕೇಳಿ ಡಾಫನಿಯು ಮನಸ್ಸಿನಲ್ಲಿಯೇ ಸತ್ತು ಬಿಟ್ಟಳು. ಅವಳು ಕಣ್ಣಲ್ಲಿ ನೀರು ತಂದು ಬಿಗಿದ ಕಂಠದಿಂದ "ಅಪ್ಪಾ, ಹಾಗಲ್ಲ. ನೀವು ಏನೆನ್ನುತ್ತಿರುವಿರೋ ಅದೆಂದೂ ಸಂಭವಿಸಲಾರದು. ಕಿಲ್ಡೇಯಾರನು ಖಂಡಿತವಾಗಿಯೂ ಕಳ್ಳನಲ್ಲ. ಅವನು ನನ್ನ ಆಭರಣಗಳನ್ನು ಕದ್ದಿರುವದಿಲ್ಲ."

ಮೆಸಿಂಡೇಲನು ಗಟ್ಟಿಯಾಗಿ ಒದರಿ:—"ಡಾಫನಿ, ನನ್ನನ್ನು ಮೋಸಗೊಳಿಸಲೆತ್ನಿಸಬೇಡ. ನೀನು ಖಂಡಿತವಾಗಿಯೂ ಆತನನ್ನು ಗುರ್ತಿಸಿರುತ್ತೀ. ಆ ಸಂಗತಿಯನ್ನು ನೀನು ನನ್ನ ಮುಂದೇಕೆ ಬಚ್ಚಿಡುತ್ತೀ?"

ಡಾಫನಿ:—"ಇಲ್ಲಪ್ಪಾ, ನಾನು ಕಳ್ಳನನ್ನು ನಿಜವಾಗಿಯೂ ಗುರ್ತಿಸಿರುವದಿಲ್ಲ. ಕಿಲ್ಡೇಯಾರನ ಮುಖದಂತೆ ಆತನ ಮುಖವು ಸಾದೃಶವಾಗಿತ್ತೆಂದು ನಾನು ಅನ್ನಲು, ನೀವು ಕಿಲ್ಡೇಯಾರನೇ ಆ ಕಳ್ಳನೆಂದು ಸಿದ್ಧಾಂತ ಮಾಡಿದಿ

ರಲ್ಲ! ಇದೇನು ಯೋಗ್ಯವೇ?"

ಬಳಿಕ ಡಾಫನಿಯು ತನ್ನ ಕುರ್ಚಿಯ ಮೇಲೆ ಕುಳಿತು ಬ್ಲೇಕನ ಕಡೆಗೆ ನೋಡಿ ಹುಬ್ಬು ಹಾರಿಸಿದಳು. ಬ್ಲೇಕನು ಲಾರ್ಡ ಮೆಸಿಂಡೇಲನ ಅನುಮಾನವನ್ನು ಅಲ್ಲಗಳೆಯುಲೋಸುಗ:-"ನೀವು ಹಾಗೆ ಒಮ್ಮೆಲೆ ಸಿದ್ಧಾಂತ ಮಾಡಿ ಬಿಡುವದು ನನ್ನ ಮನಸ್ಸಿಗೂ ಬರುವದಿಲ್ಲ. ಕೆಂಪು ಸೈನ್ಯದೊಳಗಿನ ಮಾನ್ಯ ಲೆಫ್ಟನೆಂಟನು, ವಿಶೇಷವಾಗಿ ಯಾವನು ಕೆಲ ದಿನಗಳಲ್ಲೇ ತನ್ನ ಸೋದರತ್ತೆಯ ವಿಪುಲ ಸಂಪತ್ತಿಗೆ ಉತ್ತರಾಧಿಕಾರಿಯಾಗುವನೋ ಅಂಥವನು ಈ ಬಗೆಯ ಕೀಳು ಕೃತ್ಯಕ್ಕೆ ತೊಡಗಿದನೆಂದೆನ್ನುವದು ನಂಬಲಿಕ್ಕೆ ತೀರ ಅಯೋಗ್ಯವು."

ಲಾರ್ಡ ಮೆಸಿಂಡೇಲ:—"ದಾರುಣವಾದ ದುಡ್ಡಿನ ಪೇಚಿಗೆ ಸಿಕ್ಕಿದ್ದ ಜನರು ಬೇಕಾದ್ದನ್ನು ಮಾಡುವರು. ಅವರಲ್ಲಿಯ ಧರ್ಮಜ್ಞಾನವು ಲೋಪ ವಾಗುವದು. ದುಡ್ಡು ಸಂಪಾದನೆಗಾಗಿ ಅವರು ಬೇಕಾದಂತಹ ಕುಕರ್ಮ ಮಾಡಲಿಕ್ಕೂ ಹಿಂಜರಿಯಲಾರರು. ಕಿಲ್ಡೇಯರಾರನಿಗಾದರೂ ಈಗ ಅದೇ ಅವಸ್ಥೆ ಪ್ರಾಪ್ತವಾಗಿದ್ದೀತು."

ಬ್ಲೇಕ:—"ಲಾರ್ಡರೇ, ಬೇರೆಯವರ ರುಚಿ-ಪ್ರವೃತ್ತಿಗಳ ಬಗ್ಗೆ ಅನು ಮಾನಿಸಿ ಏನೊಂದು ಹೇಳುವದು ಕಠಿಣವೇ. ಪರಚಿತ್ತವು ಅಂಧಕಾರವೇ. ಆದರೂ ನನಗನಿಸುವದೇನಂದರೆ, ಒಂದುವೇಳೆ ಕಿಲ್ಡೇಯರಾರನಿಗೆ ದುಡ್ಡಿನ ಕೊರತೆಯು ಅಸಹ್ಯವಾಗಿದ್ದರೆ, ಅವನು ಯೋಗ್ಯ ಮಾರ್ಗದಿಂದಲೇ ಹಣ ಸಂಗ್ರಹಿಸಬಹುದಿತ್ತು. ಹಣದ ಪೇಚನ್ನು ನೀಗುವ ಸಲುವಾಗಿ ಅವನು ನಿಮ್ಮ ಮನೆಗೆ ಕಳವಿಗೆ ಬಂದಿದ್ದನೆನ್ನುವದು ನಂಬತಕ್ಕ ಮಾತಾಗಿಲ್ಲ."

ಮೆಸಿ:—"ನಿಮ್ಮ ಮಾತು ಯುಕ್ತಿಸಮ್ಮತವೇನೋ ನಿಜ; ಆದರೆ ಕಳ್ಳ ನಾರೆಂಬದು ತಿಳಿಯದ ಹೊರತು ಯಾವ ಮಾತು ನಂಬಲು ಯೋಗ್ಯವು, ಯಾವದು ಅಯೋಗ್ಯವು ಇದನ್ನು ನಿಶ್ಚಯಿಸುವದು ಕಠಿಣವೇ ಸರಿ."

ಬ್ಲೇಕ:—"ನೀವು ನನ್ನ ಮಾತನ್ನು ಸಹಜವಾಗಿ ನಂಬಬಹುದಾಗಿದೆ. ಯಾಕಂದರೆ, ಕಳವಾದ ನಿಮ್ಮ ಕನ್ಯೆಯ ಅಲಂಕಾರಗಳು ಕಿಲ್ಡೇಯಾರನಲ್ಲಿಲ್ಲ."

ಲಾರ್ಡ ಮೆಸಿಂಡೇಲನು ವಿಸ್ಮಯಭರದಿಂಥ ಬ್ಲೇಕನ ಮೋರೆಯ ಕಡೆಗೆ ನೋಡುತ್ತ:—"ಅದನ್ನು ನೀವು ಹೇಗೆ ಹೇಳುವಿರಿ?"

ಬ್ಲೇಕ:—"ಚೆನ್ನಾಗಿ ತಿಳಿಕೊಳ್ಳದ ಹೊರತು ಅಧನ್ನು ನಾನಿಷ್ಟು ದೃಢ ವಾಗಿ ಹೇಳುವೆನೋ? ಅದೆಲ್ಲ ಮಾತು ಹಾಗಿರಲಿ."

ಮೆಸಿ:—"ನಿಮ್ಮ ಮಾತಿನಲ್ಲಿ ನನಗೆ ನಂಬಿಗೆ ಹುಟ್ಟಬೇಕಾದರೆ ನೀವು

ಕಳ್ಳನನ್ನು ಹಿಡಿದುಕೊಡಿರಿ."

ಬ್ಲೇಕ:—"ನಾನು ನಿಮಗೆ ಆ ಬಗ್ಗೆ ಮೊದಲೇ ತಿಳಿಸಿರುತ್ತೇನೆ. ನಾನು ನನ್ನ ಪ್ರಯತ್ನದಲ್ಲಿ ಕೊಂಚವೂ ಕಡಿಮೆ ಮಾಡುವದಿಲ್ಲ. ಒಂದು ವೇಳೆ ಕಳ್ಳನು ಹಿಡಿಯಲ್ಪಟ್ಟರೆ, ಆತನು ಕಿಲ್ಡೇಯಾರನಲ್ಲವೆಂಬದನ್ನು ನೀವು ಮನಗಾಣಬಹುದೆಂದು ನಿಮಗೆ ನಾನು ಈಗಲೇ ತಿಳಿಸಿಡುತ್ತೇನೆ. ನೀವು ನಿಮ್ಮ ಮಗಳನ್ನಿನ್ನು ಹಿಂಸಿಸಬೇಡಿರಿ. ಭಾವನನ್ನಾಗು ಕಳ್ಳನ ಮುಖವು ಕಿಲ್ಡೇಯಾರನ ಮುಖದಂತಿದ್ದುದನ್ನು ಕಂಡು ಮೊದಲೇ ಅತ್ಯಂತ ಮರ್ಮಾಹತಳಾಗಿರುತ್ತಾಳೆ. ಅವಳ ಮನಃಕ್ಲೇಶವು ಹೆಚ್ಚುವಂಥ ಯಾವ ಪಿಸುಣು ನುಡಿಗಳನ್ನೂ ನೀವಿನ್ನಾಡುವದು ಸರಿಯಲ್ಲ. ಈ ವಿಷಯದಲ್ಲಿ ತಮ್ಮಂಥ ಸೂಜ್ಞರಿಗೆ ನಾನು ವಿಶೇಷವೇನು ಹೇಳುವದಿದೆ? ರಾತ್ರಿಯು ಕ್ರಮವಾಗಿ ಹೆಚ್ಚುತ್ತಿದೆ. ವನಗಾ ಉಪವನವನ್ನೊಮ್ಮೆ ತೋರಿಸುವ ಏರ್ಪಾಟನ್ನು ಕೂಡಲೆ ಮಾಡಿರಿ."

ಕಿಲ್ಡೇಯಾರನು ಕಳ್ಳನಹುಮೋ-ಅಲ್ಲವೋ ಎಂಬ ಮಾತನ್ನೆತ್ತಿ ಲಾರ್ಡ ಮೆಸಿಂಡೇಲನು ಮತ್ತೆ ಕೆಲ ಕ್ಷಣಗಳ ವರೆಗೆ ವಾದಿಸಿದನು. ಅವನು ಅತ್ತ ಡಾಫನಿಯ ಮಾತನ್ನು ನಂಬದಾಗಿದ್ದನು; ಇತ್ತ ಬ್ಲೇಕನ ಯುಕ್ತಿಸಮ್ಮತ ಹೇಳಿಕೆಯನ್ನೂ ಅಸಂಗತವೆನ್ನದಾದನು. ಅದೇನೇ ಇರಲಿ, ಆತನು ಆ ಮೇಲೆ ಆ ಬಗ್ಗೆ ಏನೂ ಮಾತಾಡದೆ ಬ್ಲೇಕ, ಸ್ಮಿತ್ಥರನ್ನು ಜೊತೆಗೆ ಕರೆದುಕೊಂಡು ಉತ್ತಲಬಾಗಿಲಿಗೆ ಹೋದನು; ಹಾಗು ಉಪವನದ ಕಡೆಗೆ ಯಾವ ಗೋಡೆ ಯಿದ್ದಿತೋ, ಅದಕ್ಕೆ ಹೊಂದಿದ್ದ ಒಂದು ಬಾಗಿಲವನ್ನು ತೆರೆದು ಉಪವನವನ್ನು ಹೊಕ್ಕನು. ಡಾಫನಿಯೂ ಅವರ ಸಂಗಡವೇ ನಡೆದಳು. ಡಾಫನಿಯು ಬ್ಲೇಕನಿಗೆ ಹೊಂದಿ-ಹೊಂದಿಯೇ ಹೋಗುತ್ತಿದ್ದಳು. ಅವಳ ಕೈಯಲ್ಲೊಂದು ಮಿಂಚಿನ ದಿಲಾಲಿದ್ದಿತು. ಬ್ಲೇಕನು ಅವಳ ಉದ್ವೇಗಜನಕ ಮೋರೆಯ ಕಡೆಗೆ ನೋಡಿ ತಿಳಿದನೇನಂದರೆ, ಇವಳು ನನಗೆ ಗೌಪ್ಯವಾಗಿ ಏನನ್ನೋ ತಿಳಿಸಬೇಕಾಗಿದೆ. ಎಲ್ಲರೂ ನಿಃಶಬ್ದವಾಗಿ ಹೋಗಿ ಆ ಉಪವನದಲ್ಲಿದ್ದ ಬೆಂಚಿನ ಬಳಿಗೆ ನಿಲ್ಲಲು, ಲಾರ್ಡ ಮೆಸಿಂಡೇಲನು:—"ಇಲ್ಲಿಯೇ ಪೋಲೀಸರು ಕಳ್ಳನನ್ನು ಹಿಡಿದದ್ದು" ಎಂದು ಹೇಳಿದನು.

ಕಿಲ್ಡೇಯಾರನನ್ನು ಸುಲಿದವನು ಅಲ್ಲಿ ಅಂಥ ಯಾವ ಜಿನಸನ್ನೂ ಬಿಟ್ಟು ಹೋಗಿರಲಿಲ್ಲ. ಅದರಿಂದಲೇ ಟಾಯಸರವು ಅದರ ವಾಸನೆಯ ಮೂಲಕ ಆ ಕಳ್ಳನನ್ನು ಅನುಸರಿಸಿ ಹೋಗುವಂತಿರಲಿಲ್ಲ. ಅದನ್ನು ಕಂಡು ಬ್ಲೇಕನು ಹೆಚ್ಚಾಗಿ ನಿರಾಶೆಗೊಂಡನು. ಆದರೂ ನಾಲ್ಕೂ ಕಡೆಗೆ ಮತ್ತಿಷ್ಟು

ಶೋಧಿಸಿ ನೋಡುವದು ಯೋಗ್ಯವೆಂದು ತಿಳಿದು, ಅವನು ಡಾಫನಿಯ ಬಳಿಯ ಆ ಮಿಂಚಿನ ದೀಪವನ್ನು ಇಸಕೊಂಡು ತೀಕ್ಷ್ಣ ದೃಷ್ಟಿಯಿಂದ ನಾಲ್ಕೂ ಕಡೆಗೆ ಚೆನ್ನಾಗಿ ಶೋಧಿಸಹತ್ತಿದನು; ಆದರೂ ಆತನ ಪ್ರಯತ್ನಕ್ಕೆ ಯಶ ದೊರೆಯಲಿಲ್ಲ. ಆತನು ನಿರಾಶೆಯಿಂದ ದೀಪವನ್ನು ಹಿಡಿದುಕೊಂಡು ಹಾಗೆಯೇ ಅಡ್ಡಾಡುತ್ತಿರುವಾಗಲೇ ಅವನಿಗೆ ಕಂಡಿತೇನಂದರೆ, ಆ ಬೆಂಚಿನ ಕೈಯ ಬದಿಯಲ್ಲಿ ಬಿಳಿಯ ಬಣ್ಣದ್ದೇನೋ ಗಾಳಿಯಿಂದ ಹಾರಾಡುತ್ತಿದೆ. ಅವನು ಅತ್ಯಂತ ವ್ಯಗ್ರತೆಯಿಂದ ಅದರ ಸಮೀಪಕ್ಕೆ ಹೋಗಿ ಪರೀಕ್ಷಿಸಿ ನೋಡಲು, ಅದೊಂದು ರೇಶ್ಮಿಯ ಕರವಸ್ತ್ರವು. ಆ ಬೆಂಚಿನ ಕೈಯ ಒಂದು ಮೊಳೆಯು ತುಸ ಹೊರಗೆ ಹಾದಿತ್ತು. ಅದಕ್ಕೆ ಆ ಕರವಸ್ತ್ರವು ಸಿಕ್ಕಿಕೊಂಡಿತ್ತು. ಆ ಕರವಸ್ತ್ರವನ್ನು ಕಂಡ ಕೂಡಲೆ ಡಾಫನಿಯ ಮೋರೆಯು ಹೆಣದಂತೆ ಕಲಾವಿಹೀನವಾಯಿತು! ಅವಳ ಕಣ್ಣುಗಳು ಉದ್ವೇಗಭರದಿಂದ ಅಂಧವಾದವು. ಆ ಕರವಸ್ತ್ರವು ಆ ಮೋಳೆಗೆ ಸಿಕ್ಕಿಕೊಂಡಿರವದನ್ನು ಕಂಡು ಕಿಲ್ಡೇಯಾರನನ್ನು ಸುಲಿದಿರುವವನು ಈ ಬೆಂಚಿನ ಮೇಲೆ ಕುಳಿತಿರುವಾಗ ಈ ಬೆಂಚಿನ ಕೈಯ ಮೇಲೆ ತನ್ನ ಕೈಯಿರಿಸಿರಬೇಕು. ಅವನ ಕೋಟಿನ ಕಿಸೆಯಲ್ಲಿ ಈ ಕರವಸ್ತ್ರವಿದ್ದಿರಬೇಕು. ಈ ಕರವಸ್ತ್ರದ ಕೆಲಭಾಗವು ಹೇಗೋ ಜೇಬಿನಿಂದ ಹೊರಬಿದ್ದಿರಬೇಕು. ದೈವವಶಾತ್ ಅದು ಈ ಬೆಂಚಿನ ಮಳೆಯ ತುದಿಗೆ ಸಿಕ್ಕುಬಿದ್ದು ಜೇಬಿನಿಂದ ಹೊರಹೊರಟು ಇಷೇ ಪ್ರಕಾರ ತೂಗಾಡುತ್ತಿರಬೇಕು. ಕಿಲ್ಡೇಯಾರನನ್ನು ಸುಲಿದಂಥ ಆ ವ್ಯಕ್ತಿಯು ಕತ್ತಲಲ್ಲಿ ಇದನ್ನು ನೋಡಲಿಕ್ಕಾಗಿಲ್ಲ. ಪರಮೇಶ್ವರನೇ ಆ ದುಷ್ಕೃತ್ಯಕಾರಿಯನ್ನು ಹಿಡಿಯುಬೋಸುಗ ಈ ವ್ಯವಸ್ಥೆಯನ್ನು ಮಾಡಿಟ್ಟಿದ್ದಾನೆ.

ಅದನ್ನೆಲ್ಲ ಕಂಡು ಬ್ಲೇಕನ ಹೃದಯವು ಆನಂದಪೂರ್ಣವಾಯಿತು. ಅವನು ವ್ಯಗ್ರಭಾವದಿಂದ ಆ ಕರವಸ್ತ್ರವನ್ನೆತ್ತಿಕೊಂಡು ಉತ್ಸಾಹಭರದಿಂದ:- "ಧನ್ಯ ಪರಮೇಶ್ವರಾ! ಇನ್ನು ಮೇಲೆ ಆ ಕಳ್ಳನನ್ನು ಹಿಡಿಯುವ ಬಗ್ಗೆ ಕೊಂಚವಾದರೂ ಆಶೆ ಹಿಡಿಯಬಹುದು. ಅವನು ಇಲ್ಲಿಗೆ ಓಡಿ ಬಂದು ಈ ಬೆಂಚಿನ ಮೇಲೆ ಕುಳಿತು ವಿಶ್ರಮಿಸಿರಬೇಕು; ಹಾಗು ಇಲ್ಲಿಂದ ಎದ್ದು ಹೋಗುವಾಗ ಹೇಗೋ ತುಸ ಹೊರಬಿದ್ದದ್ದ ಆತನ ಜೇಬಿನೊಳಗಿನ ಈ ಕರವಸ್ತ್ರವು ಈ ಬೆಂಚಿನ ಕೈಯ ಬಳಿಗೆ ಹೊರಹಾದಿರುವ ಮೊಳೆಯ ತುದಿಗೆ ಸಿಕ್ಕುಬಿದ್ದಿರಬೇಕು, ಹೀಗೆಂದು ಹೇಳಿ ಅವನು ಮತ್ತೊಮ್ಮೆ ಡಾಫನಿಯ ಮೋರೆಯ ಕಡೆಗೆ ಇಣುಕಿದನು. ಆಗ ಆವಳ ಕಣ್ಣುಗಳೆದುರು ಪ್ರಲಯಕಾಲದ ಅಂಧಕಾರವು ಘನೀಭೂತವಾಗಲಿದ್ದಿತು. ಅವಳ ಉಸಿರು ಕಟ್ಟಾಗಹತ್ತಿತ್ತು. ಅವಳು

ತನ್ನ ಎರಡೂ ಕೈಗಳಿಂದ ಎದೆಯನ್ನು ಹಿಡಿದುಕೊಂಡು ಹೇಗೆ ಹೇಗೋ ನಿಂತುಕೊಂಡಿದ್ದಳು.

ಲಾರ್ಡ ಮೆಸಿಂಡೇಲನು ಆಗ ಮಗಳ ಮೋರೆಯನ್ನು ದೃಷ್ಟಿಸಿದ್ದರೆ ಹಾಗು ಅವಳ ಮುಖದ ಮೇಲಿನ ಹುಚ್ಚುಚ್ಚಾರದ ಭಾವವನ್ನು ಲಕ್ಷಿಸಿದ್ದರೆ ಖಂಡಿತವಾಗಿಯೂ ಆತನು ಬಹು ವಿಸ್ಮಯಪಡುತ್ತಿದ್ದನು; ಆದರೆ ಆಗ ಆತನ ಲಕ್ಷ್ಯವು ಆ ಕಡೆಗಿರಲಿಲ್ಲ. ಅವನು ವ್ಯಗ್ರಭಾವದಿಂದ ಆ ಕರವಸ್ತ್ರವನ್ನೇ ನೋಡುತ್ತಿದ್ದನು. ಕಡೆಗೆ ಅವನು ಉತ್ಸಾಹ ಭರದಿಂದ:-"ಈ ಕರವಸ್ತ್ರದ ಯಾವುದೊಂದು ಮೂಲೆಯಲ್ಲಿ ಯಾರದಾದರೂ ಹೆಸರು ಇವೆಯೋ ಹೇಗೆ ನೋಡಿರಿ "

ಬ್ಲೇಕನು ಆ ಕರವಸ್ತ್ರವನ್ನು ಚೆನ್ನಾಗಿ ಪರೀಕ್ಷಿಸಿ ನೋಡಿ:—"ಇಲ್ಲ; ಎಲ್ಲಿಯೂ ಯಾರ ಹೆಸೆರು-ಚಿಹ್ನಗಳೂ ಇರುವದಿಲ್ಲ."

ಲಾ ಮೆಸಿಂಡೇಲನು ಬ್ಲೇಕನಿಂದ ಆ ಕರವಸ್ತ್ರವನ್ನು ಇಸಕೊಂಡು:- "ಇದಂತೂ ಬಹು ಬೆಲೆಯುಳ್ಳ ಕರವಸ್ತ್ರ. ಇದು ಕಿಲ್ಡೇಯಾರನಂತಹ ಯಾವನೊಬ್ಬ ಶೋಕೀ ಪುರುಷನದೆಂಬುದೇ ಖಂಡಿತವು. ಕಸಬುದಾರ ಕಳ್ಳರು ಇಂಥ ಕರವಸ್ತ್ರಗಳನ್ನೆಂದೂ ಉಪಯೋಗಿಸುತ್ತಿರುವದಿಲ್ಲ "

ಬ್ಲೇಕ:—"ಏಕೆ ಉಪಯೋಗಿಸಕೂಡದು? ದುಡ್ಡು ಕೊಟ್ಟು ಕೊಳ್ಳದೆ ಹೊರೆತರೆ ಎಲ್ಲರೂ ಬೆಲೆಯುಳ್ಳ ಒಡವೆಗಳನ್ನು ವ್ಯವಹರಿಸಬಹುದು; ಆದರೆ ನಿಮ್ಮ ಸಂದೇಹವು ಬುಡವಿಲ್ಲದ್ದು. ಈ ಕರವಸ್ತ್ರವು ಕಿಲ್ಡೇಯಾರನದಲ್ಲವೆಂದು ನಾನು ನಿಃಸಂದೇಹವಾಗಿ ಹೇಳಬಲ್ಲೆನು."

"ಅಲ್ಲದಿದ್ದರೆ ಒಳ್ಳೇದೇ. ಏನೇ ಆಗಲಿ, ಕಳ್ಳನನ್ನು ಹಿಡಿಯಲಿಕ್ಕೆ ನಿಮಗೊಂದು ಎಳೆ ಸಿಕ್ಕಿತಲ್ಲವೆ? ಇನ್ನು ನಿಮ್ಮ ಪ್ರಯತ್ನಗಳು ಸಫಲವಾಗುವವೆಂದು ಆಶಿಸುತ್ತೇನೆ"

"ಒಳ್ಳೇ ಸಂತೋಷಕರವಾದ ಎಳೆ ದೊರೆತಿದೆ. ಈಗಲೇ ನಾನು ಪರೀಕ್ಷಿಸ ತೊಡಗುತ್ತೇನೆ" ಹೀಗೆಂದು ಹೇಳಿ ಬ್ಲೇಕನು ಆ ಕರವಸ್ತ್ರವನ್ನು ಟಾಯಗರದೆದುರಿಗೆ ಎತ್ತರದಲ್ಲಿ ಹಿಡಿಯಲು, ಟಾಯಗರವು ಮೋರೆಯನ್ನು ಮೇಲಕ್ಕೆತ್ತಿಕೊಂಡು ಒಂದೆರಡು ನಿಮಿಷಗಳ ವರೆಗೆ ಅದನ್ನು ಆಘ್ರಾಣಿಸಿತು. ಆ ಮೇಲೆ ಬಾಲವನ್ನು ಅಲ್ಲಾಡಿಸುತ್ತ ಎರಡು-ಮೂರು ಸಾರೆ ನಾಲ್ಕೂ ಕಡೆಗೆ ನೋಡಿ, ಆ ಉದ್ಯಾನವನದಿಂದ ಹೊರಹೊರಡಲಿಕ್ಕೆಂದು ಬೇಲಿಯ ಕಡೆಗೆ ಓಡಿತು. ಬ್ಲೇಕನ ಸೂಚನೆಯ ಮೇರೆಗೆ ಸ್ಮಿತ್ಥನು ಅದನ್ನು ಅನುಸರಿಸಿದನು.

ಬಳಿಕ ಬ್ಲೇಕನು ಲಾರ್ಡ ಮೆಸಿಂಡೇಲನನ್ನು ಕುರಿತು:—"ಇಲ್ಲಿಂದ ಈ ಉಪವನದ ಹೊರಗೆ ಹೋಗಲು ದಾರಿಯಿದೆಯೊ?"

ಮೆಸಿ:—ಇಲ್ಲ; ಈ ಬದಿಗಾವ ದಾರಿಯೂ ಇರುವದಿಲ್ಲ. ನಿಮ್ಮ ನಾಯಿಯು ತಂತಿಯ ಬೇಲಿಯನ್ನು ಬೇಕಾದಲ್ಲಿ ದಾಟಬಹುದು; ಆದರೆ ಅದರಂತೆಯೇ ನೀವೂ ದಾಟಿ ಹೋಗಿ ಮೈತುಂಬ ಗಾಯ ಮಾಡಿಕೊಳ್ಳುವ ಆವಶ್ಯಕತೆಯಿಲ್ಲ. ಅತ್ತಣ ದಾರಿಯಿಂದ ಬೇಲಿಯಾಚೆ ಹೋಗಬಹುದು."

"ಯಾವ ಸ್ಥಳದಲ್ಲಿ ಕಳ್ಳನು ತಂತಿಯ ಬೇಲಿಯನ್ನು ಓರೆ ಮಾಡಿ ಉದ್ಯಾನದ ಹೊರಗೆ ಹೋಗಿದ್ದನೋ ಟಾಯಗರವು ಅಲ್ಲಿಗೇ ಹೋಗಿ ತಂತಿಯನ್ನು ದೂಡಾಡತಹತ್ತಿತು. ಈ ಮೊದಲು ಹೇಳಿದ ಬೆಂಚಿಗೂ ಆ ಸ್ಥಳಕ್ಕೂ ಹೆಚ್ಚು ಅಂತರವಿರಲಿಲ್ಲ. ಬ್ಲೇಕನು ಸ್ಮಿತ್ಥನಿಗೆ ಆ ನಾಯಿಯೊಡನೆ ಹಿಂದಿರುಗ ಹೇಳಿದನು. ಸ್ಮಿತ್ಥನು ಟಾಯಗರದ ಕೊರಳಪಟ್ಟಿಯನ್ನು ಹಿಡಿದು ಜಗ್ಗಿಕೊಂಡು ಬಂದನು.

ಡಾಫನಿಯು ಅದುವರೆಗೂ ನಿಸ್ತಬ್ಧಳಾಗಿ ಅದೆಲ್ಲವನ್ನೂ ನೋಡುತ್ತಿದ್ದಳು. ತದನಂತರ ಅವಳು ಬ್ಲೇಕನನ್ನುದ್ದೇಶಿಸಿ:—"ಕಳ್ಳನನ್ನು ತಮ್ಮ ನಾಯಿಯೇ ಪತ್ತೆ ಹಚ್ಚುವದೇನು?" ಎಂದು ಕೇಳಿದಳು.

ಬ್ಲೇಕ:—"ಅದನ್ನೇ ನಾನು ಆಶಿಸುತ್ತೇನೆ; ಆದರೂ ಅದು ಕೃತಕಾರ್ಯವಾಗುವದೋ ಇಲ್ಲವೋ ಎಂಬದನ್ನು ಹೇಳುವದು ಕಠಿಣವು. ಅದಕ್ಕೆ ಮಧ್ಯದಲ್ಲಿ ಹಲವು ವಿಘ್ನಗಳೂ ಉಂಟಾಗಬಹುದಾಗಿದೆ."

ಡಾಫನಿಯು ಮತ್ತೇನೂ ಮಾತನಾಡಲಿಲ್ಲ. ಲಾರ್ಡಮೆಸಿಂಡೇಲನು ಅವರೆಲ್ಲರೊಡನೆ ವಾಚನಾಲಯದ ಕೋಣೆಗೆ ಹಿಂದಿರುಗಿದನು. ಅಲ್ಲಿ ಕೆಲ ಕ್ಷಣ ಕುಳಿತ ಬಳಿಕ ಲಾರ್ಡ ಮೆಸಿಂಡೇಲನು ಕ್ರ್ಯಾಕ್‌ಸ್ಲೇಟಿನೊಳಗಿಂದ ತನ್ನ ಉಪವನದ ಬೇಲಿಯ ಹೊರಗಡೆಗೆ ಹೋಗುವ ಮಾರ್ಗವನ್ನು ಅವರಿಗೆ ತೋರಿಸಿ ಕೊಟ್ಟನು; ಅವರು ಲಾರ್ಡಮೆಸಿಂಡೇಲನ ಮನೆಯಿಂದ ಹೊರಬೀಳುವಾಗ ಒಂದು ಪ್ರಚಂಡವಾದ ಮೊಟರು ಆ ಮನೆಯೆದುರು ಬಂದು ನಿಂತಿತು; ಹಾಗು ಅದರೊಳಗಿಂದ ಲೇಡಿ ಮೆಸಿಂಡೇಲಳು ಇಳಿದು ತಮ್ಮ ಮನೆಯೊಳಗೆ ಹೊಕ್ಕಳು.

ದಾರಿಗೆ ಬಂದ ಬಳಿಕ ಸ್ಮಿತ್ಥನು:—"ಒಡೆಯಾ, ನೀವು ಲಾರ್ಡ ಮೆಸಿಂಡೇಲನನ್ನು ನಿಮ್ಮ ಸವಿನಾತಿನಿಂದ ಚೆನ್ನಾಗಿ ಮೋಸಗೊಳಿಸಿದಿರಿ. ನೀವು ಅವನಿಗೆ ಏನೇನು ಹೇಳಿದಿರೋ ಅದನ್ನೆಲ್ಲ ಆತನು ನಂಬಿಬಿಟ್ಟನು.

ಬ್ಲೇಕ:--"ಅಹುದು. ಆತನ ಸಂದೇಹವನ್ನು ದೂರ ಮಾಡಲೇಬೇಕಿತ್ತು. ಎಲ್ಲ ಕಡೆಗೂ ನೋಡಿ ಹುಷಾರಿಯಿಂದ ನಡೆಯದಿದ್ದರೆ ಕೆಲಸ ಸಾಗುವ ಬಗೆ ಹೇಗೆ?"

"ಆ ವ ರೆ ಕರವಸ್ತ್ರದಿಂದಲೂ ಕಠಿಣಪ್ರಸಂಗವುಂಟಾಗಬಹುದಾಗಿದೆ. ಇದು ಯಾರದೆಂದು ನಾವು ತಿಳಿದಿರುವೆವೋ ಅವನದಾಗಿರದೆ ಕಿಲ್ಡೇಯಾರನದೇ ಆದರೆ?"

ಬ್ಲೇಕ:—"ಕಳ್ಳನನ್ನು ಸುಲಿಯಲಿಕ್ಕೆಂದು ಯಾವನು ಬಂದಿದ್ದನೋ ಇದು ಖಂಡಿತವಾಗಿಯೂ ಅವನ ಕರವಸ್ತ್ರವೇ. ಕಿಲ್ಡೇಯಾರನ ಕರವಸ್ತ್ರವು ಅವನ ಜೇಬಿನಲ್ಲೇ ಇವೆ. ಅದರಿಂದಲೇ ಅವನು ತನ್ನ ಹಣೆಯ ಮೇಲಿನ ಬೆವರನ್ನೊರಿಸಿಕೊಂಡದ್ದನ್ನು ನಾನು ಈಗತಾನೆ ನೋಡಿರುತ್ತೇನೆ."

ಸ್ಮಿತ್ಥನು ಮೋದಗೊಂಡು:—"ಹಾಗಿದ್ದರೆ ಇನ್ನು ಚಿಂತೆಗೆ ಕಾರಣವೇ ಇಲ್ಲ. ಆತನು ಕಾಲನಡಿಗೆಯಿಂದ ಹೋಗಿ ಯಾವುದೊಂದು ಮನೆಯನ್ನು ಪ್ರವೇಶಿಸಿದ್ದರೆ, ನಮ್ಮ ಟಾಯಗರವು ಅವನ ಪತ್ತೆಯನ್ನು ಖಂಡಿತವಾಗಿಯೂ ಹಚ್ಚುವದು."

ಅವರು ದಾರಿ ನಡೆಯುತ್ತಿರುವಾಗ ಒಂದು ಕೂಟಿಗೆ ಬಂದು ತಲುಪಿದರು. ಅಲ್ಲಿಂದ ಲಾರ್ಡ ಮೆಸಿಂಡೇಲನ ಉಪವನದ ಬೇಲಿಯು ನಾಲ್ವತ್ತು ಐವತ್ತು ಗಜ ದೂರದಲ್ಲಿರಬಹುದು. ಬ್ಲೇಕನು ಆ ಬೇಲಿಯ ಬಳಿಗೆ ಹೋಗಿ ಮತ್ತೆ ಆ ಕರವಸ್ತ್ರವನ್ನೆತ್ತಿಹಿಡಿದು ಟಾಯಗರಕ್ಕೆ ಅದರ ವಾಸನೆ ತೋರಿಸಬೇಕೆಂದು ಯೋಚಿಸಿ ಅಲ್ಲಿಗೆ ಹೋಗಿ ನಿಂತನು. ಅಷ್ಟರಲ್ಲಿ ಲಾರ್ಡ ಮೆಸಿಂಡೇಲನ ಮಗಳಾದ ಡಾಫನಿಯು ಆ ತಂತಿಯನ್ನು ಬೊಗ್ಗಿಸಿ ಉಪವನವನ್ನು ದಾಟಿ ಅತ್ಯಂತ ಗಾಬರಿಯಿಂದ ಇವರೆದುರಿಗೆ ಬಂದು ನಿಂತುಕೊಂಡಳು. ಅಂಜಿಕೆಯಿಂದ ಅವಳ ಮೋರೆಯು ಕಪ್ಪಿಟ್ಟಿತ್ತು. ಎದೆಯು ಡವಡವ ಎಂದು ನಡುಗುತ್ತಿತ್ತು. ಉಡಿಗೆಯು ವಿಶ್ರುಂಖಲವಾಗಿತ್ತು. ಅದು ಒಂದೆರಡುಕಡೆಗೆ ಮುಳ್ಳು ತಂತಿಗೆ ಸಿಕ್ಕು ಹರಿದು ಹೋಗಿತ್ತು. ತಲೆಗೂದಲುಗಳು ಹರವಿಬಿಟ್ಟಿದ್ದವು!

ಅಲ್ಲಿಗೆ ಬಂದವಳೇ ಡಾಫನಿಯು ತಡವರಿಸುತ್ತ:-"ಬ್ಲೇಕರೇ, ತಮ್ಮನ್ನು ಕಾಣುವ ಸಲುವಾಗಿ ನಾನು ಹಿಂಬಾಗಿಲಿನಿಂದ ಉಪವನವನ್ನು ಹೊಕ್ಕು ಬಹು ಕಷ್ಟದಿಂದ ಬೇಲಿಯ ಮುಳ್ಳು ತಂತಿಯನ್ನು ಬೊಗ್ಗಿಸಿ ಇಲ್ಲಿಗೆ ಬಂದಿರುತ್ತೇನೆ. ಅಪ್ಪನು ಅವ್ವನ ಕೂಡ ಈ ಕಳವಿನ ಬಗ್ಗೆ ಆಲೋಚಿಸುತ್ತಿರುವನು. ಅದರಿಂದಲೇ ನನಗೆ ಇಲ್ಲಿಗೆ ಬರಲು ಸುಯೋಗ ದೊರೆತು ಬಂದಿರುತ್ತದೆ. ನಾನು ಈಗಲೆ ಮರಳಿ ಹೋಗಬೇಕು. ತಡವಾದರೆ ಅನರ್ಥವೇ ಘಟಿಸಬಹುದಾಗಿದೆ. ಬ್ಲೇಕರೇ, ನಾನು ನಿಮ್ಮಲ್ಲೊಂದು ಭಿಕ್ಷೆ ಬೇಡಬಂದಿರುತ್ತೇನೆ. ನೀಡುವಿರಾ? ನೀವು ಕಳ್ಳನನ್ನು ಪತ್ತೆ ಹಚ್ಚಲು ಪ್ರಯತ್ನಿಸಬೇಡಿರಿ; ನನ್ನ ರತ್ನಾಲಂಕಾರಗಳು ಮರಳಿ ಸಿಗದಿದ್ದರೂ ಸರಿಯೇ."

ಬ್ಲೇಕ:—"ಕಳ್ಳನನ್ನು ಪತ್ತೆ ಹಚ್ಚಿ ಕೊಟ್ಟರೆ ನಿನಗಾಗುವ ಆಪತ್ತಿಯೇನು?"

ಡಾಫನಿಯು ಉದ್ವೇಗದಿಂದ ಒತ್ತರಿಸಿದ ಕಂಠದಿಂದ:—"ಆಪತ್ತಿಯೇನೆಂಬದು ನಿಮಗೇನು ಗೊತ್ತಿಲ್ಲವೇ? ನಿಮಗೆ ಖಂಡಿತವಾಗಿಯೂ ಗೊತ್ತಿವೆ. ನಾನು ಕಳ್ಳನನ್ನು ಗುರ್ತಿಸಿರುತ್ತೇನೆ ಅವನು ಲೆಫ್ಟನೆಂಟ ಕಿಲ್ಡೇಯಾರನ ಹೊರತು ಇನ್ನಾರೂ ಅಲ್ಲ. ನಾನು ನಮ್ಮಪ್ಪನಿಗೆ ನಿಜಸಂಗತಿ ತಿಳಿಸಿರುವದಿಲ್ಲ."

ಬ್ಲೇಕನು ಕೂಡಲೆ ಗಂಭೀರವಾಗಿ:—"ನೀನನ್ನುವದು ಅನ್ಯಾಯವು. ಒಂದೇ ಬಗೆಯ ಮುಖಲಕ್ಷಣವಿರುವವರು ಎಷ್ಟು ಮಂದಿಯಿಲ್ಲ? ಆಗ ನಿನ್ನ ಬುದ್ಧಿಯು ಸರಿಯಾಗಿರಲಿಕ್ಕಿಲ್ಲ. ನಿಜವಾಗಿಯೂ ನಿನಗೆ ದೃಷ್ಟಿ ವಿಭ್ರಮವಾಗಿರಬೇಕು."

ಡಾಫನಿ:—"ಖಂಡಿತವಾಗಿಯೂ ನಿಮಗೆ ಹೀಗೆಯೇ ಅನಿಸುತ್ತದೇನು?

ಬ್ಲೇಕನು ದೃಢಸ್ವರದಿಂದ:—ಖಂಡಿತ. ನಿಮ್ಮಪ್ಪನಿಗೆ ನಾನು ಏನೇನು ಹೇಳಿವೆನೋ ನಿನಗಾದರೂ ಅದನ್ನೇ ಹೇಳುತ್ತೇನೆ. ಕಿಲ್ಡೇಯಾರನ ಹತ್ತರ ನಿನ್ನಿಂದ ಅಪಹೃತವಾದ ಅಲಂಕಾರಗಳಿಲ್ಲವೆಂಬ ಮಾತನ್ನು ನಾನು ಬಲವಾಗಿ ಹೇಳಬಲ್ಲೆನು. ನಾನು ಹೇಳಿದ್ದನ್ನು ನೀನು ನಂಬಲೇಬೇಕು. ನನ್ನ ನಾಯಿಯು ಯಾರ ಪತ್ತೆಗೆ ಹೊರಟಿರುವದೋ ಅವನು ಕಿಲ್ಡೇಯಾರನಲ್ಲ; ಬೇರೆಯವನು. ನಿನ್ನ ಆಭರಣಗಳು ಸಿಕ್ಕದ್ದೇ ಆದರೆ ಅವು ಅವನಲ್ಲಿಯೇ ಸಿಗಬೇಕು."

ಡಾಫನಿ:—"ನೀವು ಈ ಬಗ್ಗೆ ನಿಸ್ಸಂದೇಹವುಳ್ಳವರಾಗಿದ್ದರೆ ನಾನು ನಿಮ್ಮ ಮಾತನ್ನು ಅವಶ್ಯವಾಗಿ ನಂಬುತ್ತೇನೆ."

ಬ್ಲೇಕ:—"ಡಾಫನೀ ಭಾರನನ್ನ, ನೀನು ನನ್ನ ಮಾತನ್ನು ನಂಬು. ನಿರರ್ಥಕವಾಗಿ ವ್ಯಾಕುಲಳಾಗಬೇಡ. ನೀನು ಮನೆಗೆ ಹಿಂದಿರುಗಿ ಹೋಗು; ತಡವಾದರೆ ಗೊಂದಲವುಂಟಾದೀತು."

ಡಾಫನಿ:—"ಬ್ಲೇಕರೇ, ನಿಮಗೆ ಧನ್ಯವಾದಗಳು. ನೀವು ನನ್ನ ಮನಸ್ಸಿನ ಭಾರವನ್ನು ಹಗುರು ಮಾಡಿದಿರಿ. ನಾನಿನ್ನು ಮೇಲೆ ಸುಖದಿಂದಿರಬಹುದೆಂದು ಅನಿಸುತ್ತದೆ."

ಬಳಿಕ ಡಾಫನಿಯು ಯಾವ ದಾರಿಯಿಂದ ಬಂದಿದ್ದಳೋ ಅದೇ ದಾರಿಯಿಂದ ಮನೆಗೆ ಹಿಂದಿರುಗಿದಳು. ಬ್ಲೇಕನು ಟಾಯಗರಕ್ಕೆ ಕರವಸ್ತ್ರದ ವಾಸನೆ ತೋರಿಸಿ ಅದನ್ನು ಕಳ್ಳನ ಅನುಸರಣಕ್ಕೆ ಕಳಿಸಿಕೊಟ್ಟನು; ಹಾಗು ಸ್ಮಿತ್ಥನೊಡನೆ ಆ ನಾಯಿಯ ಹಿಂದಿನಿಂದ ಲಗುಬಗನೆ ನಡೆದನು."

ಹೀಗೆ ನಡೆದಿರುವಾಗ ಸ್ಮಿತ್ಥನು:—"ಒಡೆಯಾ, ಕಿಲ್ಡೆಯಾರನು ಈ

ಕುತ್ತದಿಂದ ಪಾರಾಗುವಂತೆ ತೋರುತ್ತವೆ."

"ಹೌದು. ಲಾರ್ಡ ಮೆಸಿಂಡೇಲ ಹಾಗು ಆತನ ಮಗಳು ಇವರಿಂದ ಇನ್ನು ಆತನಿಗೆ ಯಾವ ವಿಪತ್ತೂ ಒದಗುವ ಸಂಭವವಿಲ್ಲ. ನಾನು ಅವರಿಬ್ಬರ ಸಂದೇಹವನ್ನೂ ದೂರ ಮಾಡಿರುತ್ತೇನೆಂದು ನನ್ನ ಆತ್ಮವಿಶ್ವಾಸವಿದೆ; ಆದರೆ ಕಿಲ್ಡೇಯೂರನು ಸಾಲದಲ್ಲಿ ಎಷ್ಟು ಮುಳುಗಿರುವನೋ ಅದರೊಳಗಿಂದ ಆತನು ಪಾರಾಗುವ ಆಶೆ ಮಾತ್ರ ಕಡಿಮೆ. ಅವನು ಮತ್ತಾವ ವಿಪತ್ತಿಗೀಡಾಗುವನೋ ಅದನ್ನಾರು ಹೇಳಬೇಕು? ಆತನ ಉಚ್ಛೃಂಖಲತೆ ಹಾಗು ಅಮಿತವ್ಯಯ ಇವುಗಳ ಬಗ್ಗೆ ಹಲವಾರು ಸುದ್ದಿಗಳು ಹಬ್ಬಿರುತ್ತವೆ. ಅವುಗಳೆಲ್ಲ ಅವನ ಸೋದರತ್ತೆಗೆ ತಿಳಿದರೆ ಅವಳು ಇವನನ್ನು ತನ್ನ ಸಂಪತ್ತಿನ ಉತ್ತರಾಧಿಕಾರತ್ವಕ್ಕೆ ವಂಚಿಸಿ ಬಿಡುವಳೆಂಬ ಬಗ್ಗೆ ನನಗೆ ಅನುಮಾನವಿಲ್ಲ. ಹಾಗೆ ಆದರೆ ಮಾತ್ರ ಅವನ ಸರ್ವನಾಶವೇ ಆಗುವದು. ಆತನ ನೌಕರಿಯೂ ಹೋಗುವದು. ಆತನು ಲಾರ್ಡ ಮೆಸಿಂಡೇಲನ ಮಗಳನ್ನು ಲಗ್ನವಾಗುವ ಆಶೆಯನ್ನೂ ತೊರೆಯ ಬೇಕು. ನಾನು ಅವನ ಬಗ್ಗೆ ಎಷ್ಟು ಎಚ್ಚರಪಟ್ಟರೂ ಕಡಿಮೆಯೇ ಆದೀತು."

ಆ ಮೇಲೆ ಯಾವ ಅಪರಿಚಿತ ವ್ಯಕ್ತಿಯು ಕಿಲ್ಡೇಯೂರನನ್ನು ಆಕ್ರಮಿಸಿ ಸಿದ್ದನೋ ಆತನ ಸಂಬಂಧದ ಮಾತು ಹೊರಡಲು, ಆತನಾರು? ಅವನು ಕಸಬುಗಾರ ಕಳ್ಳನಹುದೋ ಅಲ್ಲವೋ? ಅದಾವ ಉದ್ದೇಶದಿಂದ ಆತನು ಆಗ ಲಾ. ಮೆಸಿಂಡೇಲನ ಉಪವನದಲ್ಲಿ ನಿರೀಕ್ಷಿಸುತ್ತಿದ್ದ? ಇವೆಲ್ಲವು ತರ್ಕ-ವಿತರ್ಕಗ ಳಿಂದ ಗೊತ್ತಾಗಲಿಲ್ಲ. ಅದನ್ನೆಲ್ಲ ಅವರು ದುರ್ಭೇದ್ಯ ರಹಸ್ಯವೆಂದು ತಿಳಿದರು.

ನಾಯಿಯು ಆ ಕರವಸ್ತ್ರದ ವಾಸನೆಯನ್ನನುಸರಿಸುತ್ತ ಲಗುಬಗನೆ ದಕ್ಷಿಣ ದಿಕ್ಕಿಗೆ ಹೋಗಹತ್ತಿತು. ಅದು ಒಮ್ಮೆ ಕೂಡ ತನ್ನ ಗತಿಯನ್ನು ಬದ ಲಿಸಲಿಲ್ಲ; ಅಥವಾ ಬೇರೆ ಯಾವ ದಿಕ್ಕಿಗೂ ಹೊರಳಲಿಲ್ಲ. ಕಳ್ಳನು ದಾರಿಯಲ್ಲಿ ಯಾವುದೊಂದು ವಾಹನವನ್ನೇರಿ ತಾನು ಹೋಗತಕ್ಕ ಸ್ಥಳಕ್ಕೆ ಹೋಗಿರಬಹು ದೆಂದು ಬ್ಲೇಕನ ಅನುಮಾನವಿತ್ತು. ಹಾಗಾಗಿದ್ದರೆ ಟಾಯಗರವು ಅವನನ್ನು ಮುಂದೆ ಅನುಸರಣಮಾಡಲು ಶಕ್ತವಾಗುತ್ತಿರಲಿಲ್ಲ; ಆದರೆ ಟಾಯಗರವು ಶೆಫರ್ಡ ಮಾರ್ಕೇಟಿನೊಳಗಿಂದ ಪಿಕಾಡೇಲಿನಲ್ಲಿ ಹೊಕ್ಕು ನೆಲದ ಮೇಲಿನ ಮಣ್ಣನ್ನು ಮೂಸಿ ನೋಡನೋಡುತ್ತ ಒಂದು ಭವ್ಯವಾದ ಕಟ್ಟಡದ ಸುಪ್ರಶ ಸ್ತವಾದ ಹುಸಿಯಲ್ಲಿ ಹೋಗಬೇಕೆಂದು ಆಗ್ರಹ ತೋರಿಸಹತ್ತಿತು; ಮತ್ತು ಆ ಕಟ್ಟಡದ ಕಡೆಗೆ ಮೇಲೆ ಮೋರೆ ಮಾಡಿ ನೋಡಹತ್ತಿತು. ಅದು ಆ ಕಟ್ಟ ಡದ ಹುಸಿಯ ಪಾವಟಿಗೆಗಳ ಮುಂದೆ ತನ್ನ ಮುಂಗಾಲುಗಳೆರಡನ್ನೂ ಎತ್ತಿ, ತನ್ನ ಉದ್ದವಾದ ನಾಲಿಗೆಯನ್ನು ಚಾಚಿ, ಬ್ಲೇಕನ ಮೋರೆಯ ಕಡೆಗೆ ತೀಕ್ಷ್ಣ

ದೃಷ್ಟಿಯಿಂದ ಮೂರು ನಾಲ್ಕು ಸಾರೆ ಇಣುಕಿ, ತನ್ನ ಮನಸ್ಸಿನ ಭಾವವನ್ನು ವ್ಯಕ್ತಪಡಿಸಲಿಕ್ಕೆ ಪ್ರಯತ್ನಿಸಿತು.

ಸ್ಮಿತ್ಥನು ಆ ವಿಶಾಲವಾದ ಕಟ್ಟಡವನ್ನು ಕಂಡು:—"ಒಡೆಯಾ, ಇದಂತೂ ರೆನ್‌ಹ್ಯಾಮ್ ಕ್ಲಬ್ಬು"

ಬ್ಲೇಕ:—"ಇಲ್ಲಿಗೇ ಟಾಯಗರವ ಕೆಲಸವು ಮುಗಿಯಿತು ಇದಿನ್ನು ಮುಂದೆ ಅನುಸರಣ ಮಾಡಲಾರದು."

ಸ್ಮಿತ್ಥ:—"ಆ ಗೃಹಸ್ಥನು ಒಂದು ವೇಳೆ ಈ ಕ್ಲಬ್ಬಿನಲ್ಲಿ ಹೊಕ್ಕಿದ್ದರೆ ಆತನು ಖಂಡಿತವಾಗಿಯೂ ಕಳ್ಳನಲ್ಲ. ಇಷ್ಟು ದೊಡ್ಡ ಸನ್ಮಾನ್ಯ ಕ್ಲಬ್ಬಿನ ಯಾವನೊಬ್ಬ ಸದಸ್ಯನೂ ಕಳ್ಳನಿರುತ್ತಾನೆಂಬ ಸಂಗತಿಯನ್ನು ಒಡೆಯಾ, ಆದಾರೂ ನಂಬಲಾರರು."

ಬ್ಲೇಕ:—"ಈ ಕ್ಲಬ್ಬಿನ ಯಾವ ಸದಸ್ಯನೂ ಕಳ್ಳನಿರದಿದ್ದರೂ ಪ್ರಕೃತ ಕಾಲಕ್ಕೆ ಆ ಕಳ್ಳನು ಈ ಕ್ಲಬ್ಬಿನಲ್ಲಿ ಯಾವದೊಂದು ಬಗೆಯಿಂದ ಆಶ್ರಯ ಪಡೆದಿರುತ್ತಾನೆಂದು ನಾನು ನಿಸ್ಸಂದೇಹವಾಗಿ ಹೇಳಬಲ್ಲೆನು."

ಸಮೀಪದವರಾರಾದರೂ ತಮ್ಮನ್ನು ಕಂಡಗಿಂಡಾರೆಂಬ ಭಯದಿಂದ ಅವರು ಟಾಯಗರವನ್ನು ಜಗ್ಗಿಕೊಂಡು ತುಸ ದೂರ ಹೊರಟು ಹೋದರು. ಆ ಕಳವಿನ ರಹಸ್ಯವು ಹೆಚ್ಚು ತೊಡಕಿನದೆಂದು ಅವರಿಗೆ ಅನಿಸಿತು. ಯಾವ ಸುಲಿಗೆಗಾರನು ಕಿಲ್ಡೇಯಾರನನ್ನು ಸುಲಿದು ಆ ಎಲ್ಲ ರತ್ನಗಳನ್ನು ಅಪಹರಿಸಿರುವನೋ ಅವನು ಲಂಡನ್ನಿನ ಒಂದು ಮುಖ್ಯ, ಮುಂಚಿನಿಂದಲೂ ಗೌರವವುಳ್ಳ ಕ್ಲಬ್ಬಿನಲ್ಲಿ ಪ್ರವೇಶಿಸಿರುವನು! ಆ ಕ್ಲಬ್ಬಿನಲ್ಲಿ ಸರ್ವಸಾಧಾರಣ ಮನುಷ್ಯರಿಗೆ ಪ್ರವೇಶಾಧಿಕಾರವೇ ಇರಲಿಲ್ಲ. ಅದರಿಂದ ಆ ಕಳವು ಅತ್ಯಂತ ರಹಸ್ಯಮಯವಾಗಿತ್ತು.

ಆಗ ಬ್ಲೇಕ:—"ಈ ಟಾಯಗರವನ್ನು ಈಗ ಆ ಕ್ಲಬ್ಬಿನಲ್ಲಿ ಹೋಗಗೊಟ್ಟರೆ ಇದು ಆ ಕಳ್ಳನನ್ನು ಹಿಡಕೊಡಬಲ್ಲದು; ಆದರೆ ನಾನು ಈಗ ಇದಕ್ಕೆ ಹಾಗೆ ಮಾಡಗೊಡುವದಿಲ್ಲ. ಆ ಮನುಷ್ಯನಾರಿರಬೇಕೆಂಬದನ್ನು ನಾವು ಮೊದಲು ತಿಳಕೊಳ್ಳಬೇಕು."

ಅದಕ್ಕೆ ಸ್ಮಿತ್ಥ:—"ಕಳ್ಳನನ್ನು ಹಿಡಿಯುವ ಯೋಗ್ಯ ಸಂಧಿ ಮತ್ತು ಅನುಕೂಲತೆಗಳಿದ್ದರೂ ಅವನನ್ನು ಹಿಡಿಯಲಾಗದೆ? ಇದು ಆಶ್ಚರ್ಯಕರ ಮಾತಲ್ಲವೆ?"

ಬ್ಲೇಕ:—"ಹೌದು. ಖಂಡಿತವಾಗಿಯೂ ಅದ್ಭುತ ಹಾಗು ಆಶ್ಚರ್ಯದ ಸಂಗತಿಯೇ ಸರಿ; ಆದರೆ ಈ ಕಳವು ಸರ್ವಸಾಧಾರಣ ಬಗೆಯ ಕಳವಲ್ಲ;

ಕಳ್ಳನೂ ಸಾಧಾರಣ ಕಳ್ಳನಲ್ಲ. ಈ ಕಳವು ಘೋರತರ ರಹಸ್ಯ ಜಾಲದಿಂದ ತುಂಬಿದೆ. ಆ ರಹಸ್ಯವನ್ನು ಭೇದಿಸದ ವಿನಃ, ವಿಶೇಷವಾಗಿ ಆ ಸಂಬಂಧದ ಯಾವದೊಂದು ಸಂಧಾನವನ್ನು ದೊರಕಿಸುವ ವರೆಗೆ ನಾನು ಆ ಕಳ್ಳನನ್ನು ಹಿಡಿಯಲು ಪ್ರಯತ್ನಿಸುವದಿಲ್ಲ. ನನ್ನ ಮನಸ್ಸಿನಲ್ಲಿ ಹಲವು ಬಗೆಯ ಸಂದೇಹಗಳು ಹುಟ್ಟಿರುತ್ತವೆ. ಅವುಗಳಲ್ಲಿಯ ಒಂದು ಅನುಮಾನವು ಬಹು ಪ್ರಬಲವಾಗಿರುತ್ತದೆ. ನಾವು ಈ ರೆನ್ ಹ್ಯಾವರ್ ಕ್ಲಬ್ಬಿನ ವಿಷಯವನ್ನೇನೂ ಅರಿಯೆನು ಇದು ದೊಡ್ಡ ಕ್ಲಬ್ಬು; ಅದರಿಂದ ನನಗಿದು ಅಪರಿಚಿತವಾಗಿದೆ. ಎಷ್ಟೋ ದಿನಗಳ ಹಿಂದೆ ಕೆಲವು ಕೆಲಸಕ್ಕೆಂದು ನಾನು ಒಮ್ಮೆ ಈ ಕಟ್ಟಡವನ್ನು ನೋಡಿದ್ದೆನು; ಆದರೆ ಕಳೆದ ಒಂದೆರಡು ವರ್ಷಗಳಲ್ಲಿ ನಾನು ಈ ಕಡೆಗೆ ಬಂದಿಲ್ಲ. ಒಬ್ಬ ಗೃಹಸ್ಥನು ಈ ಕ್ಲಬ್ಬಿನ ಸದಸ್ಯನಿರಬಹುದೆಂದೆನಿಸುತ್ತದೆ; ಆದರೆ ಆತನು ಮುಂಬರಸಿರುವದು ನಿಜವೋ ಸುಳ್ಳೋ............"

ಬ್ಲೇಕನು ತನ್ನ ವಾಕ್ಯವನ್ನು ಪೂರ್ತಿಗೊಳಿಸದೇನೇ ಸಮೀಪದಲ್ಲಿದ್ದ ಒಂದು ಟ್ಯಾಕ್ಸಿಯ ಸೋಫಾರನನ್ನು ಕೂಗಿ ಕರೆದು ಅವನ ಟಾಕ್ಸಿಯಲ್ಲಿ ಕುಳಿತನು; ಹಾಗು ಸ್ಮಿತ್ಥನನ್ನು ಕುರಿತು:—"ಸ್ಮಿತ್ಥ, ಇನ್ನು ಮನೆಗೆ ಹೋ-ಗೋಣ ನಡೆ. ಮೊದಲು ಕಿಲ್ಡೇಯಾರನಿಗೆ ಕೆಲ ಗೌಪ್ಯ ಸಂಗತಿಯ ಬಗ್ಗೆ ವಿಚಾರಿಸುವದು ಅವಶ್ಯವಿದೆ. ಆ ಮೇಲೆ ಮುಂದೇನು ಮಾಡಬೇಕೆಂಬ ದನ್ನು ಸ್ಥಿರಪಡಿಸೋಣ."

---

## ನೀನು ಅವನನ್ನು ಯಾವಾಗಲೂ ನೆಳಲಿನಂತೆ ಕಾದಿರು.

ಬ್ಲೇಕನು ಸ್ಮಿತ್ಥ ಮತ್ತು ಟಾಯಗರರೊಡನೆ ಲಾರ್ಡ ಮೆಸಿಂಡೇಲನ ಮನೆಯ ಕಡೆಗೆ ಹೊರಟು ಹೋಗಲು ಕಿಲ್ಡೇಯಾರನೊಬ್ಬನೇ ಬ್ಲೇಕನ ಕೂಡ್ರುವ ಕೋಣೆಯಲ್ಲಿ ಕುಳಿತು ತನ್ನ ಎರಡೂ ಕೈಗಳ ಮೇಲೆ ತಲೆಯನ್ನಿರಿಸಿ ಕೊಂಡು ತನ್ನ ದುರ್ಭಾಗ್ಯದ ಸಂಗತಿಯನ್ನು ಕುರಿತು ಯೋಚಿಸುತ್ತಿದ್ದನು. ಬಹು ದೀರ್ಘ ಕಾಲದ ವರೆಗೂ ಆತನ ಆ ಚಿಂತೆಯು ಮುಗಿಯಲಿಲ್ಲ. ಬ್ಲೇಕ ನು ಟ್ಯಾಕ್ಸಿಯಿಂದಿಳಿದು ಮನೆಯೊಳಗೆ ಬಂದನು. ಮೆಟ್ಟಲಿನ ಮೇಲಿನ ಆತನ ಹಾಗು ಸ್ಮಿತ್ಥನ ಕಾಲುಗಳ ಶಬ್ದವನ್ನು ಕೇಳಿ ಆತನ ಚಿಂತೆಯ ಪ್ರವಾಹವು ಕಟ್ಟಾಯಿತು. ಅವನು ಕುರ್ಚಿಯ ಮೇಲೆ ಸರಿಯಾಗಿ ಕುಳಿತನು. ಅಷ್ಟರಲ್ಲಿ ಟಾಯಗರ ಹಾಗು ಸ್ಮಿತ್ಥರೊಡನೆ ಬ್ಲೇಕನು ಆ ಕೋಣೆಯನ್ನು ಪ್ರವೇಶಿಸುತ್ತಿ ರುವದನ್ನು ಕಂಡು ಉತ್ಸುಕತೆಯಿಂದ ಬ್ಲೇಕನ ಮೋರೆಯ ಕಡೆಗೆ ನೋಡಿ ದನು; ಹಾಗು ಬ್ಲೇಕನನ್ನುದ್ದೇಶಿಸಿ:—"ನೀವು ಹೋಗಿದ್ದ ಕೆಲಸವು ಗಂಡಾ

ಯಿತೋ-ಹೆಣ್ಣಾಯಿತೋ?" ಎಂದು ಕೇಳಿದನು.

ಅದಕ್ಕೆ ಬ್ಲೇಕ:—"ಹೌದು; ಗಂಡೇ ಆಯಿತು; ನಿನಗೆ ವಿಶೇಷ ಆಶಾಪ್ರದವೇ ಆಗಿವೆ, ಎಂಬದನ್ನು ನಾನು ನಿನಗೆ ಸಂತೋಷದಿಂದ ತಿಳಿಸುತ್ತೇನೆ; ಆವರೆ ನೀನು ಬಹುಶಃ ಎಲ್ಲ ಕಡೆಗೂ ಪಾಳಿಯಾಗಿ ಬಿಟ್ಟಿರುತ್ತೀ. ಮಿಸ್ ಭಾರನನ್ನಾಳು ನಿನ್ನನ್ನು ಚೆನ್ನಾಗಿ ಗುರ್ತಿಸಿರುತ್ತಾಳೆ."

ಕಿಲ್ಡೇಯಾರನು ವಿಹ್ವಲ ದನಿಯಿಂದ.—"ಎಂಥ ಕೇಡಿದು? ನನಗಾದರೂ ಅದೇ ಬಗೆಯ ಸಂಶಯವುಂಟಾಗಿತ್ತು. ಹಾಗಾದರೆ ನನಗೀ ಸಂಕಟದೊಳಗಿಂದ ಪಾರಾಗಲಿಕ್ಕೆ ಆಶೆಯಿಲ್ಲಿ?"

ಬ್ಲೇಕ:—"ಬೇಡ; ಕಿಲ್ಡೇಯಾರ, ನೀನಿನ್ನು ಹತಾಶನಾಗಬೇಡ. ನಾನು ಡಾಫನಿಗೆ ಹೇಳಿದೆನೇನಂದರೆ,-'ಆ ವಿಷಯದಲ್ಲಿ ನಿನ್ನ ದೃಷ್ಟಿಗೆ ವಿಭ್ರಮವಾಗಿದೆ. ನಿನ್ನಲ್ಲಿ ಯಾವನು ಕಳವು ಮಾಡಿದನೋ ಅವನು ಬೇರೆಯವನೊಬ್ಬ; ಕಿಲ್ಡೇಯಾರನಲ್ಲ.' ಲಾರ್ಡ ಮೆಸಿಂಡೇಲರೂ ನನ್ನ ಮಾತನ್ನು ನಂಬಿರುತ್ತಾರೆ."

ಬ್ಲೇಕನು ಲಾರ್ಡ ಮೆಸಿಂಡೇಲನ ಮನೆಗೆ ತಲುಪಿದಾಗಿನಿಂದ ಅಲ್ಲಿ ಏನೇನು ನಡೆಯಿತೋ ಅವನ್ನೆಲ್ಲವನ್ನೂ ಕಿಲ್ಡೇಯಾರನಿಗೆ ಸವಿಸ್ತರವಾಗಿ ತಿಳಿಸಿದನು. ಕಿಲ್ಡೇಯಾರನು ನಿಸ್ತಬ್ಧನಾಗಿ ಕುಳಿತು ಅದೆಲ್ಲವನ್ನೂ ಕೇಳಿಕೊಂಡನು. ಕೇಳಿ ಕೇಳಿದ ಹಾಗೆ ಆತನ ಮುಖಭಾವವು ಮತ್ತೆ ಬದಲಾಯಿಸಿತೆಂಬದು ಬ್ಲೇಕನಿಗೆ ತಿಳಿಯದಿರಲಿಲ್ಲ.

ಬ್ಲೇಕನ ಹೇಳಿಕೆಯೆಲ್ಲ ಮುಗಿದ ಬಳಿಕ ಕಿಲ್ಡೇಯಾರನು ಕೃತಜ್ಞತಾದೃಷ್ಟಿಯಿಂದ ಬ್ಲೇಕನ ಮೋರೆಯ ಕಡೆಗೆ ನೋಡಿ ಆವೇಗಭರದಿಂದ:—"ಬ್ಲೇಕರೇ, ಈ ಹೀನ, ದೀನ, ಮಹಾ ಪಾಪಿಷ್ಠ ಮನುಷ್ಯನನ್ನು ನೀವು ಚಿರ ಕೃತಜ್ಞತಾ ಪಾಶದಿಂದ ಬಿಗಿದು ಬಿಟ್ಟಿರುತ್ತೀರಿ. ನಾನು ನಿಮ್ಮ ದಯೆಗೆ ಸಂಪೂರ್ಣ ಅಯೋಗ್ಯನೆಂಬದನ್ನು ತಿಳಿದೂ ತಿಳಿದು, ನನ್ನನ್ನು ಶೋಚನೀಯ ಅಧಃಪತನದಿಂದ ಸಂರಕ್ಷಿಸಲೆಂದು ನನ್ನ ಎಲ್ಲ ದೋಷಗಳನ್ನು ಮುಚ್ಚಿಬಿಟ್ಟಿರುತ್ತೀರಿ. ನನ್ನ ಮೇಲೆ ತೋರಿಸಿದ ನಿಮ್ಮ ಕರುಣೆಗೆ ಮೇರೆಯೇ ಇಲ್ಲ. ನಿಮ್ಮನ್ನು ಹೇಗೆ ಅಭಿನಂದಿಸಬೇಕೆಂಬುವೇ ನನಗೆ ತಿಳಿಯದಾಗಿದೆ. ನೀವು ಡಾಫನಿ ಮತ್ತು ಅವಳ ತಂದೆಯ ಮನಸ್ಸಿನೊಳಗಿನ ನನ್ನ ವಿಷಯದ ಸಂದೇಹವನ್ನು ದೂರೀಕರಿಸಲು ಸಮರ್ಥವಾದರೆ, ಅವರಿಂದ ಭವಿಷ್ಯತ್ ಕಾಲದಲ್ಲಿ ನಾನು ಅವರನ್ನು ಕಂಡರೂ ಅವರು ನನ್ನೊಡನೆ ಖಂಡಿತವಾಗಿಯೂ ಈ ಅಪ್ರೀತಿಕರ ಪ್ರಸಂಗವನ್ನು ಎತ್ತಲಾರರು; ಅವರು ನನ್ನಲ್ಲಿ ತಮ್ಮ ವಿಲಕ್ಷಣ

ಆಚರಣೆಯನ್ನು ತೋರಲಾರರು. ನನ್ನ ಇಂದಿನ ಈ ದುರ್ಘಟನೆಯ ಮೇಲೆ ಪರವೆ ಬಿದ್ದಿತೆಂದು ತಿಳಿಯಬಹುದು. ನೀವು ನನ್ನನ್ನು ಧ್ವಂಸದ ರಸಾತಲ ಗರ್ತದಿಂದ ಎತ್ತಿ ಅದ್ಭುತ ಕೌಶಲ್ಯದಿಂದ ಉದ್ಧರಿಸಿರುತ್ತೀರಿ."

ಬ್ಲೇಕನು ಕಿಲ್ಡೇಯಾರನ ಮಾತಿನ ಬಗ್ಗೆ ಕೊಂಚವೂ ಉತ್ಸಾಹವನ್ನು ತೋರದೆ, ಗಂಭೀರವಾಗಿ:-"ಹೀಗೆಯೆ ಆಗಲೆಂದು ಆಶಿಸುತ್ತೇನೆ." ಎಂದಂದನು.

ಕಿಲ್ಡೇಯಾರ:—"ಕೇವಲ ಅಷ್ಟೇ ಅಲ್ಲ; ನಾನು ಸಾ ಲಿಬರ್ನ ಕಂಪನಿಗೆ ಕೊಡಬೇಕಾದ ಹಣವನ್ನೂ ನೀವು ದಯವಿಟ್ಟು ನನಗೆ ಕೊಡಲಿಕ್ಕೆ ಒಪ್ಪಿದ್ದರಿಂದ ನಾನು ನಾಳೆಯ ದಿನ ಸೆರೆಹಿಡಿಯಲ್ಪಡುವುದೂ ತಪ್ಪಿತು. ಎಷ್ಟು ತೀವ್ರವಾದೀತೋ ಅಷ್ಟು ತೀವ್ರವಾಗಿ ನಾನು ನಿಮ್ಮ ಸಾಲವನ್ನು ತೀರಿಸುತ್ತೇನೆ. ಈ ಸಾರೆ ಈ ದಾರುಣ ಸಂಕಟಕ್ಕೆ ಸಿಕ್ಕು ನನಗೆ ಯೋಗ್ಯವಾದ ಶಿಕ್ಷೆಯಾಗಿದೆ. ಈ ಶಿಕ್ಷೆಯನ್ನು ನಾನು ಸಾಯುವವರೆಗೂ ಮರೆಯುವದಿಲ್ಲ ಇನ್ನು ಮೇಲೆ ನಾನು ನನ್ನ ಸಾವುಕಾರರೊಡನೆ ಅವರಿಗೆ ಕೊಡುವ ಸಾಲಗಳ ಬಗ್ಗೆ ಕಂತಗಳನ್ನು ಮಾಡಿಕೊಂಡು ಸಾವಕಾಶವಾಗಿ ಅವರ ಸಾಲವನ್ನೆಲ್ಲ ತೀರಿಸುತ್ತೇನೆ. ನನ್ನ ಆದಾಯವೆಷ್ಟೋ ಅದಕ್ಕಿಂತ ಒಂದು ಪೇನ್ಸು ಕೂಡ ಹೆಚ್ಚು ಖರ್ಚ ಮಾಡಲಾರೆನು. ಎಲ್ಲಿಯವರೆಗೆ ನನ್ನ ಲಗ್ನವಾಗಿಲ್ಲವೋ ಅಲ್ಲಿಯವರೆಗೂ ಹೀಗೆಯೇ ಸತ್ತು ಕೆಟ್ಟು ಸಾಗಿಸುವೆನು. ಇನ್ನು ನಾಲ್ಕಾರು ತಿಂಗಳಲ್ಲೇ ನಮ್ಮಗಳ ವಿವಾಹವು ನಿರ್ವಿಘ್ನವಾಗಿ ನೆರವೇರಬಹುದೆಂದು ನನಗನಿಸುತ್ತದೆ. ಇನ್ನು ಕೆಲ ತಿಂಗಳು ಕಷ್ಟವಾದೀತಷ್ಟೇ. ಇನ್ನೇನು ಮಾಡಲಿ? ನನ್ನ ಎದೆಯ ಮೇಲೆ ಸಾವಿರಾರು ಮಣಗಳ ಭಾರವನ್ನು ಒತ್ತಿ ಹೇರಲಾಗಿತ್ತು. ಆ ಭಾರದಿಂದ ನಾನು ಹಿಚುಕಿ ಹೋಗಿದ್ದೆನು. ನೀವು ಅದನ್ನು ದೂರ ಬಿಸುಟಿ, ಕೆಳಗಿನ ಕೆಸರಿನೊಳಗಿಂದ ನನ್ನನ್ನು ಮೇಲಕ್ಕೆತ್ತಿಕೊಂಡಿರುತ್ತೀರಿ."

ಬ್ಲೇಕ:—ಆದರೆ ಒಂದು ಮಾತನ್ನು ಮರೆತರೆ ನಡೆಯುವಂತಿಲ್ಲ. ಅಪಹೃತವಾದ ರತ್ನಾಭರಣಗಳನ್ನು ಪತ್ತೆ ಹಚ್ಚಿಕೊಡುವ ಭಾರವನ್ನು ನಾನು ಹೊತ್ತಿರುತ್ತೇನೆ. ಆ ಬಗ್ಗೆ ಏನು ಉಪಾಯ ಮಾಡಬೇಕು? ನಾನಿನ್ನು ಸುಮ್ಮನೆ ಕೊಡ್ರುವಂತಿಲ್ಲ."

ಕಿಲ್ಡೇ:—"ಅಹುದಹುದು; ಅದನ್ನು ಮರೆತೇ ಬಿಟ್ಟಿರುತ್ತೇನೆ. ಯಾವ ದಾರಿಹೋಕನು ನನ್ನ ಜೇಬಿನೊಳಗಿನ ಆ ಅಲಂಕಾರಗಳನ್ನೆಲ್ಲ ಎತ್ತಿಹಾಕಿ ಓಡಿ ಹೋಗಿರುತ್ತಾನೋ ಅಂಥವನು ರೆನ್‌ಹ್ಯಾಮ್ ಕ್ಲಬ್ಬಿನಂತಹ ಉಚ್ಚ-ಸನ್ಮಾನ್ಯ ಕ್ಲಬ್ಬಿನಲ್ಲಿ ಆಶ್ರಯ ಹೊಂದಿರುವದು ಬಹು ವಿಸ್ಮಯದ ಮಾತೇ ಸರಿ. ಈ ವಿಷಯದಲ್ಲಿ ನಿಮ್ಮ ನಾಯಗರವು ಮೋಸ ಹೋಗಿರಲಿಕ್ಕಿಲ್ಲವಷ್ಟೇ?"

ಬ್ಲೇಕ:—"ಖಂಡಿತವಾಗಿಯೂ ಇಲ್ಲ. ಇದು ಬಹು ವಿಚಿತ್ರರಹಸ್ಯವಾಗಿವೆ. ಈ ರಹಸ್ಯವನ್ನು ಭೇದಿಸವೆ ಬಿಡುವಂತಿಲ್ಲ. ಆತನಾರೆಂಬ ಬಗ್ಗೆ ನೀನು ಅನುಮಾನಿಸಬಲ್ಲೆಯಾ?"

ಕಿಲ್ಡೇಯಾರನು ನಕಾರದರ್ಶಕ ಗೋಣನ್ನಲ್ಲಾಡಿಸಿ:--"ಇಲ್ಲ; ಅದನ್ನು ನಾನು ಅನುಮಾನದಿಂದ ನಿರ್ಧರಿಸಿ ಹೇಳಲಾರೆನು. ಈ ಅದ್ಭುತ ವ್ಯಾಪಾರದ ಬಗ್ಗೆ ನಾನು ನಿಮ್ಮಂತೆ ವಿಸ್ಮಿತನೂ ಸ್ತಂಭಿತನೂ ಆಗಿರುತ್ತೇನೆ. ನಿವಾರಿಸಲು ಅಶಕ್ಯವಾದೀ ರಹಸ್ಯಾಂಧಕಾರದಲ್ಲಿ ಬೆಳಕಿನ ಒಂದು ಕ್ಷೀಣಕಿರಣವನ್ನು ಕೂಡ ಕಾಣದಾಗಿದ್ದೇನೆ."

ಬ್ಲೇಕ:—"ಆದರೆ ಈ ಘಟನೆಯು ಆಕಸ್ಮಿಕವಾದದ್ದಲ್ಲ. ಯಾವ ದುರುಳನು ನಿನ್ನ ಕಿಸೆ ಕತ್ತರಿಸಿರುವನೋ, ಅವನು ಇಂದಿನ ರಾತ್ರಿಯಲ್ಲಿ ಖಂಡಿತವಾಗಿಯೂ ಲಾರ್ಡ ಮೆಸಿಂಡೇಲರ ಉಪವನದ ವರೆಗೂ ನಿನ್ನನ್ನನುಸರಿಸಿ ಬಂದಿರುವನು. ನೀನು ಎಂದೂ ಧರಿಸದ ಮಾಸಿದ ಉಡುಪಿನಿಂದ ಸಜ್ಜಾದದ್ದನ್ನು ಕಂಡು, ನಿನ್ನ ಹೇತು ಸರಲವಾಗಿಲ್ಲವೆಂದು ಆತನು ಅರಿತಿರಬೇಕು; ಹಾಗೆ ಆತನು ತಿಳಿದಿದ್ದರೆ ಆತನು ಖಂಡಿತವಾಗಿಯೂ ನಿನ್ನನ್ನನುಸರಿಸಿ ಬರುತ್ತಿರಲಿಲ್ಲ. ನನ್ನೀ ಅನುಮಾನವು ನಿಜವಾದರೆ, ನೀನು ಆತನಿಗೆ ಹೆಚ್ಚಾಗಿ ಪರಿಚಿತನಿರಬೇಕೆಂಬದನ್ನು ಒಪ್ಪಲೇಬೇಕಾಗುವದು. ಇಷ್ಟೇ ಅಲ್ಲ, ನಿನ್ನ ರೀತಿ-ನಡಾವಳಿ, ಪ್ರಸ್ತುತದ ನಿನ್ನ ಆರ್ಥಿಕ ಸ್ಥಿತಿ ಮುಂತಾದ ಅನೇಕ ವ್ಯಕ್ತಿಗತ ಸಂಗತಿಗಳೂ ಆತನಿಗೆ ಗೊತ್ತಿರಲಿಕ್ಕೆ ಬೇಕು."

ಕಿಲ್ಡೇಯಾರನು ಚಿಂತಾಗ್ರಸ್ತ ಚಿತ್ತದಿಂದ:-"ದಾರಿಯಲ್ಲಿ ನಾನು ಯಾವ ಗುರ್ತಿನ ಗೃಹಸ್ಥನನ್ನೂ ಕಾಣಲಿಲ್ಲ. ನಾನು ಆತನನ್ನು ಕಂಡಿರದಿದ್ದರೂ ಒಂದು ವೇಳೆ ಆತನೇ ನನ್ನನ್ನು ಕಂಡಿರಬಹುದು.

ಬ್ಲೇಕ:—"ಹಾಗೂ ಆಗುವ ಸಂಭವವುಂಟು. ಅದಿರಲಿ. ನೇಭಿಲ ಹರಕೋರ್ಟನು ರೆನ್‌ಹ್ಯಾಮ್ ಕ್ಲಬ್ಬಿನ ಸದಸ್ಯನಹುದೋ-ಅಲ್ಲವೋ ಹೇಳು ನೋಡೋಣ."

ಕಿಲ್ಡೇಯಾರನು ಚಕಿತಭಾವದಿಂದ ಮೋರೆಯನ್ನೆತ್ತಿ ತೀಕ್ಷ್ಣ ದೃಷ್ಟಿಯಿಂದ ಬ್ಲೇಕನ ಮುಖದ ಕಡೆಗೆ ಇಣುಕಿ:—"ಅಹುದು. ಅವನು ರೆನ್‌ಹ್ಯಾಮ್ ಕ್ಲಬ್ಬಿನ ಮುಖ್ಯ ಸದಸ್ಯರಲ್ಲೊಬ್ಬನಾಗಿರುತ್ತಾನೆ. ಅವನು ನನ್ನನ್ನೆಷ್ಟೋ ಸಾರೆ ಆ ತನ್ನ ಕ್ಲಬ್ಬಿಗೆ ಕರೆದೊಯ್ದಿದ್ದನು."

ಬ್ಲೇಕ:—"ನೀನು ಜೂಜಿನ ಅಡ್ಡೆಗೆ ಜೂಜಾಡಲಿಕ್ಕೆ ಹೋಗುತ್ತಿದ್ದೆಯಲ್ಲ, ಅದು ಅವನ ಜೊತೆಯಲ್ಲೇ ಏನು?"

ಕಿಲ್ಡೇ:—"ಅಹುದು. ಅವನೇ ನನ್ನನ್ನು ಜೂಜಿನ ಅಡ್ಡೆಗೆ ಎಳೆದೊಯ್ಯುತ್ತಿದ್ದನು. ಜೂಜನ್ನಾಡಿದವ ಒಂದೇ ರಾತ್ರಿಯಲ್ಲಿ ಧನಿಕನಾಗಬಹುದೆಂಬ ಸಂಗತಿಯನ್ನು ನಾನು ಆತನಿಂದಲೇ ಕೇಳಿಕೊಂಡೆನು. ನಾನು ಹೇಗಾದರೂ ಹೆಚ್ಚು ಹಣವಂತನಾಗಬೇಕೆಂಬ ಬಗ್ಗೆ ಆತನು ಹೆಚ್ಚಾಗಿ ಪ್ರಯತ್ನಿಸುತ್ತಿದ್ದನು; ಆದರೆ ನನ್ನ ದುರ್ಭಾಗ್ಯಕ್ರಮದಿಂದ ನಾನು ಕೃತಕಾರ್ಯನಾಗಲಿಲ್ಲ."

ಬ್ಲೇಕನು ಸ್ವಾಭಾವಿಕ ದನಿಯಿಂದ:-"ಬಂಧುವಿನ ಕೆಲಸವಲ್ಲವೇ ಅದು! ಏನೇ ಆಗಲಿ, ನೀನು ಯಾವಾಗ ದ್ರವ್ಯಾಭಾವದಿಂದ ಹೆಚ್ಚಾಗಿ ಪೇಚಿಗೆ ಬೀಳುತ್ತಿದೆಯೋ ಆವಾಗ ಆ ಬಂಧುವೇ ನಿನಗೆ ಸಾ-ಲಿಬರ್ನ ಕಂಪನಿಯಿಂದ ಹಲವು ರತ್ನಾಲಂಕಾರಗಳನ್ನು ಸಾಲವಾಗಿ ಪಡೆಯಲಿಕ್ಕೂ, ತದನಂತರ ಅವುಗಳನ್ನು ಬೇರೆ ಸಾವುಕಾರರಲ್ಲಿ ಒತ್ತಿ ಇಟ್ಟರೆ ನಿನ್ನ ದ್ರವ್ಯಾಭಾವವು ಪರಿಹರಿಸುವದೆಂದೂ ಹೇಳಿದನಲ್ಲವೆ? ಹಾಗು ಆ ಹಣದಿಂದ ಜೂಜು ಆಡಿದರೆ ನಿನ್ನ ಭಾಗ್ಯದಿಂದ ಅಪರಿಮಿತ ಹಣ ದೊರೆಯುವದೆಂದೂ ಹೇಳಿದನಲ್ಲವೆ?"

ಕಿಲ್ಡೆ:—"ಅಹುದು; ಆತನು ನನಗೆ ಹಾಗೆಂದು ಹೇಳಿದನು ನಾನು ಆತನ ಸಲಹೆಯ ಮೇರೆಗೆ ಕಾರ್ಯ ಮಾಡಿ ವಿಪತ್ತಿಗೀಡಾದೆನೆಂಬದು ನನ್ನ ಅದೃಷ್ಟದ ದೋಷವೇ ಹೊರತು, ಇದರಲ್ಲಿ ಆತನ ದೋಷ ಕೊಂಚವಾದರೂ ಇರುವದೆಂದು ಕಂಡು ಬರುವದಿಲ್ಲ. ಆತನು ನನ್ನ ಹಿತಕರ್ತ್ಯನೆಂದೇ ನನಗಿದೆಲ್ಲ ಸಲಹೆಕೊಟ್ಟಿದ್ದನು; ಆದರೆ ಆತನ ವಿಷಯವಾಗಿ ನೀವು ಇದನ್ನೆಲ್ಲ ಕೇಳುತ್ತಿರುವುದೇಕೆ? ಈ ಕಳವಿನ ವ್ಯವಹಾರಕ್ಕೆ ಆತನಂತಹ ಸನ್ಮಾನ್ಯ ಬಂಧುವಿನ ಸಂಬಂಧವೇನಾದರೂ ಇದೆಯೋ ಹೇಗೆ?........"

ಬ್ಲೇಕನು ಆತನ ಮಾತಿಗೆ ತಡೆಯನ್ನುಂಟುಮಾಡಿ:—"ನಾನು ಇನ್ನು ಒಂದೇ ಪ್ರಶ್ನೆಯನ್ನು ನಿನಗೆ ಕೇಳುತ್ತೇನೆ. ನಿನಗೂ ಮಿಸ್ ಭಾರನನ್ನಳಿಗೂ ಪರಿಚಯವಾಗುವ ಮೊದಲು ನೇಭಿಲ ಹರಕೋರ್ಟನು ಅವಳನ್ನು ಪ್ರೀತಿಸುತ್ತಿದ್ದನೇ?"

ಕಿಲ್ಡೇಯಾರನು ಕ್ಷಣ ಕಾಲ ಸುಮ್ಮನಿದ್ದು, ನಂತರ:-"ನನಗಂತೂ ಹಾಗೆಯೇ ಅನಿಸುತ್ತದೆ; ನಿಜವನ್ನು ಅರಿಯೆನು; ಆದರೆ ಹಿಂದಕ್ಕೊಮ್ಮೆ ಆತನು ಡಾಫನಿಯನ್ನೊಲಿಸಿಕೊಳ್ಳುವ ಬಗ್ಗೆ ಪ್ರಯತ್ನಪಡುತ್ತಿದ್ದನೆಂಬದನ್ನೂ ಆದರೂ ಡಾಫನಿಯಿಂದ ಯಾವ ಪ್ರೋತ್ಸಾಹವೂ ಅವನಿಗೆ ತೋರಲಿಲ್ಲವೆಂಬದನ್ನೂ ಕೇಳಿ ತಿಳಿದಿರುವೆನು?"

ಬ್ಲೇಕೆ:—"ನಿನ್ನಿಂದ ಇನ್ನೇನೂ ಕೇಳಿಕೊಳ್ಳತಕ್ಕದ್ದಿಲ್ಲ; ಈಗ ಕೇಳಿತಿಳಿದದ್ದೇ ಸಾಕಷ್ಟಾಯಿತು; ಆತನ ಇಂಗಿತವನ್ನು ಚನ್ನಾಗಿ ತಿಳಿದುಕೊಂಡೆನು."

ಕಿಲ್ಡೇಯಾರನು ವಿಸ್ಮಯಭರದಿಂದ:—"ಇಂಗಿತವೇ! ಆತನ ಇಂಗಿತವನ್ನೇನು ತಿಳಕೊಂಡಿರಿ? ಬ್ಲೇಕರೇ, ನೀವು ಏನು ಅನ್ನುತ್ತಿರುವಿರೋ ತಿಳಿಯದಾಗಿದೆ."

ಬ್ಲೇಕನು ತೀಕ್ಷ್ಣದೃಷ್ಟಿಯಿಂದ ಅವನ ಮೋರೆಯಕಡೆಗೆ ನೋಡುತ್ತ: "ಏನೂ ತಿಳಿಯಲಾಗುವದಿಲ್ಲಲ್ಲವೇ? ಸರಿ. ಸರಿ. ಅಷ್ಟು ಬುದ್ಧಿ ಇದ್ದರೆ ನಿನ್ನ ಗತಿಯು ಹೀಗೇಕಾಗುತ್ತಿತ್ತು?"

ಕಿಲ್ಡೆ:—"ನಾನು ಅಜ್ಞನೂ ಅದೂರದರ್ಶಿಯೂ ಎಂಬನು ತಿಳಿದೇ ಹೋಗಿದೆ; ಹಾಗು ಆ ಬಗ್ಗೆ ನನಗೆ ಬಿಂದುಮಾತ್ರವೂ ಸಂದೇಹವಿರುವದಿಲ್ಲ: ಆದರೆ ನೀವೇನು ಅನ್ನುತ್ತಿರುವಿರೆಂಬದನ್ನು ನನಗೆ ಚನ್ನಾಗಿ ತಿಳಿ ಹೇಳಿರಿ; ನನ್ನನ್ನಿನ್ನು ಕಾರ್ಗತ್ತಲೆಯಲ್ಲಿರಿಸಬೇಡಿರಿ."

ಬ್ಲೇಕನು ಧೀರ ಗಂಭೀರ ಸ್ವರದಿಂದ:—"ನೀನು ತೀರ ಅಜ್ಞನೋ-ತೀರ ಘರಲನೋ ನಾನದನ್ನು ಸ್ಥಿರಪಡಿಸಲಾರೆನು. ಈಗ ನನ್ನೆದುರಿಗೆ ಎಲ್ಲವೂ ಸರಿ ಹ್ಯಾಕರವಾಗಿ, ಉಜ್ವಲವಾದ ಬೆಳಕಿನಲ್ಲಿ ಎಲ್ಲ ವಿಷಯವೂ ಸುಸ್ಪಷ್ಟವಾಗಿ ಕಾಣಿಸುತ್ತಿದೆ. ನೀನು ಯಾವಾತನನ್ನು ನಿನ್ನ ಪರಮ ಬಂಧುವೂ ಹಿತಕರ್ತೃವೂ ಎಂದು ಮನಸ್ಸಿನಲ್ಲಿ ತಿಳಿದಿರುವೆಯೋ ಅದೇ ಕಪಟಿ, ಕ್ರೂರ, ನೀಚ ನೇಭಿಲ ಹರಕೋರ್ಟನೇ ನಿನ್ನ ಅಧಃಪತನಕ್ಕೆ ಮೂಲ ಕಾರಣವು" ಅವನು ಮಿಸ್ ಭಾರನನ್ನಳನ್ನು ಪ್ರೀತಿಸುತ್ತಿದ್ದನು. ಮಧ್ಯದೊಳಗಿನ ಎಲ್ಲ ಎಡರು-ತೊಡರುಗಳನ್ನು ನಿವಾರಿಸಿಕೊಂಡು ಒಂದಾನೊಂದು ದಿವಸ ತಾನು ಭಾರನನ್ನಳನ್ನು ಒಲಿಸಿಕೊಳ್ಳಬಹುದೆಂದು ಅವನಿಗೆ ಆಶೆಯಿದ್ದಿತು; ಆದರೆ ನೀನು ಆಕಸ್ಮಿಕವಾಗಿ ಆತನ ಪ್ರಣಯದ ಪ್ರತಿದ್ವಂದ್ವಿಯಾದೆ. ಡಾಫಫಿಯು ನಿನ್ನನ್ನು ಪ್ರೀತಿಸಿದಳು. ಲಾರ್ಡ ಮೆಸಿಂಡೇಲನು ತನ್ನ ಮಗಳನ್ನು ನಿನಗೆ ಕೊಡಲಿಕ್ಕೆ ಒಪ್ಪಿದನು! ನಿಮ್ಮಿಗಳ ವಿವಾಹಸಂಬಂಧವು ಗಟ್ಟಿಮುಟ್ಟಾಯಿತು. ಇದರಿಂದ ನೇಭಿಲ ಹರಕೋರ್ಟನು ಅತ್ಯಂತ ನಿರಾಶೆಗೊಂಡು ನಿನ್ನ ಸರ್ವನಾಶ ಮಾಡಲಿಕ್ಕೆ ಸಂಕಲ್ಪಮಾಡಿಕೊಂಡನು; ಆ ದ ರೆ ಅದನ್ನು ಶತ್ರುರೂಪದಿಂದ ಮಾಡದೆ, ಹಿತೈಷಿ ಬಂಧುವಾಗಿ. ಆತನು ಕೌಶಲ್ಯದಿಂದ ನಿನ್ನೊಡನೆ ಬಂಧುತ್ವವನ್ನು ಸ್ಥಾಪಿಸಿದನು. ನೀನು ಮೂರ್ಖನು. ಕಾಲಸರ್ಪವನ್ನು ಪೂಮಾಲೆ ಎಂದು ತಿಳಕೊಂಡು ಕೊರಳಲ್ಲಿ ಧರಿಸಿದೆ. ಅವನು ಸುಯೋಗವನ್ನು ನೋಡಿ ಕ್ರಮಕ್ರಮವಾಗಿ ನಿನ್ನನ್ನು ಅಧಃಪತನದ ದಾರಿಗೆ ಎಳೆದೊಯ್ಯಹತ್ತಿದನು. ಆತನ ಪ್ರೇರಣೆಯಿಂದಲೇ ನೀನು ಜೂಜಿನ ಅಡ್ಡೆಗೆ ಹೋಗತೊಡಗಿದೆ; ಸಂಪಾದನೆಗಿಂತಲೂ ಹೆಚ್ಚು ಖರ್ಚು ಮಾಡತೊಡಗಿದೆ; ಕೊನೆಗೆ ಜೇಲಿಗೆ ಹೋಗುವ ದಾರಿಯನ್ನೂ

ಕಂಡುಕೊಂಡೆ. ಸಾಲ ರೂಪದಿಂದ ವಜ್ರ ವೈಢೂರ್ಯಗಳ ಅಲಂಕಾರಗಳನ್ನು ಕೊಂಡು ಅವುಗಳನ್ನು ಒತ್ತಿ ಇಟ್ಟು ಹಣ ಸಂಗ್ರಹಿಸಿವೆ; ಧನವಂತನಾಗಬೇಕೆಂಬ ಆಶೆಯಿಂದ ಆ ಹಣವನ್ನು ಜೂಜಿಗೆ ಹಚ್ಚಿದೆ. ನೀನು ಸಂಕಟದಿಂದ ಪಾರಾಗ ಬಹುದಾದ ಎಲ್ಲ ದಾರಿಗಳೂ ಕಟ್ಟಾದವು. ಅವನು ನಿನ್ನ ಚಲನವಲನವನ್ನು ಕಣ್ಣಲ್ಲಿ ಎಣ್ಣೆ ಹಾಕಿಕೊಂಡು ನೋಡುತ್ತಿದ್ದನು. ಸಾ ಲಿಬರ್ನ ಕಂಪನಿಯ ವರು ನಾಳೆ ನಿನ್ನ ವಿರುದ್ಧ ಸೆರೆಹಿಡಿಯುವ ವಾರಂಟು ತೆಗೆಯುವರೆಂಬ ಸಂಧಾ ತವನ್ನೂ ಅವನು ಪಡೆದಿಲ್ಲವೆಂದು ಹೇಳಲಿಕ್ಕೆ ಬರುವಂತಿಲ್ಲ. ನೀನು ಅವರ ಅಂಗಡಿಯಿಂದ ರತ್ನಾಲಂಕಾರಗಳನ್ನು ಸಾಲರೂಪವಾಗಿ ತಂದು ಬೇರೆಯವರಲ್ಲಿ ಒತ್ತಿ ಇಟ್ಟಿರುವ ಸಂಗತಿಯನ್ನಾದರೂ ಈ ನಿನ್ನ ಹಿತಬಂಧುವಿನ ಮೂಲಕವೇ ಆ ಅಂಗಡಿಯವರಿಗೆ ತಿಳಿದಿರಬೇಕು. ನಾಳೆಯ ದಿವಸ ನೀನು ಅವರ ವಾರಂಟಿ ನಿಂದ ಸರೆ ಹಿಡಿಯಲ್ಪಡುವೆ, ಅವರ ಸಾಲ ತೀರಿಸುವದು ನಿನಗೆ ಅಶಕ್ಯವು, ನಿನಗೆ ಎಲ್ಲಿಯೂ ಬೇರೆ ಸಾಲ ಸಿಗುವಂತಿಲ್ಲ ಇವೆಲ್ಲ ಸಂಗತಿಗಳು ಅವನಿಗೆ ಗೊತ್ತಿವೆ. ಆದ್ದರಿಂದಲೇ ಸಾಲ ತೀರಿಸುವ ಬಗ್ಗೆ ನೀನು ಏನು ಪ್ರಯತ್ನ ನಡೆ ಸುವೆಯೆಂಬದನ್ನು ತಿಳಿಯುವ ಸಲುವಾಗಿ ಆ ನಿನ್ನ ಹಿತೈಷಿಯು ತವಕಪಡು ವದು ಸಂಪೂರ್ಣ ಸ್ವಾಭಾವಿಕವೇ ಆಗಿದೆ. ಆತನು ನೆಳಲಿನಂತೆ ನಿನ್ನನ್ನನುಸ ರಣ ಮಾಡುತ್ತಿದ್ದನು. ರಾತ್ರಿಯಲ್ಲಿ ಮಾಸಿದ ಉಡಿಗೆ-ತೊಡಿಗೆಗಳಿಂದ, ಸುಂ ದಾದ ಮನಸ್ಸಿನಿಂದ ಹೊರಟಿರುವ ನಿನ್ನನ್ನು ಕಂಡು ಅವನು ನಿನ್ನಾ ಕಳವಿನ ಬೇತನ್ನು ಅನುಮಾನದಿಂದಲೇ ತಿಳಕೊಂಡು, ನಿನಗೆ ತಿಳಿಯದ ಹಾಗೆ ನಿನ್ನ ನ್ನನುಸರಿಸಿ ಲಾರ್ಡ ಮೆಸಿಂಡೇಲರ ಉಪವನದಲ್ಲಿ ಬಂದು, ನೀನು ಮರಳಿ ಬರುವ ವರೆಗೂ ನಿನ್ನ ದಾರಿ ಕಾಯುತ್ತಿರಬೇಕು. ಆ ಮೇಲೆ ಏನೇನು ಘಟಿಸಿರು ವದೋ, ನೀನು ಸ್ವಂತವೇ ಅದರ ಫಲವನ್ನು ಭೋಗಿಸಿರುತ್ತೀ ನೀನು ತಿಳಿಯು ತಕ್ಕ ಬಾಕಿ ಸಂಗತಿಯನ್ನು ಈಗ ನನ್ನಿಂದ ತಿಳಿದಿರುತ್ತೀ ಕಿಲ್ಡೇಯಾರ, ನೀನು ನಿನ್ನ ಆ ಹಿತೈಷಿ ಬಂಧುವನ್ನು ಈಗ ಚನ್ನಾಗಿ ಗುರ್ತಿಸಿದೆಯಾ?"

ಕಿಲ್ಡೇಯಾರನು ನಿಸ್ತಬ್ಧ ಹೃದಯದಿಂದ, ಬಹುಮಟ್ಟಿಗೆ ಕಟ್ಟಿದ ಉಸಿರಿ ನಿಂದ ಬ್ಲೇಕನು ಹೇಳಿದ ಸಂಗತಿಯನ್ನೆಲ್ಲ ಕೇಳಿಕೊಂಡನು. ಅವನ ಮಾತು ಮುಗಿಯಲು, ಕಿಲ್ಡೇಯಾರನು ಉತ್ತೇಜಿತ ಭಾವದಿಂದ ಕುರ್ಚಿಯ ಮೇಲಿಂದ ಜಿಗಿದೆದ್ದನು. ಆತನ ಎರಡೂ ಕಣ್ಣುಗಳೊಳಗಿಂದ ಬೆಂಕಿಯ ಕಿಡಿಗಳೇ ಹಾರಹತ್ತಿದಂತಾದವು. ಆವರಿಸಲಾರದಂತಹ ಸಿಟ್ಟಿನಿಂದ ಹಾಗು ಹಿಂಸಾ ಪ್ರವೃತ್ತಿಯಿಂದ ಅವನ ದೇಹವು ಕಂಪಿಸಹತ್ತಿತು. ಅವನು ಆವೇಗ ಭರ ದಿಂದಲೂ ವಿಕೃತ ಸ್ವರದಿಂದಲೂ:—"ಎಲಲ! ನಾನೆಂಥ ಮೂರ್ಖನು! ಎಂಥ

ಮರುಳನು! ನಾನು ಈ ಮೊದಲೇ ಅವನಲ್ಲೇಕೆ ಸಂದೇಹಗೊಳ್ಳಲಿಲ್ಲ? ಅವನು ಕ್ರಮಕ್ರಮವಾಗಿ ನನ್ನನ್ನು ಸಾಲದಲ್ಲಿ ಮುಳುಗಿಸುತ್ತಿದ್ದಾನೆಂಬದು ಒಂದು ದಿನವೂ ನನ್ನ ಮನಸ್ಸಿನಲ್ಲೇಕೆ ಹುಟ್ಟಲಿಲ್ಲ? ಯಾವ ಮಾಯಾಜಾಲದಿಂದ ಆ ಜೀವತ್ಭ್ರವನು ನನ್ನನ್ನು ಮುಗ್ಧನಾಗಿಯೂ ಸುಂದಾಗಿಯೂ ಮಾಡಿ ಬಿಟ್ಟನು? ಬಂಧುವಿನ ಕಪಟವೇಷದಿಂದ ಅವನು ನನ್ನ ಸರ್ವನಾಶಗೊಳಿಸಿರುತ್ತಾನೆ. ನನ್ನ ಕಾಲ ಮೇಲೆ ಕೊಡ್ಲಿಯ ಏಟು ಹಾಕಿರುತ್ತಾನೆ. ನಾನದನ್ನೇನೂ ತಿಳಿಯಲಿಲ್ಲ; ತಿಳಕೊಳ್ಳಲಿಕ್ಕೆ ಪ್ರಯತ್ನಿಸಲೂ ಇಲ್ಲ. ಕಣ್ಣು ತೆರೆದು ನೋಡಿಯೂ ನೋಡದಂತಾಗಿರುವೆನು. ಬ್ಲೇಕರೇ, ನೀವು ಹೇಳಿದುದೆಲ್ಲವೂ ಸತ್ಯವು. ಅದರೊಳಗಿನದೊಂದೂ ನಂಬಿಗೆಗೆ ಅಪಾತ್ರವಾಗಿಲ್ಲ. ನನ್ನ ಜೇಬಿನೊಳಗಿಂದ ರತ್ನಾಭರಣಗಳನ್ನು ಕದ್ದುಕೊಂಡು ನೇಭಿಲ ಹರಕೋರ್ಟನು ರೆನ್ ಹ್ಯಾಮ್ ಕ್ಲಬ್ಬಿನಲ್ಲಿ ಪೊಕ್ಕಿರುತ್ತಾನೆ. ಈ ನೀಚ ಕೃತ್ಯವು ಅವನದೇ. ಅದು ಬೇರೆಯವರಾರಿಂದಲೂ ಆಗಿಲ್ಲವೆಂಬದನ್ನು ನಾನು ಆಣೆ ಮಾಡಿ ಹೇಳಬಲ್ಲೆನು."

ಬ್ಲೇಕ:—ನೀನು ಸಕಾಲದಲ್ಲೇ ಹುಷಾರಾಗಿದ್ದರೆ ನಿನ್ನ ಅಧಃಪತನವು ಇಷ್ಟರಮಟ್ಟಿಗೆ ಆಗುತ್ತಿರಲಿಲ್ಲ."

ಕಿಲ್ಡೇ:—"ಆದರೆ ಈಗ ಆ ಆಕ್ಷೇಪವು ನಿಷ್ಫಲವೇ ಸರಿ. ಆ ಬಗ್ಗೆ ಅನುತಾಪಪಟ್ಟು ಪ್ರಯೋಜನವಿಲ್ಲ. ನಾನು ಈಗಿಂದೀಗಲೇ ರೆನ್‌ಹ್ಯಾಮ ಕ್ಲಬ್ಬಿಗೆ ಹೋಗಿ ಅಲ್ಲಿಯವರೆದುರು ಆತನ ಈ ಕೀರ್ತಿಪ್ರದವಾದ ಸಂಗತಿಯನ್ನು ತಿಳಿಸುತ್ತೇನೆ! ಆ ಮೇಲೆ ಬೂಟಿನಿಂದ ಅವನ ಬೆನ್ನು ಮೆತ್ತಗೆ ಮಾಡುತ್ತೇನೆ. ಅವನಿಗೆ ಆತನ ಕುಕರ್ಮದ ಫಲವನ್ನುಣಿಸುತ್ತೇನೆ!"

ಬ್ಲೇಕ:—"ಅವರ ಫಲವು ಯೋಗ್ಯವಾಗಲಾರದು. ಏನೇನು ಮಾಡಬೇಕಾಗಿದೆಯೋ ಅದನ್ನೆಲ್ಲ ನಾನೇ ಮಾಡುವೆನು. ನನ್ನಲ್ಲಿ ಸಂಪೂರ್ಣ ನಂಬಿಗೆಯಿರಿಸಿ ನೀನು ನಿಶ್ಚಿಂತನಾಗಿರು."

ಕಿಲ್ಡೇ:—ನೀವು ಅವನಿಗೇನು ಮಾಡುವಿರಿ? ಒಂದುವೇಳೆ ನೀವು ಅವನನ್ನು ಸೆರೆಹಿಡಿದರೆ, ಆಗ ಅವನ ಮೂಲಕ ನನ್ನ ಕುಕರ್ಮದ ವೃತ್ತವೂ ಬೈಲಿಗೆ ಬರುವದು. ಅದರಿಂದ ಪ್ರಯೋಜನವೇನೂ ಆಗುವದಿಲ್ಲ."

ಬ್ಲೇಕ:—"ನಾನು ಅವನನ್ನು ಸೆರೆ ಹಿಡಿಯುವೆನು; ಆದರೆ ಆ ಬಗ್ಗೆ ಅವಸರಪಡುವದಿಲ್ಲ. ಕಳವಿನ ಮಾಲು ಆತನ ಬಳಿಯಲ್ಲೇ ಇರಬೇಕೆಂಬದು ನನ್ನಿಚ್ಛೆ. ನನ್ನ ಆ ಇಚ್ಛೆಗೆ ಬಲವಾದ ಕಾರಣವುಂಟು. ನೀನು ಈಗ ಅದನ್ನು ತಿಳಕೊಳ್ಳುವ ಆವಶ್ಯಕತೆಯಿಲ್ಲ. ಒಟ್ಟಿನಲ್ಲಿ ನಿನಗೆ ತಿಳಿಸುವದೇನಂದರೆ, ಅದರಿಂದ ನಿನಗನಿಷ್ಟವಾಗಲಾರದು."

ಬ್ಲೇಕನ ನುಡಿ ಕೇಳಿ ಕಿಲ್ಡೇಯಾರನು ತನ್ನ ಸಿಟ್ಟು ನುಂಗಿಕೊಂಡು ಮತ್ತೆ ಕುರ್ಚಿಯ ಮೇಲೆ ಕುಳಿತನು. ಆ ಮೇಲೆ ಬಹು ಸೌಮ್ಯವಾಣಿಯಿಂದ: "ನಾನು ನಿಮ್ಮ ಇಚ್ಛೆಗೆ ವಿರುದ್ಧವಾಗಿ ಯಾವ ಕೆಲಸವನ್ನೂ ಮಾಡುವದಿಲ್ಲ. ನೀವು ಅವನ ಬಗ್ಗೆ ಏನು ವ್ಯವಸ್ಥೆ ಮಾಡಬೇಕೆಂದಿರುವಿರೋ ಅದೇ ನನಗೆ ತಿರಸಾಮಾನ್ಯವು. ಅವನ ದುಷ್ಟ ಹೇತುವು ನಿಷ್ಫಲವಾಗಿದೆ. ಅವನು ಇನ್ನು ನನಗಾವ ಕೇಡನ್ನೂ ಬಗೆಯಲಾರನು. ರತ್ನದ ವ್ಯಾಪಾರಿಯ ಸಾಲವನ್ನು ತೀರಿಸಿದೊಡನೆಯೆ ನಾನು ನಿರಾಪದನು."

ಬ್ಲೇಕ:—"ಪರಮೇಶ್ವರನ ದಯೆಯಿಂದ ಹಾಗೆಯೇ ಆಗಲಿ; ಆದರೆ ನೀಛಿಲ ಹರಕೋರ್ಟನು ನಿನ್ನನ್ನು ಸುಸ್ಥಿರವಾಗಿರಗೊಡುವನೆಂಬ ಆಶೆಯು ತಪ್ಪವೇ ಸರಿ."

ಕಿಲ್ಡೇ:—"ಅದೇನು? ಅವನು ನನಗೆ ಮತ್ತೇನು ಪೀಡೆಕೊಡುವನು?"

ಬ್ಲೇಕ:—"ನೀನು ರತ್ನಪಂಗಡಿಯ ಸಾಲ ತೀರಿಸಿದೆ ಎಂಬದು ಅವನಿಗೆ ಯಾವಾಗ ತಿಳಿಯುವದೋ ಆಗ ಆತನು ಬೇರೆ ಉಪಾಯಗಳಿಂದ ನಿನ್ನನ್ನು ಆಪತ್ತಿಗೀಡುಮಾಡಲು ಪ್ರಯತ್ನಿಸುವನು. ನಿನ್ನನ್ನು ಧ್ವಂಸಗೊಳಿಸುವದೇ ಅವನ ಪ್ರಾಮುಖ್ಯವಾದ ಸಂಕಲ್ಪವು."

ಕಿಲ್ಡೇ:—ಅವನು ಲಾರ್ಡ ಮೆಸಿಂಡೇಲ ಮತ್ತು ಡಾಫನಿ ಭಾರನನ್ನ ಇವರುಗಳಿಗೆ ನಾನೇ ಅವಳ ರತ್ನಾಲಂಕಾರಗಳನ್ನು ಕದ್ದಿರುತ್ತೇನೆಂಬದನ್ನು ತಿಳಿಸುವನೆಂದು ನಿಮಗನಿಸುತ್ತಿದೆಯೇ?"

ಬ್ಲೇಕ:—"ಇಲ್ಲ; ಆ ಸಾಹಸಕ್ಕೆ ಆತನು ತೊಡಗಲಿಕ್ಕಿಲ್ಲ. ಹಾಗೆಂದು ಅವನು ತಿಳಿಸಿದರೆ, ಈ ವ್ಯವಹಾರದಲ್ಲಿ ಅವನೇ ಮೊದಲು ಕೇಡಿಗೀಡಾಗಬೇಕಾದೀತೆಂಬದು ಅವನಿಗೆ ಗೊತ್ತುಂಟು; ಆದರೆ ಅವನು ಲಾರ್ಡ ಮೆಸಿಂಡೇಲ ಹಾಗು ಅವನ ಕನ್ಯೆ ಅಲ್ಲದೆ ನಿನ್ನ ಸೋದರತ್ತೆ ಇವರೆಲ್ಲರಿಗೂ ಬೇ-ನಾಮದ ಪತ್ರಗಳನ್ನು ಕಳಿಸಬಹುದು. ಅದರಿಂದ ನಿನ್ನ ಭವಿಷ್ಯತ್ಕಾಲದ ಎಲ್ಲ ಆಶೆ-ಭರವಸೆಗಳೂ ಮಾಯವಾಗಿ ಬಿಡಬಹುದು."

ಅಂಜಿಕೆಯಿಂದ ಕಿಲ್ಡೇಯಾರನು:—"ಎಂಥ ಸರ್ವನಾಶವಪ್ಪಾ! ಹಾಗೂ ಆದೀತೇ?"

ಬ್ಲೇಕ:—"ಅಸಂಭವವಲ್ಲ; ಆದರೆ ಇದು ನನ್ನ ಅನುಮಾನವಿಷ್ಟೇ. ಆತನ ಪ್ರಕೃತಿಧರ್ಮದ ಮೇರೆಗೆ ಹಾಗು ನಿನ್ನನ್ನು ಸರ್ವನಾಶಗೊಳಿಸಲಿಕ್ಕೆ ಅವನು ಹೇಗೆ ದೃಢಸಂಕಲ್ಪನಾಗಿರುವನೋ ಅಂಥವನ ಬಗ್ಗೆ ಹೀಗೆ ಅನುಮಾನ ತಾಳುವದು ಅಸಂಗತವಲ್ಲ."

ಆಗ ಕಿಲ್ಡೇಯಾರನ ಸೊಂಡೆಯು ಒಣಗಿ ಬಿಟ್ಟಿತು. ಭಯದಿಂದ ಆತನ ಎದೆಯು ಹಾರಹತ್ತಿತು. ಅವನು ಉದ್ವೇಗ ಭರದಿಂದ:—"ನಿಮ್ಮ ಅನುಮಾನವು ಸುಳ್ಳಲ್ಲ. ಆ ಕಾರ್ಯವನ್ನು ಅವನು ಖಂಡಿತವಾಗಿಯೂ ಮಾಡುವನು. ನಿಮ್ಮ ಸಹಾಯವು ಲಭಿಸಿದರೂ ಕೂಡ ನನ್ನ ಕಲ್ಯಾಣವಾಗ ವೆಂದು ತೋರುತ್ತದೆ. ನನ್ನ ಸೋದರತ್ತೆಯು ನನಗೆ ತನ್ನ ಆಸ್ತಿ-ಪಾಸ್ತಿ ಗಳನ್ನು ಕೊಡದೆ ನನ್ನನ್ನು ವಂಚಿಸಿಬಿಟ್ಟರೆ, ಡಾಫನಿಯು ನಮ್ಮಗಳ ವಿವಾಹ ಸಂಬಂಧವನ್ನು ಮುರಿದು ಬಿಡುವಳು. ಅದರಿಂದ ನನ್ನ ಸರ್ವನಾಶವಾಗು ವದು ಖಂಡಿತವೇ. ಅದಕ್ಕಾಗಿ ನಾನು ಎಚ್ಚರಪಡಲಿಕ್ಕೇ ಬೇಕು."

ಅವನನ್ನು ಶಾಂತಗೊಳಿಸುವದಕ್ಕೆಂದು ಬ್ಲೇಕನು:—"ನೀನು ಅಷ್ಟರ ಮಟ್ಟಿಗೆ ಹತಾಶನಾಗುವ ಕಾರಣವಿಲ್ಲ. ಅವನು ಬೇನಾಮುದ ಕಾಗದ ಕಳಿಸಿದರೆ ಅದು ಅವನದೇ ಎಂಬದನ್ನು ಸಿದ್ಧಗೊಳಿಸುವದು ಕಠಿಣವಾಗಲಿಕ್ಕಿಲ್ಲೆಂಬದನ್ನು ಅವನು ತಿಳಿದಿರುವನು. ತನ್ನ ಸಾಮಾಜಿಕ ಮಾನ ಮನ್ನಣೆಗಳು ಯಾವದ ರಿಂದ ಕಡಿಮೆಯಾಗುವವೋ ಅಂಥ ಯಾವ ಕಾರ್ಯ ಮಾಡುವ ಸಾಹ ಸವೂ ಪ್ರವೃತ್ತಿಯೂ ಅವನಿಂದ ಆಗಲಾರವು. ವಿಪತ್ತು ಒದಗುವ ಮೊದಲು ಆ ವಿಪತ್ತಿಗೆ ಅಂಜಿ ಕೈಕಾಲುಗೆಡುವದು ತರವಲ್ಲ. ಮನಸ್ಸನ್ನು ದೃಢ ಪಡಿಸಿಕೋ. ನಾಳೆ ಸಾಯಂಕಾಲದಲ್ಲಿ ಅಥವಾ ಮತ್ತಾವಾಗಾದರೂ ಪ್ರಫುಲ್ಲ ಮನಸ್ಕನಾಗಿ ಡಾಫನಿಯನ್ನು ಕಾಣು. ನಿನಗೆ ಈ ಕಳವಿನ ಸಂಗತಿಯೇ ಗೊತ್ತಿಲ್ಲದವನಂತೆ ಅಲ್ಲಿ ಅವಳೊಡನೆ ವರ್ತಿಸು. ನಾಳೆ ಬೆಳಿಗ್ಗೆ ಹತ್ತುಗಂಟೆಗೆ ಇಲ್ಲಿಗೆ ಬಾ. ನಾನು ನಿನ್ನ ಸಾಲ ತೀರಿಸಲಿಕ್ಕೆಂದು ನಿನಗೆ ಸಂಪೂರ್ಣ ಹಣದ ಚಕ್ಕು ಕೊಡುತ್ತೇನೆ."

ಕಿಲ್ಡೇ:—"ನಿಮ್ಮ ಅನುಗ್ರಹದಿಂದ ಎಷ್ಟೋ ನಿಶ್ಚಿಂತನಾದೆನು. ಸದ್ಯ ಕ್ಕಂತೂ ಈ ಕುತ್ತದಿಂದ ದಾಟುವೆನು."

ಬ್ಲೇಕ:—"ನಿನ್ನ ಸೋದರತ್ತೆಯು ಎಂದಾದರೂ ನಿನಗೀ ಸಂಗತಿಯ ಬಗ್ಗೆ ವಿಚಾರಿಸಿದಲ್ಲಿ, ನೀನು ಅವಳೆದುರಿಗೆ ಕಳವಿನ ಸಂಗತಿಯನ್ನುಳಿದು ಮಿಕ್ಕ ಎಲ್ಲ ಸಂಗತಿಯನ್ನು ಒಪ್ಪಿಕೊಂಡರೆ ತಪ್ಪಲ್ಲ."

ಕಿಲ್ಡೇ:—"ಅದು ಮಹಾ ತಪ್ಪು! ಹಾಗೆ ಮಾಡಿದರೇನು ನಾನು ಉಳಿ ಯುವೆನೇ? ನೀವು ನಮ್ಮ ಸೋದರತ್ತೆಯನ್ನು ಅರಿಯರೆಂವೇ ಹೀಗೆ ಅನ್ನು ತ್ತಿರುವಿರಿ."

ಬ್ಲೇಕ:—"ಹಾಗಾದರೆ ನಿನಗೆ ಹೇಗೆ ಯೋಗ್ಯವೆನಿಸುವದೊ ಹಾಗೆಯೇ ಮಾಡು. ಈಗ ರಾತ್ರಿ ಹೆಚ್ಚಾಯಿತು. ಇನ್ನು ನೀನು ನಿನ್ನ ಬರಾಕಿಗೆ ಹೊರಡು"

ಬಳಿಕ ಕಿಲ್ಡೇಯೊರನು ಬ್ಲೇಕನಿಗೆ ಪೊಡಮಟ್ಟು ವಿಷಣ್ಣಮನಸ್ಸಿನಿಂದ ರಾಜಬೀದಿಗೆ ಬಂದನು; ಹಾಗು ಅಲ್ಲಿ ಒಂದು ಟ್ಯಾಕ್ಸಿ ಮಾಡಿಕೊಂಡು ತನ್ನ ರೆಜಿಮೆಂಟಿನ ಬರಾಕಿಗೆ ತೆರಳಿದನು. ಸ್ಮಿತ್ಥನು ಅವನನ್ನು ತಮ್ಮ ತಲೆಬಾಗಿಲ ವರೆಗೆ ಕಳಿಸಿ, ಬಾಗಿಲವನ್ನು ಇಕ್ಕಿ ಬ್ಲೇಕನ ಬಳಿಗೆ ಹಿಂದಿರುಗಿದನು.

ಸ್ಮಿತ್ಥನು ಹಿಂದಿರುಗಿ ಬಂದ ಬಳಿಕ ಬ್ಲೇಕನು ಒಂದು ಆರಾಮಿ ಕುರ್ಚಿಯ ಮೇಲೆ ಅರ್ಧಶಾಯಿಯಾಗಿ ಬಿದ್ದುಕೊಂಡು ಗಭೀರವಾದ ಚಿಂತೆಯಲ್ಲಿ ನಿಮಗ್ನನಾದನು. ಆಗ ಆತನ ಚಿರೂಟದಿಂದ ಹೊರಡುವ ಎಂಜಿನ್ನದಂಥ ಹೊಗೆಯಿಂದ ಆ ಕೋಣೆಯು ಅಂಧಕಾರಮಯವಾಯಿತು.

ಬ್ಲೇಕನು ಚಿಂತಾಗ್ರಸ್ತನಾದುದನ್ನು ಕಂಡು ಸ್ಮಿತ್ಥನು ಆಗಲೆ ಅವನಿಗೆ ಯಾವ ಪ್ರಶ್ನೆಯನ್ನೂ ಕೇಳಲಿಲ್ಲ. ಹಾಗೆ ಕೇಳುವದು ಯೋಗ್ಯವೋ ಅಯೋಗ್ಯವೋ ಎಂಬುದನ್ನು ಅವನು ಕೆಲ ಕ್ಷಣಗಳ ವರೆಗೆ ಕುಳಿತು ಯೋಚಿಸಿದನು; ಆದರೆ ಅವನ ಕುತೂಹಲವು ಪ್ರಬಲವಾದುದರಿಂದ ಅವನಿಂದ ಹಾಗೆ ಮತ್ತೆ, ಸುಮ್ಮನಿರಲಾಗಲಿಲ್ಲ. ಅದರಿಂದ ಅವನು ಬ್ಲೇಕನನ್ನು ಕುರಿತು:—"ಒಡೆಯಾ, ಈಗ ತುಸ ಹೊತ್ತಿಗೆ ಮುಂಚೆ ನೀವು ಲೆಫ್ಟನೆಂಟ ಕಿಲ್ಡೇಯೊರನಿಗೆ ಹೇಳಿದಿರೇನಂದರೆ, ಕಳವಾದ ಮಾಲು ಆ ದಾರಿಹೋಕನಲ್ಲಿಯೇ ಇದ್ದಿರಲೆಂದು; ಆದರೆ ನೀವು ಅವನೆದುರಿಗೆ ಇದರ ಕಾರಣವನ್ನು ತಿಳಿಸಲಿಲ್ಲ; ಅದನ್ನು ನನಗೆ ತಿಳಿಸಲಿಕ್ಕೂ ಆತಂಕವಿದೆಯೇನು?"

ಬ್ಲೇಕನು ತನ್ನ ಬಾಯೊಳಗಿನ ಪ್ರಚಂಡವಾದ ಚಿರೂಟಿನ ಕೊಳವೆಯನ್ನು ಮೆಲ್ಲಮೆಲ್ಲನೆ ಹೊರದೆಗೆದು, ಕುರ್ಚಿಯ ಮೇಲೆ ಸರಿಯಾಗಿ ಕುಳಿತನು; ಹಾಗು ಮೇಲೆ ನೋಡುತ್ತ:—"ಸ್ಮಿತ್ಥ, ನಿನಗೆ ನೆನಪಿದೆಯೇನು? ಒಂದು ವರ್ಷವಾಗಿರಬಹುದು; ಒಂದು ದಿನ ರಾತ್ರಿ ನಾನೂ ನೀನೂ ಕೂಡಿ ಲಂಡನ್ನಿನ ಪೂರ್ವಭಾಗದ ಬಡ ಹಾಗು ಪತಿತರ ಹಳ್ಳಿಗಳಿಗೆ ತಿರುಗಾಡಲಿಕ್ಕೆ ಹೋಗಿದ್ದೆವು. ಅಲ್ಲಿಂದ ಹಿಂದಿರುಗುವ ಕಾಲದಲ್ಲಿ ಮಧ್ಯದಲ್ಲೊಂದು ಕಡೆ ಒಂದು ಟ್ಯಾಕ್ಸಿಯಲ್ಲಿ ಮಾಸಿದ ಹಾಗು ದಾರಿಹೋಕರ ಉಡುಪಿನಲ್ಲಿ ಹೊರಟಿದ್ದ ನೇಭಿಲ್ ಹರಕೋರ್ಟನನ್ನು ಕಂಡು ನಿನಗೆ ಆ ಟ್ಯಾಕ್ಸಿಯನ್ನನುಸರಿಸಲಿಕ್ಕೆ ಹೇಳಿದ್ದೆನು; ಆದರೆ ನೀನು ಕೃತಕಾರ್ಯನಾಗದೆ ಹಾಗೆಯೇ ಹಿಂದಿರುಗಲು, ನಾನು ಆದೇ ಕಾಲಕ್ಕೆ ನಿನಗೆ ತಿಳಿಸಿದ್ದೆನೇನಂದರೆ:-'ಮುಂದೆ ಎಂದಾದರೊಂದು ದಿನ ಈ ಘಟನೆಯನ್ನು ನೆನಪಿಗೆ ತಂದುಕೊಳ್ಳಬೇಕಾದೀತು. ಅದರಿಂದ ನೀನಿದನ್ನು ನೆನಪಿಡು, ಎಂದು."

ಸ್ಮಿತ್ಥ:—"ಅಹುದು; ಆ ಸಂಗತಿಯು ನನಗೆ ಚೆನ್ನಾಗಿ ನೆನಪಿದೆ."

ಬ್ಲೇಕ:—"ಇದುವರೆಗೆ ಅದೇ ಘಟನೆಯ ಸಂಗತಿಯು ನನ್ನ ಮನಸ್ಸಿಗೆ ಸುತ್ತುವರೆದಿತ್ತು. ಇದಕ್ಕೆ ಕಾರಣವೇನಂದರೆ, ಆ ಘಟನೆಗೆ ಕೆಲ ದಿನ ಮುಂಚೆಯೂ ಹಾಗು ನಂತರವೂ ಲಂಡನ್ನಿನ ಪಶ್ಚಿಮ ಭಾಗದಲ್ಲಿ ಎಷ್ಟೋ ಮಂದಿ ಲಾರ್ಡರ ಮನೆಗಳಲ್ಲಿ ಇದೇ ಬಗೆಯ ಒಂದಾನೊಂದು ವಿಶಿಷ್ಟ ರಹಸ್ಯಜನಕವೂ ಭಯಾನಕವೂ ಆದ ಕಳವುಗಳಾಗಿರುವದರಿಂದ ಸನ್ಮಾನ್ಯ ಸಮಾಜದೊಳಗಿನ ಯಾವನೊಬ್ಬನು ಕಸಬುದಾರ ಕಳ್ಳರಿಗೆ ಬೇತು ಹೇಳಿಕೊಡದಿದ್ದರೆ ಆ ಎಲ್ಲ ಕಳವುಗಳು ಆಗುತ್ತಿದ್ದವೆಂದು ತಿಳಿಯಲಾಗುವದಿಲ್ಲ. ಆ ಪರಕೋರ್ಟನು ಲಂಡನ್ನಿನ ಸನ್ಮಾನ್ಯ ಸಮಾಜದಲ್ಲಿ ಅಸಂಕೋಚದಿಂದ ಕೂಡಿ ನಡೆಯುತ್ತಿರುತ್ತಾನೆ. ಲಂಡನ್ನಿನೊಳಗಿನ ಎಲ್ಲ ಲಾರ್ಡರ ಮನೆಗಳಲ್ಲೂ ಅವನಿಗೆ ಮುಕ್ತದ್ವಾರವು. ಅವನು ಬೇಕಾದಷ್ಟು ಹಣ ಖರ್ಚು ಮಾಡುವನು; ಆದರೆ ಎಲ್ಲಿಂದ ಆತನಿಗಿಷ್ಟು ಹಣ ಬರುತ್ತವೆಂಬದನ್ನು ಯಾರೂ ಅರಿಯರು. ಅವನು ಅಂಥ ಕಾರ ರಜನಿಯಲ್ಲಿ, ಅತಿ ಮಾಸಿದ ಉಡುಪಿನಲ್ಲಿ,ಬಡವರೂ ಕಳವುಕಾಕುಗಳನ್ನು ನಡೆಯಿಸಿ ಉಪಜೀವಿಸುವವರೂ ಆದಂಥ ಜನರು ವಾಸಿಸುವ ನಿವಾಸಸ್ಥಳಕ್ಕೆ ಹೊರಬದ್ದನ್ನು ಕಂಡು ನನಗೆ ಅನುಮಾನವಾಯಿತೇನಂದರೆ, ಅವನ ಸಲಹೆ ಹಾಗು ಪ್ರೋತ್ಸಾಹದಿಂದಲೇ ಆ ಎಲ್ಲ ಕಳವುಗಳು ಆಗಿರುತ್ತವೆ. ಇಂದು ರಾತ್ರಿ ಅವನು ಕಿಲ್ಡೇಯರನ ಕೆಪೆ ಕತ್ತರಿಸಿದ್ದರಿಂದ ನನಗೆ ನಂಬಿಗೆಯಾಗಿರುವದೇನಂದರೆ, ಅವನು ಕೇವಲ ತರಗತಿಯ ಕಳ್ಳರ ಸಂಗತಿಯಿಂದ ಕಳವು ಮಾಡಿಸುತ್ತಾನೆ. ಅವನ ಕೈಕೆಳಗೆ ಹಲವು ಮಂದಿ ಕಸಬುಗಾರ ಕಳ್ಳರಿರುತ್ತಾರೆಂದು. ಅದರಿಂದ ನಾವು ಆತನ ಮೇಲೆ ಪಾಳತಿ ಇಡಬೇಕು. ಆ ಕೆಲಸವನ್ನು ನೀನೇ ಸ್ವಂತ ಕೈಕೊಳ್ಳಬೇಕೆಂದು ನನ್ನಿಚ್ಛೆಯಿದೆ. ಅವನು ಯಾವ ಯಾವಾಗ ಎಲ್ಲೆಲ್ಲಿ ಹೋಗುವನೋ ನೀನೂ ಆಗಾಗ ಅವನ ಹಿಂದೆಯೇ ಗೌಪ್ಯವಾಗಿರು. ನಾನು ಅವನ ಅಪರಾಧಗಳ ಪುರಾವೆ ಸಂಗ್ರಹಿಸದ ಹೊರತು ಆತನ ವಿರುದ್ಧ ಏನನ್ನೂ ಮಾಡುವಂತಿಲ್ಲ ಅವನು ಕಿಲ್ಡೇಯರನನ್ನು ವಿಪತ್ತಿಗೀಡು ಮಾಡಿ ವಿಧ್ವಂಸಗೊಳಿಸುವ ಸಲುವಾಗಿ ಹೆಚ್ಚಾಗಿ ಪ್ರಯುಕ್ತಿಸುವನೆಂಬದನ್ನು ತಿಳಿದೂ ತಿಳಿದು ನಾನು ಆ ವ್ಯವಹಾರದ ಬಗ್ಗೆ ಪೂರ್ಣ ಉದಾಸೀನನಾಗಿರುತ್ತೇನೆ. ನೇಭಿಲ್ ಪರಕೋರ್ಟನು ಇನ್ನು ಮೂರು ನಾಲ್ಕು ದಿನಗಳಲ್ಲೇ ಕಳ್ಳರ ನಿವಾಸ ಸ್ಥಳವಾದ ಆ ದರಿದ್ರರ ಹಳ್ಳಿಗೆ ಹೋಗುವನೆಂದು ನನ್ನ ಊಹೆಯಿದೆ. ಅವನು ಯಾವ ದಿನ ಎಲ್ಲಿಗೆ ಹೋಗುವನು, ಏನು ಮಾಡುವನು ಮುಂತಾದ ಬಗ್ಗೆ ನೀನು ಯಾವಾಗಲೂ ಕಾದಿರು.

——

## ಬಿಕ್ಕಿ ಬಿಕ್ಕಿ ಅಳಹತ್ತಿದ.

ಕಿಲ್ಡೇಯಾರದ ಆ ಜಿಪುಣ ಸೋದರತ್ತೆಯು ಒಂದು ದಿನ ಲಂಡನ್ನಿಗೆ ಬಂದಿದ್ದಳು. ಅವಳು ಅಲ್ಲಿಯ ವ್ಹಿಕ್ಟೋರಿಯಾ ಸ್ಟೇಶನ್ನಿನಲ್ಲಿ ಒಂದು ಟ್ಯಾಕ್ಸಿಯನ್ನು ಬಾಡಿಗೆ ಮಾಡಿ ನೆಟ್ಟಗೆ ಬಂಡ ಸ್ಟ್ರೀಟಿಗೇ ಬಂದಳು; ಹಾಗು ಟ್ಯಾಕ್ಸಿಯಿಂದ ಇಳಿದು ಆ ಸ್ಟ್ರೀಟಿನೊಳಗಿನ ಸುಪ್ರಸಿದ್ಧ ರತ್ನದ ವ್ಯಾಪಾರಿಗಳಾದ ಮೆಸರ್ಸ ಸಾ ಎಂಡ ಲಿಬರ್ನ ಕಂಪನಿಯ ವಿಶಾಲವಾದ "ಶೋ-ರೂಮು"ನ್ನು ಹೊಕ್ಕಳು. ಮೂರು ನಾಲ್ಕು ಮಂದಿ ಆಳುಗಳು ಕೊಳ್ಳಬಂದ ಜನರಿಗೆ ಅಲಂಕಾರಗಳನ್ನು ತೆಗೆತೆಗೆದು ತೋರಿಸುವ ಕೆಲಸದಲ್ಲಿ ತೊಡಗಿದ್ದರು. ಅವರು ಆ ಮಿಸೆಸ್ ಓರಾಯಿನ್‌ಡೇನಳು ಬಂದದ್ದನ್ನು ನೋಡಿದರೂ ನೋಡದಂತಿದ್ದರು. ಅವಳಾದರೂ ಅವರನ್ನೇನೂ ಕೇಳದೆ, ಆ ಹಾಲಿನ ತುದಿಯ ಕಡೆಗೆ ಹೋದಳು. ಅಲ್ಲಿ ಬೇರೆ ಹಾಲಿಗೆ ಹೋಗುವ ಕಾಜಿನ ಬಾಗಿಲವಿದ್ದಿತು. ಅವಳು ಆ ಬಾಗಿಲಿಗೆ ಸ್ಫಟಿಕದಿಂದ ಮಾಡಿದ್ದ ಹಿಡಿಕೆಯನ್ನು ಹಿಡಿದುಕೊಂಡು ಒಳಗೆ ನೂಕುತ್ತಲೇ ಆ ಕದವು ತೆರೆಯಿತು. ಅಲ್ಲಿಂದ ಅವಳು ಮತ್ತೊಂದು ಚಿಕ್ಕ ರೂಮಿಗೆ ಹೋದಳು. ಅದೇ ಆಫೀಸ ರೂಮು.

ಆ ಆಫೀಸಿನಲ್ಲಿ ಒಂದು ಕುರ್ಚಿಯ ಮೇಲೆ ಕುಳಿತಿದ್ದ ಬೊಗರಿಗಡ್ಡ-ಕಲ್ಲೀಮೀಸೆಗಳುಳ್ಳ ಒಬ್ಬ ಪ್ರೌಢನು ಕೈಯಲ್ಲೊಂದು ಭಾರೀ ಬೆಲೆಯ ಪೆನ್ನು ಹಿಡಿದುಕೊಂಡು ಯಾವದೋ ಒಂದು ಲೆಕ್ಕದ ಪುಸ್ತಕವನ್ನು ನೋಡುತ್ತಿದ್ದನು. ಮಿಸೆಸ್ ಓರಾಯಿನ್‌ಡೇನಳು ಅವನೆದುರಿಗೆ ಹೋಗಿ ಒಳ್ಳೇ ಮುತ್ಸದ್ದಿಯಂತೆ "ನಿಮ್ಮ ಹೆಸರು ಸಾನೋ-ಲಿಬರ್ನನೊ? ನೀವು ಯಾರು?" ಎಂದು ಕೇಳಿದಳು.

ಲಿಬರ್ನನು ಆಗ ಅಂಗಡಿಯ ಕೆಲಸಕ್ಕೆಂದು ಪೇಟೆಗೆ ಹೋಗಿದ್ದನು. ಅಲ್ಲಿ ಕುಳಿತಿದ್ದವನೇ ಆ ಕಂಪನಿಯ ಮುಖ್ಯ ಭಾಗಿದಾರನಾದ ಸಾ ಸಾಹೇಬನು. ಆತನ ಹೃದಯವು ಆತನ ಅಂಗಡಿಯೊಳಗಿನ ಪ್ರಾಮುಖ್ಯ ಜಿನಸಾದ ವಜ್ರಕ್ಕಿಂತಲೂ ಕಠಿಣವು. ಸ್ವಭಾವವು ತೀರ ರುಕ್ಷವು; ಅಲ್ಲದೆ ಆತ ಅಂಗಡಿಕಾರನಾಗಿದ್ದರೂ ಅಂಗಡಿಕಾರನಲ್ಲಿ ಅವಶ್ಯವಾಗಿರಬೇಕಾಗಿದ್ದ ವಿನಯ, ಶಿಷ್ಟಾಚಾರಗಳನ್ನು ತೋರಿಸುವಲ್ಲಿ ಆತನು ಅಷ್ಟೊಂದು ರೂಢನಾಗಿರಲಿಲ್ಲ. ದೊಡ್ಡ ದೊಡ್ಡ ಲಾರ್ಡ ಜನರೂ ಬ್ಯಾರೆನ್ ಡ್ಯೂಕರೂ ಅವನ ಕಂಪನಿಗೆ ಬರುತ್ತಿದ್ದರು; ಹಾಗು ಸ್ವಾರ್ಥಸಿದ್ಧಿಗಾಗಿ ಹಲವರು ಅವನಿಗೆ "ಸರ-ಸರ" ಎಂದೆನ್ನುತ್ತಿದ್ದುದರಿಂದ, ತಾನು ಬಹು ದೊಡ್ಡ ಮನುಷ್ಯನೆಂಬ ಅಹಂಕಾರವು ಆತನಿಗುಂಟಾಗಿದ್ದಿತು. ಒಂದಿಷ್ಟು ಪ್ರಯತ್ನಿಸಿದರೆ ಪಾರ್ಲಿಮೆಂಟಿನ ಮೆಂಬರ ಕೂಡ ತಾನಾಗಬಹುದೆಂಬ ವಿಶ್ವಾಸವು ಅವನಿಗಿದ್ದಿತು. ಅವಳು ಆ ರೀತಿ ಅಶಿಷ್ಟಭಾವದಿಂದ ತನ್ನ ಹೆಸರು ದೆಸೆ

ಗಳನ್ನು ಕೇಳಲು ಅವನ ಮನಸ್ಸಿಗೆ ಹೇಗಾಗಿದ್ದೀತೆಂಬದನ್ನು ವಾಚಕರೇ ತರ್ಕಿಸಿ ಕೊಳ್ಳಬೇಕು; ಆದರೆ ಆತನು ಏನನ್ನೋ ತಿಳಿದು ಆ ಅಪರಿಚಿತ ಮುದುಕಿ ಯಲ್ಲಿ ಸೌಜನ್ಯ ವಿರಹಿತವಾಗಿಯೂ,ಕೊಂಚ ತಿರಸ್ಕಾರದಿಂದಲೂ:-"ಅಹುದು; ನಾನೇ ಈ ಫರ್ಮಿನ ಮುಖ್ಯ ಭಾಗಿದಾರನು; ಆದರೆ ಮ್ಯಾಡಮ್, ನಾನಂತೂ ನಿಮ್ಮನ್ನು ಗುರ್ತಿಸುವದಿಲ್ಲ. ನೀವು ನನ್ನನ್ನು ಕಾಣಬರುತ್ತೀರೆಂಬ ಸಂಗತಿ ಯನ್ನು ಕೂಡ ನಾನು ಮುಂಗಡವಾಗಿ ತಿಳಿದಿರಲಿಲ್ಲ."

ಮಿಸೆಸ್ ಓರಾಯನ್‌ಡೇನಳು:—"ಅದರಿಂದ ಈಗೇನು ತೊಂದರೆಯಾ ಗಿದೆ? ನೀವು ಅಂಗಡಿಕಾರರು; ಎಲ್ಲ ಜನರಿಗೆ ಅನುಕೂಲವಾಗುವಂತೆ ನಡೆಯು ವುದು ನಿಮ್ಮ ಕರ್ತವ್ಯವೇ ಆಗಿದೆ. ನಿಮ್ಮ ಸೇವಕ ವರ್ಗವೆಲ್ಲ ಗಿರಾಕಿಗಳಿಗೆ ಮಾಲು ತೋರಿಸುವದರಲ್ಲಿ ನಿಮಗ್ನವಾಗಿರುವುದರಿಂದ ನಾನು ಅವರಿಗೇನೂ ತೊಂದರೆ ಕೊಡದೆ, ನೆಟ್ಟಗೆ ನಿಮ್ಮ ಬಳಿಗೆ ಬಂದಿದ್ದೇನೆ. ನನ್ನನ್ನು ಮಿಸೆಸ್ ಓರಾಯನ್‌ಡೇನಳೆನ್ನುವರು."

"ಹಾಗೆಯೊ? ಮ್ಯಾಡಮ್, ತಮ್ಮ ಹೆಸರು ನನಗೆ ಚೆನ್ನಾಗಿ ಗೊತ್ತಿದೆ. ತಾವು ವಿಶ್ರಮಿಸಿರಿ." ಸಾ ಸಾಹೇಬನು ಅವಳಿಗೊಂದು ಕುರ್ಚಿ ತೋರಿಸಿದನು. ಬಳಿಕ ಮಿಸೆಸ್ ಓರಾಯನ್‌ಡೇನಳು ಅಲ್ಲಿಯದೊಂದು ಕುರ್ಚಿಯ ಮೇಲೆ ಕುಳಿತು, ಯಾವ ಬಗೆಯ ಪ್ರಸ್ತಾವನೆಯನ್ನೂ ಮಾಡದೆ: "ನನಗೊಬ್ಬ ಸೋದ ರಳಿಯನಿದ್ದಾನೆ; ಅವನು ಕೆಂಪು ಸೈನ್ಯದೊಳಗೆ ನೌಕರನಾಗಿರುತ್ತಾನೆ; ಆತನ ಹೆಸರು ಲೆಫ್ಟನಂಟ ಕಿಲ್ಡೀಯಾರ. ನೀವು ಅವನನ್ನು ಗುರ್ತಿಸುವಿರಾ?"

ಸಾ:—"ಕಿಲ್ಡೀಯಾರನೇ? ಈ ಹೆಸರಂತೂ ನನಗೆ ಹೆಚ್ಚಾಗಿ ಪರಿಚಿತ ವೆಂದು ತಿಳಿಯುತ್ತದೆ; ಆದರೆ ಸಣ್ಣಪುಟ್ಟ ಜನರ ಹೆಸರುಗಳನ್ನು ಹೆಚ್ಚಾಗಿ ನೆನ ಪಿಡುವುದು ಕಠಿಣವೇ."

ಓರಾ:—"ಈ ನನ್ನ ಸೋದರಳಿಯನು ವರ್ಷಾರು ತಿಂಗಳುಗಳಿಂದಲೂ ನಿಮ್ಮ ಅಂಗಡಿಯಲ್ಲಿ ವಿಧವಿಧದ ವಜ್ರ-ರತ್ನಗಳ ಆಭರಣಗಳನ್ನು ಆಗಾಗ್ಗೆ ಸಾಲವಾಗಿ ಒಯ್ಯುತ್ತಿರುವನೆಂದು ಕೇಳಿದ್ದೇನೆ. ಒಟ್ಟನಲ್ಲಿ ಆತನು ನಿಮ್ಮಲ್ಲಿಂದ ಎಷ್ಟೋ ನೂರು ಪೌಂಡುಗಳ ಆಭರಣಗಳನ್ನು ಕೊಂಡುಕೊಂಡಿರುತ್ತಾನಂತೆ. ಈ ಸಂಗತಿಯು ನಿಜವೋ-ಸುಳ್ಳೋ? ಎಂಬದನ್ನು ತಿಳಿಯಲಪೇಕ್ಷಿಸುತ್ತೇನೆ."

"ಮ್ಯಾಡಮ್ ಸಾಹೇಬ, ಅಹುದು; ಆತನು ಸಾಲರೂಪವಾಗಿ ನಮ್ಮ ಅಂಗಡಿಯಿಂದ ಆಗಾಗ್ಗೆ ಕೆಲ ಕೆಲವು ಅಲಂಕಾರಗಳನ್ನು ಒಯ್ದಿರುವದು ನಿಜ."

ಓರಾ:—"ಅವನಿಂದ ನಿಮಗೆಷ್ಟು ಪೌಂಡು ಬರಬೇಕಾಗಿದೆ? ಹಾಗು ಇದುವರೆಗೆ ಬಂದುದೆಷ್ಟು?"

ಸಾ:—"ಒಂದು ಪೇನ್ಸೂ ಬಂದಿರಲಿಲ್ಲ; ಆದರೆ ನಿನ್ನೆಯ ದಿವಸ ಆಕಸ್ಮಾತ್ತಾಗಿ ಅವನಿಂದ ನಮಗೆ ಬರತಕ್ಕ ಬಾಕಿಯೆಲ್ಲವೂ ಬಂದುಬಿಟ್ಟದೆ."

ಓರಾ:—"ಹಾಗೆಯೋ? ಈ ಸಂಗತಿ ಕೇಳಿ ವಿಸ್ಮಯವಾಗದಿರುವದಿಲ್ಲ. ಇನ್ನು ನೀವು ನನ್ನ ಇನ್ನೊಂದು ಪ್ರಶ್ನೆಗೆ ಉತ್ತರ ಕೊಡಿರಿ. ಯಾವದೊಂದು ಕಾಯಿದೆಗೆ ವಿರುದ್ಧವಾದ ಕೆಲಸಕ್ಕಾಗಿ ಎರಡು ಮೂರು ದಿನಗಳ ಮುಂಚೆ ಅವನು ನಿಮ್ಮಿಂದ ಸೆರೆಹಿಡಿಯಲ್ಪಡುವ ಪ್ರಸಂಗವಿದ್ದಿತೇ? ನಿಮ್ಮ ಫರ್ಮಿನಿಂದ ಅವನ ವಿರುದ್ಧ ಯಾವುದೊಂದು ವಾರಂಟ ಹೊರಡಿಸುವ ಪ್ರಯತ್ನ ನಡೆದಿತ್ತೇ?

ಸಾ ಸಾಹೇಬನು ಕೊಂಚವೇ ಗೊಂದಲಕ್ಕೀಡಾಗಿ:"ನಮ್ಮಗಳ ಫಾರ್ಮಿಗೆ ಸಂಬಂಧಿಸಿದ ಯಾವದೊಂದು ಗೌಪ್ಯ ಸಂಗತಿಯನ್ನು ಹೊರಗಿನ ಜನರೆದುರು ಪ್ರಕಾಶಪಡಿಸುವದು ಯುಕ್ತಿಸಮ್ಮತವಲ್ಲ; ಆದರೆ ಲೆಫ್ಟನೆಂಟ ಕಿಲ್ಡೀಯಾರನು ನಿಮ್ಮ ಸೋದರಳಿಯನೆಂದು ನೀವು ಹೇಳುತ್ತಿರಲು, ಅವನ ಸಂಬಂಧದ ಯಾವ ಎಲ್ಲ ಸಂಗತಿಗಳು ಬೇರೆಯವರ ಮುಂದೆ ಹೇಳಲಾರದಂಥವಿರುವವೋ ಅವುಗಳನ್ನು ನಿಮಗೆ ತಿಳಿಸಲು ಬಾಧಕವಿಲ್ಲ. ಅವನ ವಿರುದ್ಧ ನಾವು ಯಾವ ವಾರಂಟ ಹೊರಡಿಸಲಿದ್ದೆವೆಂಬ ಸಂಗತಿಯು ನಿಮಗೆ ತಿಳಿದಿವೆಯೋ ಅದು ಸುಳ್ಳಲ್ಲ; ಸಂಪೂರ್ಣ ನಿಜವು. ನಾಳೆ ನಮಗೆ ಹಣ ದೊರೆಯದಿದ್ದರೆ ನಾವು ಖಂಡಿತವಾಗಿಯೂ ವಾರಂಟ ಹೊರಡಿಸುತ್ತಿದ್ದೆವು.

ಓರಾ:—"ಆತನು ಯಾವ ಎಲ್ಲ ಅಲಂಕಾರಗಳನ್ನು ಒತ್ತಿ ಇಟ್ಟಿದ್ದನೋ ಅವನ್ನೆಲ್ಲ ನಿಮ್ಮ ಅಂಗಡಿಯಿಂದ ಬಡ್ಡಿ ಸಾಲವಾಗಿ ಕೊಂಡುಕೊಂಡಿದ್ದನೋ?

ಸಾ:—"ಮ್ಯಾಡಮ್, ಹೌದು. ಅವನು ಆ ಬಗೆಯಾಗಿ ಕಾಯಿದೆಗೆ ವಿರುದ್ಧವಾದ ಕೆಲಸ ಮಾಡಿದ್ದನೆಂಬದನ್ನು ತಿಳಿದೊಡನೆಯೇ ನಾವು ಅವನನ್ನು ಸೆರೆ ಹಿಡಿಯಲು ಪ್ರವೃತ್ತರಾಗಿದ್ದೆವು; ಆದರೆ ಆತನ ಸುದೈವದಿಂದ ಆತನು ನಮಗೆ ಕೊಡಬೇಕಾಗಿದ್ದ ಎಲ್ಲ ಹಣವನ್ನೂ ಕೊಟ್ಟುಬಿಟ್ಟನು!"

ಓರಾಯನ್‌ಡೇನಳು ತನ್ನ ಕಾಲಿನ ಬೂಟನ್ನು ಕೆಳಗಿನ ನೆಲಕ್ಕೆ ಬಲವಾಗಿ ಅಪ್ಪಳಿಸಿ, "ನಿಮ್ಮ ಎಲ್ಲ ಹಣವೂ ಮುಣುಗಬೇಕಾಗಿತ್ತು. ಆತನಿಂದ ನಿಮಗೆ ಒಂದು ಪೇನ್ಸು ಕೂಡ ದೊರಕಿರದಿದ್ದರೆ ನನಗೆ ಸಂತೋಷವಾಗುತ್ತಿತ್ತು. ನನ್ನ ಸೊದರಳಿಯನು ತೀರ ಸಾಮಾನ್ಯನು, ಬಡವನು. ತಂದೆಯ ಸಂಬಂಧದ ಕೊಂಚವೃತ್ತಿ ಹಾಗು ಪಹರೆಯ ಸಂಬಂಧದ ಅಲ್ಪವೇತನ ಇವಿಷ್ಟೇ ಅವನ ಆದಾಯ, ಅವನು ನನ್ನ ಸಂಪತ್ತಿಗೆ ಉತ್ತರಾಧಿಕಾರಿಯಾಗುವನೆಂದು ನೀವು ತಿಳಕೊಂಡಿರಬಹುದು. ಅಂತೆಯೇ ನೀವು ಆ ಕಫಲ್ಲಕನಿಗೆ ನಿಮ್ಮ ಅಂಗಡಿಯಿಂದ ಇಪ್ಪತ್ತು ಇಪ್ಪತ್ತೈದು ಸಾವಿರ ಪೌಂಡು ಬೆಲೆಯ ಅಲಂಕಾರಗಳನ್ನು

ಸಾಲವಾಗಿ ಕೊಟ್ಟಿರುತ್ತೀರಿ; ಆದರೆ ನಾನು ನಿಮ್ಮ ಭ್ರಮನಿರಸನ ಮಾಡು ತ್ತೇನೆ, ಕೇಳಿರಿ. ಆತನು ಇನ್ನು ಮೇಲೆ ನನ್ನ ಆಸ್ತಿಗೆ ಉತ್ತರಾಧಿಕಾರಿ ಯಾಗುವ ಆಶೆಯಿಲ್ಲ. ಇನ್ನು ಮುಂದೆ ನೀವು ಅವನಿಗೆ ಮತ್ತೆ ಸಾಲರೂಪ ವಾಗಿ ಅಲಂಕಾರಗಳನ್ನು ಕೊಟ್ಟದ್ದೇ ಆದರೆ, ನೀವು ಕೊನೆಗೆ ಪಶ್ಚಾತ್ತಾಪ ಹೊಂದೀರಿ-ತಿಳಿಯಿರಿ."

ಹೀಗೆಂದು ಹೇಳಿದವಳೇ ಮಿಸೆಸ್ ಓರಾಯನ್‌ಡೇನಳು ಲಗುಬಗನೆ ಆ ರತ್ನದ ವ್ಯಾಪಾರಿಯ ಆಫೀಸಿನಿಂದ ಹೊರಬಿದ್ದಳು; ಹಾಗು ರಾಜಬೀದಿಗೆ ಬಂದು ಮತ್ತೊಂದು ಟ್ಯಾಕ್ಸಿಯನ್ನು ಬಾಡಿಗೆಗೆ ಗೊತ್ತುಮಾಡಿಕೊಂಡು ಶೋ ಫರನಿಗೆ "ಲಿಂಕ್ಸನ್ಸ ಹೋಮಿ"ಗೆ ಒಯ್ಯಲಿಕ್ಕೆ ತಿಳಿಸಿದಳು.

ಅವಳು ಟ್ಯಾಕ್ಸಿಯಲ್ಲಿ ಕುಳಿತು ತುಸ ಅಸ್ಫುಟವಾಗಿ ಅನ್ನುತ್ತಾಳೆ: – "ಇನ್ನು ತಡಮಾಡುವ ಕಾರಣವೇನು? ಈಗ ಹೇಗೂ ಲಂಡನ್ನಿಗೇ ಬಂದಿರು ತ್ತೇನೆ. ಎಲ್ಲ ಕೆಲಸವನ್ನು ಪೂರೈಸಿಯೇ ಹೋಗುವೆನು. ಈಗಲೆ ನನ್ನ ಎಟರ್ನಿ ಯಾದ ಮಿಸ್ಟರ ಪಾರ್ಚಮೆಂಟನನ್ನು ಕಂಡು ಹೊಸ ಮೃತ್ಯುಪತ್ರಬರೆದಿಡುವ ವ್ಯವಸ್ಥೆ ಮಾಡುವೆನು. ಇನ್ನು ತಡೆಯಲಾರೆನು. ಇಷ್ಟುದಿನ ತಡೆದದ್ದೇ ಮಹ ದಪರಾಧವಾಗಿದೆ. ಆ ಹತಭಾಗಿಯ ನಡವಳಿಯು ಸುಧಾರಿಸುವ ಆಶೆಯಿಲ್ಲ. ನಾನು ಇಷ್ಟು ಕಷ್ಟಪಟ್ಟು ಗಳಿಸಿದ ಹಣವನ್ನು ನಾನು ಸತ್ತ ಕೂಡಲೆ ಆತನ ಎರಡೂ ಕೈಗಳಿಂದ ತೂರಿ ಹಾಳು ಮಾಡುತ್ತಿದ್ದನು! ದೇವರು ನನ್ನ ಕಣ್ಣಿಗೆ ಚನ್ನಾಗಿ ಅಂಜನವನ್ನಿಕ್ಕಿದನು. ನನ್ನ ಇದ್ದಬಿದ್ದ ಆಸ್ತಿಯನ್ನೆಲ್ಲ ದೇಶದ ಸತ್ಕಾರ್ಯಕ್ಕಾಗಿ, ದೇಶದ ಹಿತಕ್ಕಾಗಿ ದಾನ ಮಾಡುವದೇ ಪರಮೇಶ್ವರನಿಗೆ ಇಷ್ಟವೆಂದು ತೋರುತ್ತದೆ. ಇದೇ ಅವನ ಇಚ್ಛೆ. ಆತನ ಆ ಇಚ್ಛೆಯೇ ಇಡೇ ರಲಿ! ಶರೀರವು ಅನಿತ್ಯವು. ನನ್ನ ವಯಸ್ಸು ಕಡಿಮೆಯಾಗಿಲ್ಲ. ಇನ್ನು ಎಷ್ಟು ದಿನ ಬದುಕುವೆನೆಂಬದನ್ನು ಅದಾರು ನಿರ್ಧರಿಸಿ ಹೇಳುವರು? ಮೃತ್ಯುಪತ್ರ ಬರ ಲಾಯಿಸುವದಕ್ಕಿನ್ನು ವಿಲಂಬ ಮಾಡಿ ಪ್ರಯೋಜನವಿಲ್ಲ. ಆ ಹತಭಾಗ್ಯನು ನನ್ನ ಪಾದಗಳ ಮೇಲೆ ತನ್ನ ತಲೆ ಒಡಕೊಂಡರೂ ನಾನಿನ್ನು ಅವನಿಗೆ ದಯೆ ದೋರಲಾರೆನು. ಅವನೊಡನೆ ನಾನಿನ್ನು ಯಾವ ಬಗೆಯ ಸಂಬಂಧವನ್ನೂ ಇರಿಸುವುದಿಲ್ಲ."

* * *

ಶರತ್‌ಕಾಲದ ಹೊಂಬಣ್ಣದ ರವಿರಶ್ಮಿಗಳು ಹಾಯಿಡ್ ಪಾರ್ಕಿನೊಳ ಗಿನ ಗಿಡ-ಬಳ್ಳಿಗಳ, ಹೂವು-ಎಲೆಗಳು ಮೇಲೆ ಮಿನುಗಿ ಝುಕ್‌ಝುಕ್ ಎಂದು ಹೊಳೆಯುತ್ತಿದ್ದವು. ಅಸಂಖ್ಯ ನರ-ನಾರಿಯರೂ ಬಾಲಕ-ಬಾಲಿಕೆಯರೂ

ಸುಂದರ ಉಡುಪಿನಿಂದ ಸಜ್ಜಾಗಿ ಆ ಉಪವನದಲ್ಲಿ ಪರಿಭ್ರಮಣಕ್ಕೆಂದು ಬಂದಿದ್ದರು. ಅವರುಗಳ ಮನಸ್ಸು ಎಷ್ಟು ಆನಂದ-ಉತ್ಸಾಹಗಳಿಂದ ತುಂಬಿತ್ತೆಂಬದನ್ನು ಹೇಳಲಸದಳವು. ಆ ಉಪವನದ ತುಂಬೆಲ್ಲ ಆನಂದವೇ ಆನಂದ! ಕೆಂಪು ಸೈನ್ಯದ ದಂಡಾಳುಗಳು ಬೆಳಗಿನ ಪರ್ಯಟನಕ್ಕೆಂದು ಹೊರಟು ಸಂತೋಷದಿಂದ ಆ ಉಪವನದೊಳಗೆ ಸಂಚರಿಸುತ್ತಿದ್ದರು. ಮುಂದೆ ಕೆಲ ಕಾಲವನ್ನು ಅಲ್ಲಿ ಕಳೆದ ನಂತರ ಅವರು ತಮ್ಮ ಬರಾಕಿಗೆ ಹಿಂದಿರುಗಲು ಸಜ್ಜಾದರು.

ಲಂಡನ್ನ ಪಟ್ಟಣದೊಳಗಿನ ಮಾನ್ಯವಂತ ಸಮಾಜದೊಳಗಿನ ಹಲವು ಮಂದಿ ಸ್ತ್ರೀ-ಪುರುಷರು ಆ ಸುಂದರ ಸುಪ್ರಭಾತದಲ್ಲಿ ಆ ಉಪವನ ವಿಹಾರಕ್ಕಾಗಿ ಬಂದಿದ್ದರು. ಕೆಂಪು ಸೈನ್ಯದಳದ ಮುಂಭಾಗದಲ್ಲಿ ಒಂದು ತೇಜಸ್ವಿಯಾದ ಸುಂದರ ಕುದುರೆಯ ಮೇಲೆ ಲೆಫ್ಟನೆಂಟ ಕಿಲ್ಡೇಯಾರನು ಕುಳಿತು ನಡೆದಿದ್ದನು. ಕೆಂಪು ಸೈನ್ಯದ ದಂಡಾಳುಗಳು ಸಾಲು ಹಿಡಿದುಕೊಂಡು ಆ ಹಾಯಿಡ್ ಪಾರ್ಕಿನೊಳಗಿಂದ ಹೊರಹೋಗುತ್ತಿದ್ದರು; ಅದೇ ವೇಳೆಗೆ ಸರಿಯಾಗಿ ಅವರೆದುರು ಒಂದು ಪ್ರಚಂಡವಾದ ಟಾಪ್ ಇಲ್ಲದ ಕುದುರೇ ಗಾಡಿ ಬಂತು. ಉಚ್ಚೈಃಶ್ರವದಂತಹ ಬಹು ಭವ್ಯವಾದ ಅಚ್ಚ ಬಿಳೀ ಬಣ್ಣದ ಎರಡು ಕುದುರೆಗಳು ಆ ಗಾಡಿಯನ್ನು ಎಳೆದುಕೊಂಡು ಉಪವನದ ದಾರಿಯಲ್ಲಿ ಮುಂದರಿಯುತ್ತಿದ್ದವು. ಆ ಗಾಡಿಯಲ್ಲಿ ಸುಂದರ ವೇಷ-ಭೂಷಣಗಳುಳ್ಳವಳಾದ ಒಬ್ಬ ಪರಮ ಸುಂದರ ಯುವತಿಯು ಕುಳಿತಿದ್ದಳು. ಆ ಮಹಾಮಹಿಮಳಾದ ಅಪೂರ್ವ ಲಾವಣ್ಯವತಿಯನ್ನು ಕಂಡು ಕೆಂಪು ಸೈನ್ಯದ ದಂಡಾಳುಗಳು ಸಂಭ್ರಮದಿಂದ ಅವಳ ಗಾಡಿಗೆ ದಾರಿ ಬಿಟ್ಟರು. ಅವಳನ್ನು ಕಂಡು ಲೆ. ಕಿಲ್ಡೇಯಾರನ ಅಂತಃಕರಣವು ಸಂತೋಷದಿಂದ ಉಕ್ಕಿತು. ಅವನ ಎದೆಯು ವೇಗದಿಂದ ಹಾರತೊಡಗಿತು. ಹರ್ಷೋಚ್ಛ್ವಾಸದಿಂದ ಅವನ ಇಡೀ ಮುಖಮಂಡಲವು ಕೆಂಪಡರಿತು ಆ ತರುಣಿಯು ಬೇರೆ ಯಾರೂ ಆಗಿರದೆ, ಲಾರ್ಡ ಮೆಸಿಂಡೇಲನ ಮಗಳಾದ ಡಾಫನಿ ಭಾರನನ್ನಳು.

ಡಾಫನಿಗೂ ಕಿಲ್ಡೇಯಾರನಿಗೂ ದೃಷ್ಟಿವಿನಿಮಯವಾಗಲು, ಕಿಲ್ಡೇಯಾರನು ತನ್ನ ತಲೆಯ ಮೇಲಿನ ಟೊಪ್ಪಿಗೆಯನ್ನೆತ್ತಿ ನಗೆಮೊಗದಿಂದ ಅವಳನ್ನು ಅಭಿವಂದಿಸಿದನು; ಆದರೆ ಡಾಫನಿಯು ಮಾತ್ರ ಅವನಿಗೆ ಪ್ರತ್ಯಾಭಿವಂದನೆ ಮಾಡದೆ, ಬೇರೆ ಕಡೆಗೆ ಮೋರೆ ತಿರುವಿ ಹೊರಟು ಹೋದಳು. ಅವಳ ಆಗಿನ ವರ್ತನದಿಂದ ಅವಳಿಗೂ ಕಿಲ್ಡೇಯಾರನಿಗೂ ಪರಿಚಯವೇ ಇದ್ದಿಲ್ಲವೆಂದು ತೋರಿತು.

ಅವಳ ಆ ವರ್ತನದಿಂದ ಕಿಲ್ಡೇಯಾರನ ತಲೆಯ ಮೇಲೆ ವಜ್ರಾಘಾತ

ವಾದಂತಾಯಿತು. ಅವನ ಕಣ್ಣೆದುರಿಗೆ ಕತ್ತಲೆಗವಿದಂತಾಗಿ, ಆ ಸುಪ್ರಭಾತ ಕಾಲದ ಪ್ರಕಾಶವು ಅಡಗಿಬಿಟ್ಟಿತು. ಆಗ ಆತನು ತನ್ನ ಕುದುರೆಯ ಮೇ-ಲಿಂದ ಉರುಳಿ ಬೀಳದಿದ್ದದ್ದೇ ಆಶ್ಚರ್ಯಕರವು. ಬಹು ಕಷ್ಟದಿಂದ ಆತನು ಆತ್ಮಸಂವರಣ ಮಾಡಿಕೊಂಡು, ಅಸ್ಫುಟವಾಗಿ:—"ಇದೇನಾಯಿತು! ನನ್ನನ್ನು ಕಂಡು ಗುರ್ತಿಲ್ಲದವರಂತೆ ಮೋರೆ ತಿರುವಿದಳಲ್ಲ! ಡಾಫನಿಯ ಈ ವಿಚಿತ್ರವೂ ಆಕಸ್ಮಿಕವೂ ಆದ ವ್ಯವಹಾರಕ್ಕೆ ಕಾರಣವೇನಿರಬಹುದು? ನನಗಂತೂ ಈ ಬಗ್ಗೆ ಏನೂ ತಿಳಿಯದಂತಾಗಿದೆ."

ಕಿಲ್ಡೇರಿಯಾರನ ಸೊಂಡೆಯು ಒಣಗಿಬಿಟ್ಟಿತು. ಅವನ ಹೃದಯವು ಡವ ಡವ ಎಂದು ಹಾರಹತ್ತಿತು. ಉದ್ವೇಗವು ಕಣ್ಣುಗಳಲ್ಲಿ ದಟ್ಟವಾಗಿ ತುಂಬಿತು. ಆತನು ಸಾ ಲಿಬರ್ನ ಕಂಪನಿಯ ಸಾಲವನ್ನು ಎರಡು ಮೂರು ದಿನಗಳ ಮುಂಚೆಯೇ ತೀರಿಸಿದ್ದನು. ಅವಕಾಶ ದೊರೆಯದ ಮೂಲಕ ಆತನಿಗೆ ಕಳೆದ ಎರಡು ಮೂರು ದಿನಗಳಲ್ಲಿ ಡಾಫನಿಯನ್ನು ಕಾಣಲಾಗದಿದ್ದರೂ ಬ್ಲೇಕನ ಅಭಯವಾಣಿಯನ್ನು ಕೇಳಿ ಅವನಿಗೆ ಅನಿಸಿದ್ದಿತೇನಂದರೆ, ತನ್ನ ವಿಷಯದ ಡಾಫ ನಿಯ ಸಂದೇಹವು ಸಂಪೂರ್ಣವಾಗಿ ನಿವಾರಣವಾಗಿದೆ. ಆದ್ದರಿಂದ ಆತನು ಡಾಫನಿಯ ಆಗಿನ ಆ ಆಕಸ್ಮಿಕ ವಿಚಿತ್ರ ವ್ಯವಹಾರದ ಕಾರಣವನ್ನು ತಿಳಿಯ ದಾದನು. ನಿವಾರಿಸಲಸಾಧ್ಯವಾದ ಅಂತರ್ಯಾತನೆಯ ಮೂಲಕ ಅವನು ಚಡಪಡಿಸಹತ್ತಿದನು. ಕೊನೆಗೆ ಆತನು ಅನುಮಾನಿಸಿದನೇನಂದರೆ, ತನ್ನ ಮಹಾವೈರಿಯಾದ ನೇಭಿಲ್ ಹರಕೋರ್ಟನು ಲಾರ್ಡ ಮೆಸಿಂಡೇಲ ಮತ್ತು ಡಾಫನಿ ಭಾರನನ್ನ ಇವರುಗಳಿಗೆ ಬೇನಾಮಿ ಕಾಗದ ಕಳಿಸಿ ತನ್ನ ಸರ್ವ ನಾಶಕ್ಕೆ ಪ್ರವೃತ್ತನಾಗಿರುವನೆಂದು.

ಕಿಲ್ಡೇರಿಯಾರನು ವಿಷಣ್ಣ ಮುಖದಿಂದಲೂ ಉದ್ವೇಗದಿಂದ ತುಂಬಿದ ಚಿತ್ತದಿಂದಲೂ ತನ್ನ ಸೈನ್ಯದ ಬರಾಕಿಗೆ ಹಿಂದಿರುಗಿದನು; ಹಾಗು ಅಲ್ಲಿಯ ಸ್ವಂತದ ಕೋಣೆಗೆ ಹೋಗಿ ಉಸ್ಸೆಂದು ಕುಳಿತನು. ಕೆಲ ಹೊತ್ತಿನ ಮೇಲೆ ಉಡಿಗೆತೊಡಿಗೆಗಳನ್ನು ಬದಲಾಯಿಸಿ ಒಂದು ಕುರ್ಚಿಯ ಮೇಲೆ ಅಡ್ಡಾಗಿ, ತನ್ನ ಎರಡೂ ಕೈಗಳನ್ನು ತಲೆಯ ಮೇಲಿರಿಸಿಕೊಂಡು ಸ್ವಂತದ ದುರ್ಭಾಗ್ಯ ವನ್ನು ಕುರಿತು ಚಿಂತಿಸತೊಡಗಿದನು.

ಕಟ್ಟಕಡೆಗೆ ಆತನು ತನ್ನ ಮನಸ್ಸಿನಲ್ಲೇ ಹೀಗೆಂದು ಅಂದುಕೊಂಡನು: "ಇದು ಆ ರಾಸ್ಕಲ್ಲನ ಕಿತಾಪತಿಯೆಂಬುದೇ ನಿಜವು. ಈ ಬಗ್ಗೆ ನನಗೆ ಕೊಂಚ ವೂ ಸಂದೇಹವಿಲ್ಲ; ಅಥವಾ ನಾನು ಕಳವು ಮಾಡುವಾಗ ತಾನು ಕಣ್ಣಾರೆ ನೋಡಿದ್ದನ್ನು ಡಾಫನಿಯು ಅವಿಶ್ವಾಸಪಟ್ಟಿಲ್ಲ. ಬ್ಲೇಕನು ತರ್ಕ ವಿತರ್ಕ

ಗಳಿಂದ ಅವಳನ್ನು ಮೋಸಪಡಿಸಲು ಪ್ರಯತ್ನಿಸಿದ್ದರೂ ಡಾಫನಿಯು ಅವನ ಮಾತಿಗೆ ಮರುಳಾಗಿರಲಿಕ್ಕಿಲ್ಲ. ಏನಿದ್ದರೂ ಸದ್ಯದ ವ್ಯವಹಾರವೇನೆಂಬದನ್ನು ನಾನು ತಿಳಿಯಲಾರೆನು. ಆದರೂ ಡಾಫನಿಯು ನನ್ನನ್ನು ನಿಜವಾಗಿಯೂ ಪ್ರೀತಿಸುತ್ತಿದ್ದರೆ ಇನ್ನು ಮೂರು-ನಾಲ್ಕು ದಿನಗಳಲ್ಲೇ ಅವಳ ಈಗಿನ ಈ ವರ್ತ ನವು ಪರಿವರ್ತನಗೊಳ್ಳುವದು. ಅವಳು ತನ್ನ ಅನುಮಾನದ ಸಂಗತಿಯನ್ನು ಮರೆತು ಬಿಡುವಳು. ನಾನು ಈಗ ಇಷ್ಟು ಅಧೀರನಾಗುವದರಿಂದ ಯಾವ ಪ್ರಯೋಜನವೂ ಇಲ್ಲ. ಇನ್ನು ನಾಲ್ಕಾರು ದಿನ ನಿರೀಕ್ಷಿಸುವೆನು. ಆಗ ಏನಾ ಗುವದೋ ನೋಡುವೆನು. ನೇಭಿಲ್ ಹರಕೋರ್ಟನು ಈ ವಿಷಯದಲ್ಲಿ ಸ್ವಲ್ಪವೂ ಅವಾಂತರ ನಡೆಸಿರದಿದ್ದರೆ,· ಈಗಿನ ಈ ಪ್ರಕ್ಷುಬ್ಧ ವಾತಾವರಣವು ಬೇಗನೆ ಹದಕ್ಕೆ ಬರುವದು.

ಈ ಬಗೆಯ ಆಶೆ ಮತ್ತು ನಿರಾಶೆಗಳ ಆಂದೋಲನದಿಂದ ಅವನ ಮನ ಸ್ಸಿನಲ್ಲಿ ಬಿರುಗಾಳಿಯೇ ಎದ್ದಂತಾಗಿತ್ತು. ಅವನು ತಟ್ಟನೆ ತನ್ನ ಕುರ್ಚಿಯ ಮೇಲಿಂದೆದ್ದು ಹೋಗಿ ತನ್ನ ಡೆಸ್ಕಿನ ಬಳಿ ನೋಡುತ್ತಾನೆ, ಅಲ್ಲಿ ಟಪಾಲ ಮೂಲಕ ಬಂದ ಎರಡು ಪಾಕೀಟುಗಳೂ ಪ್ಯೂನನ ಮೂಲಕ ಬಂದ ಒಂದು ಕಾಗದವೂ-ಒಂದು ಸಣ್ಣ ಪಾರ್ಸಲ್ಲೂ ಒಂದು ಬಿದ್ದಿದ್ದವು. ಆ ಪಾರ್ಸಲ್ಲೂ ಕೂಡ ಟಪಾಲ ದ್ವಾರಾ ಬಂದಿರಲಿಲ್ಲ. ಆ ಪಾರ್ಸಲನ್ನು ಕಂಡ ಕೂಡಲೆ ಆತನ ಹೃದಯದೊಳಗಿನ ರಕ್ತವೆಲ್ಲ ಒಮ್ಮೆಲೆ ಗಡ್ಡೆಗಟ್ಟಿದಂತಾಯ್ತು. ಅವನ ತಲೆ ಯು ಝಿಮ್ ಝಿಮ್ ಎಂದಂದು ತಿರುಗಹತ್ತಿತು. ಆ ಪಾರ್ಸಲಿನಲ್ಲೇನಿದೆ ಎಂಬದನ್ನು ಅವನು ಅನುಮಾನದಿಂದಲೇ ತಿಳಿದುಕೊಂಡು ವ್ಯಾಕುಲಭಾವ ದಿಂದ:—"ನನ್ನ ಹಗೆಯು ನನ್ನ ವಿರುದ್ಧ ವಿಷಾಕ್ತ ಅಸ್ತ್ರವನ್ನೇ ಪ್ರಯೋಗಿ ಸಿರುತ್ತಾನೆ. ಇನ್ನು ನನಗೆ ಉಳಿವಿಲ್ಲ. ನಾನಿನ್ನು ಮುಳುಗುವದೇ ಖಂಡಿತ."

ಹೀಗೆಂದು ಅಂದುಕೊಂಡು ಕಿಲ್ಡೇಯಾರನು ತತ್ತರಿಸುವ ಕೈಗಳಿಂದಲೇ ಅಲ್ಲಿದ್ದ ಪತ್ರಗಳಲ್ಲಿಯ ಒಂದನ್ನು ಒಡೆದು ಓದತೊಡಗಿದನು. ಆ ಪತ್ರದ ಸಂಗತಿಯು ಹೀಗಿದ್ದಿತು:—

"ಪ್ರಿಯ ಮಹನೀಯರೇ, ನಮ್ಮ ಸನ್ಮಾನಿತ ಪಕ್ಷಗಾರರಾದ ಮಿಸೆಸ್ ಓರಾಯನ್ ಡೇನಳ ಹೇಳಿಕೆಯ ಮೇರೆಗೆ ನಿಮಗೆ ತಿಳಿಸಿಡುವದೇನಂದರೆ, ಮೆಸರ್ಸ ಸಾ-ಲಿಬರ್ನ ಕಂಪನಿಯವರಲ್ಲಿ ನಿಮ್ಮ ಸಾಲ ಮುಂತಾದ ವ್ಯವಹಾರ ವನ್ನು ಅವಳು ಸ್ವಂತ ಹೋಗಿ ತಿಳಿದು ಆ ಬಗ್ಗೆ ನಿಸ್ಸಂದೇಹಳಾದ ಬಳಿಕ, ಆಕೆಯು ಈ ಮೊದಲು ನಿಮಗೆ ಅನುಕೂಲವಾದ ಯಾವ ಮೃತ್ಯುಪತ್ರವನ್ನು ಮಾಡಿಟ್ಟಿದ್ದಳೋ ಅದನ್ನಿಂದು ನಷ್ಟಪಡಿಸಿರುತ್ತಾಳೆ. ಅವಳು ಈಗ ಯಾವ

ಹೊಸ ಮೃತ್ಯುಪತ್ರವನ್ನು ಮಾಡಿಸಿರುವಳೋ ಅದರಲ್ಲಿ ನಿಮ್ಮ ಹೆಸರು ಕೂಡ ಉಲ್ಲೇಖಿಸಲ್ಪಟ್ಟಿಲ್ಲ. ಅವಳ ಅಭಿಪ್ರಾಯದ ಮೇರೆಗೆ ನಿಮಗೆ ಮತ್ತೆ ತಿಳಿಸುವ ದೇನಂದರೆ, ಈಗಿನ ಮೃತ್ಯುಪತ್ರವೇ ಅವಳ ಕೊನೆಯ ಮೃತ್ಯುಪತ್ರ. ಯಾವ ಕಾರಣದಿಂದಲೂ ಅವಳು ತನ್ನೀ ಮತವನ್ನು ಬದಲಿಸಲಾರಳು; ಅಲ್ಲದೆ ಅವಳು ಇನ್ನು ನಿಮ್ಮ ಮೋರೆಯನ್ನು ಕೂಡ ನೋಡಲಾರಳು. ನೀವು ಅವಳಿಗೆ ಯಾವುದೊಂದು ಚೀಟಿ-ಕಾಗದ ಕಳಿಸಿದರೆ ಅವಳು ಅದನ್ನು ಸ್ವೀಕರಿಸದೆ, ಮರಳಿಸಬಹುದು. ಸಹಿ—ಉಯಿಲ್ಯಮ್ ಪಾರ್ಚಮೆಂಟ, ಎಟರ್ನಿ"

ಅದನ್ನೋದಿದ ನಂತರ ಕಿಲ್ಡೇಯಾರನ ಮೋರೆಯು ಬಿಳುಪಾಯಿತು; ಆದರೆ ಅವನು ಬಾಹ್ಯತಃ ಯಾವ ಬಗೆಯ ಚಾಂಚಲ್ಯವನ್ನೂ ತೋರಲಿಲ್ಲ. ಆಘಾತಗಳ ಪುನರಾವರ್ತನದಿಂದ ಅವನ ಹೃದಯವು ಕಲ್ಲಾದಂತಾಗಿ ಅದು ಆ ಆಘಾತಗಳನ್ನು ಸಹಿಸಿಕೊಳ್ಳಹತ್ತಿತು. ಯಾವ ಕಾಗದವು ಪೋಸ್ಟ ಮೂಲಕ ಬಂದಿರಲಿಲ್ಲವೋ, ಯಾವನೋ ಸಿಪಾಯಿಯು ತನ್ನ ಡೆಸ್ಕಿನ ಮೇಲಿರಿಸಿ ಹೋಗಿದ್ದನೋ ಈಗ ಅವನ್ನು ಒಡೆದನು. ಅದು ಅವನ ಮೇಲಧಿಕಾರಿಯ ಆರ್ಡರು. ಆ ಆರ್ಡರಿನಿಂದ ಅವನು ಕಿಲ್ಡೇಯಾರನಿಗೆ ತಿಳಿಸಿದ್ದನೇನಂದರೆ- "ನಿಮ್ಮ ಸ್ವಭಾವವೂ ಚರಿತ್ರವೂ ಹೇಗೆ ಕಲಂಕಿತವಾಗಿರುವವೋ, ಇಂಥ ಕಲಂಕಿತ ಚರಿತ್ರದ ಯಾವ ಮನುಷ್ಯನೂ ಕೆಂಪು ಸೈನ್ಯದಂತಹ ಉಚ್ಚ ವಂಶಜರ ಹಾಗು ನಿರ್ಮಲ ಚರಿತ್ರದ ಶ್ರೇಷ್ಠ ಜನರ 'ರೆಜಿಮೆಂಟ'ನಲ್ಲಿರಲು ಯೋಗ್ಯನಲ್ಲ. ಆದಕಾರಣ ನಿಮ್ಮ ಹೆಸರನ್ನು ಈ ರಜಿಮೆಂಟಿನೊಳಗಿಂದ ತೆಗೆದು ಬಿಡುವದು ಆವಶ್ಯಕವಾಗಿದೆ. ಅಂತೆಯೇ ನಿಮಗೆ ಸ್ಪಷ್ಟವಾಗಿ ತಿಳಿಸುವು ದೇನಂದರೆ, ನೀವು ಕೂಡಲೆ ನಿಮ್ಮ ಚಾಕರಿಗೆ ರಾಜೀನಾಮೆ ಬರೆದು ಕಳಿಸ ದಿದ್ದರೆ ನಿಮ್ಮನ್ನು ಡಿಸ್‌ಮಿಸ್ ಮಾಡಬೇಕಾದೀತು."

ಕಿಲ್ಡೇಯಾರನು ಆ ಪತ್ರವನ್ನು ಮೇಜಿನ ಮೇಲಿರಿಸಿ, ಮೂರನೇ ಲಕ್ಕೋಟಿಯನ್ನು ಒಡೆದನು. ಅದರಲ್ಲಿ ಬರೆದುದೇನಂದರೆ. —

"ಮಹಾನುಭಾವರೇ, ಬಂಡ ಸ್ಟ್ರೀಟಿನೊಳಗಿನ ರತ್ನದ ವ್ಯಾಪಾರಿಗಳಲ್ಲಿಯ ನಿಮ್ಮ ಸಾಲಸಂಬಂಧದ ಎಲ್ಲ ಸಂಗತಿಗಳು ನನಗೂ ನನ್ನ ಮಗಳಿಗೂ ತಿಳಿದವು. ಇದಲ್ಲದೆ ವೃತ್ತಪತ್ರಗಳ ಮೂಲಕ ನಿಮ್ಮ ವಿರುದ್ಧವಾದ ಹಲವು ಗುರುತರ ಆರೋಪಗಳೂ ನಮಗೆ ಗೊತ್ತಾಗಿರುತ್ತವೆ. ನಾವು ಆ ಬಗ್ಗೆ ಹೆಚ್ಚಾಗಿ ವಿಚಾರಿಸಲು ಅವೆಲ್ಲ ಸುಳ್ಳಲ್ಲವೆಂದೂ ಖಾತ್ರಿಯಾಯಿತು. ಆದುದರಿಂದ ಅತ್ಯಂತ ದುಃಖದಿಂದ ನಾನು ನಿಮಗೆ ತಿಳಿಸಬೇಕಾಗಿರುವದೇನಂದರೆ—ಇನ್ನು ಮೇಲೆ ನೀವು ನನ್ನನ್ನೂ ನಮ್ಮ ಪರಿವಾರದವರನ್ನೂ ಕಾಣಬಾರದು; ನಮಗಾ

ರಿಗೂ ಚೀಟಿ ಕಾಗದಗಳನ್ನು ಕಳಿಸಬಾರದು. ನಮಗೂ ನಿಮಗೂ ಪರಿಚಯವೇ ಇಲ್ಲದಿರುವಂತೆ ವರ್ತಿಸುವದು. ಲಾರ್ಡ ಮೊಸಿಂಡೇಲ."

ಈ ಕೊನೆಯ ಆಘಾತವನ್ನು ಅವನು ಸಹಿಸದಾದನು. ಆದರೂ ಅವನು ಧೈರ್ಯವನ್ನು ತಂದುಕೊಂಡು ಆ ಚಿಕ್ಕ ಪಾರ್ಸಲನ್ನು ಬಿಚ್ಚಿ ನೋಡಿದನು. ಅದರಲ್ಲಿ ಎರಡೇ ಅಲಂಕಾರಗಳಿದ್ದುವು! ಪ್ರೇಮದ ಕುರುಹೆಂದು ಈ ಅಲಂಕಾರಗಳನ್ನು ಆತನು ಪ್ರಥಮದಲ್ಲಿ ಡಾಫನಿ ಭಾರನನ್ನಳಿಗೆ ಕಾಣಿಕೆಯೆಂದು ಕಳಿಸಿದ್ದನು. ಕಿಲ್ಡೇಯಾರನ ಜೇಬಿನೊಳಗಿಂದ ಆ ರಾತ್ರಿ ಯಾವ ಎಲ್ಲ ಅಲಂಕಾರಗಳು ಕಳವಾಗಿ ಹೋಗಿದ್ದವೋ ಅವುಗಳಲ್ಲಿ ಇವೆರಡೇ ಅತ್ಯಲ್ಪ ಬೆಲೆಯ ಜೀನಸುಗಳು. ಅವನ ವೈರಿಯು ಅವನನ್ನು ಉಪಹಾಸಗೊಳಿಸಲೆಂದೂ ಅಲ್ಲದೆ ತನ್ನ ಕೌಶಲ್ಯದಿಂದಲೇ ಅವನ ಸರ್ವನಾಶವಾಯಿತೆಂಬದನ್ನು ತಿಳಿಸಲೆಂದೂ ಈ ಎರಡು ಅಲಂಕಾರಗಳನ್ನು ಅವನೆಡೆಗೆ ತಿರುಗಿ ಕಳಿಸಿದ್ದನು.

ನೇಭಿಲ ಹರಕೋರ್ಟನ ಆ ಕಪಟಜಾಲವನ್ನು ಕಂಡು ಕಿಲ್ಡೇಯಾರನಲ್ಲಿ ಆತ್ಮಸಂವರಣ ಮಾಡಿಕೊಳ್ಳುವ ಶಕ್ತಿ ಉಳಿಯಲಿಲ್ಲ. ಇವನ ಜೀವನದ ಎಲ್ಲ ಆಶೆ-ಅವಲಂಬನಗಳನ್ನೂ ಅವನು ಸಂಪೂರ್ಣ ನಾಶ ಮಾಡಿಬಿಟ್ಟನು. ನೌಕರಿ ಹೋಯಿತು. ಸೋದರತ್ತೆಯ ಸಂಪತ್ತಿಲಾಭದ ಆಶೆ ಹೋಯಿತು. ಕಟ್ಟಕಡೆಗೆ ಡಾಫನಿಯನ್ನು ಹೊಂದುವ ಸಂಭವವೂ ಲೋಪವಾಗಿಬಿಟ್ಟಿತು. ತಾನಿನ್ನು ಯಾವ ಆಶೆಯಿಂದ ಅಧಃಪತಿತ, ಕಲಂಕಿತ, ನೀಗಲಾರದ ಈ ಜೀವನವನ್ನು ಧರಿಸಬೇಕು? ಇನ್ನು ಈ ವ್ಯರ್ಥ ಜೀವನ ಧರಿಸುವದರಿಂದ ಪ್ರಯೋಜನವೇನು? ಸಮಾಜದಲ್ಲಿ ನನಗೆ ಮಾನ-ಮನ್ನಣೆಗಳಿಲ್ಲ; ಅಂದಬಳಿಕ ಸಮಾಜದ ಹೊರಗಾದರೂ ನನಗೆಲ್ಲಿ ಇಂಬಿದೆ? ಕಿಲ್ಡೇಯಾರನು ಕೋಚದ ಮೇಲೆ ಬಿದ್ದು ತನ್ನ ಎರಡೂ ಕೈಗಳಿಂದ ಮೋರೆ ಮುಚ್ಚಿಕೊಂಡು ಪೆಟ್ಟು ತಿಂದ ಬಾಲಕನ ಹಾಗೆ ಬಿಕ್ಕಿ ಬಿಕ್ಕಿ ಅಳಹತ್ತಿದನು. ತನ್ನ ಹಣೆಯ ಮೇಲೆ ಪಿಸ್ತೂಲನ್ನು ಹಾರಿಸಿಕೊಂಡು ಕೂಡಲೆ ಈ ಅಸಹ್ಯದುಃಖದಿಂದ ಮುಕ್ತನಾಗಬೇಕೆಂದು ಆತನೊಮ್ಮೆ ಯೋಚಿಸಿದನು; ಆದರೆ ಏನಾಯಿತೋ ತಿಳಿಯದು, ಅವನು ತನ್ನಾ ಇಚ್ಛೆಯನ್ನು ಕಾರ್ಯರೂಪದಲ್ಲಿ ತರಲಿಲ್ಲವೆಂಬದೊಂದು ವಿಹಿತವೇ ಆಯಿತು.

---

## ಇಲ್ಲದಿದ್ದರೆ ತುಹಾ ವಿಪತ್ತಿಗೀಡಾದೀ.

ಬ್ಲೇಕನ ವಿಶ್ವಾಸಿಕ ಅನುಕರನಾದ ಸ್ಮಿತ್ಥನೊಂದು ದಿನ ಬೆಳಗಿನಲ್ಲಿ ಪ್ರಾತರ್ಭೋಜನವನ್ನು ಮುಗಿಸಿಕೊಂಡು ಅಟ್ಟದಮೇಲಿನದೊಂದು ಕೋಣೆಯಲ್ಲಿ ಕಿಟಕಿಯ ಬಳಿಗೆ ಕುಳಿತಿದ್ದನು. ಸಮೀಪದಲ್ಲೇ ರಾಜಬೀದಿ. ಬ್ಲೇಕನ

ಮನೆಯ ಕಿಟಕಿಯೊಳಗಿಂದ ಆ ರಾಜಬೀದಿಯು ದೂರದ ವರೆಗೂ ಸ್ಪಷ್ಟವಾಗಿ ಕಾಣಿಸುತ್ತಿತ್ತು. ಸ್ಮಿತ್ಥನು ಬೀದಿಯ ಕಡೆಗೆ ನೋಡುತ್ತಿರುವಾಗ ಅಲ್ಲಿ ನಾನಾ ಬಗೆಯ ಯಾನ-ವಾಹನಗಳೂ ಮಾರ್ಗಸ್ತರ ಬರ-ಹೋಗುವಿಕೆಯೂ ಏಕೋ ಪ್ರಕಾರ ಸಾಗಿತ್ತು. ಆ ದಿನ ಬೆಳಿಗ್ಗೆ ಆತನಿಗೆ ಬೇರೆ ಯಾವ ಮಹತ್ವದ ಕೆಲಸ ವೂ ಇರಲಿಲ್ಲವಾದ್ದರಿಂದ ಅವನು ಹಾಗೆಯೇ ನೋಡುತ್ತ ಕುಳಿತು ಕಾಲ ಕಳ ಯುತ್ತಿದ್ದನು.

ಹಾಗೆ ನೋಡುತ್ತಿರುವಾಗ ಒಬ್ಬ ಫೇರಿವಾಲಾ=ಮನೆಮನೆಗೆ ಹೋಗಿ ವ್ಯಾಪಾರ ಮಾಡುವವನೊಬ್ಬನು ಕೈಯಲ್ಲಿಷ್ಟೋ ಬೂಟಿನ ಲೇಸಗಳನ್ನು ಹಿಡಿದುಕೊಂಡು ನಡೆದಿರುವುದು ಕಾಣಿಸಿತು. ಅವನ ಮೋರೆಯನ್ನು ಕಂಡು ಸ್ಮಿತ್ಥನು ತನ್ನ ಮನದಲ್ಲೇ "ಈ ಮನುಷ್ಯನ ಮುಖವು ಬಹುಮಟ್ಟಿಗೆ ಲೆಫ್ಟ ನೆಂಟ ಕಿಲ್ಡೇಯಾರನಂತಿದೆ; ಆದರೆ ಈ ಯುವಕನು ಖಂಡಿತವಾಗಿಯೂ ಕಿಲ್ಡೇಯಾರನಲ್ಲ. ಆತನು ಈ ಪರಿ ದುರ್ಗತಿಗೀಡಾಗಿರುವನೆಂಬೆನ್ನುವುದು ನಂಬತಕ್ಕ ಮಾತಲ್ಲ."

ಈ ಘಟನೆಗೆ ಒಂದು ತಿಂಗಳ ಮುಂಚೆಯೇ ಕಿಲ್ಡೇಯಾರನು ಸ್ವಯಮ ಪರಾಧದ ಮೂಲಕವೊ ವಿಧಾತನ ಕಠೋರ ವಿಧಾನದಿಂದಲೊ ಜೀವನದ ಎಲ್ಲ ಆಶೆಗಳಿಗೂ ವಂಚಿತನಾಗಿ ದುಃಖ-ದುರ್ದೆಶೆಗಳ ಕೊನೆಯ ಮೆಟ್ಟಲಿಗೆ ಹೋಗಿ ತಲುಪಿದ್ದನು. ಡಿಸ್‌ಮಿಸ್ ಮಾಡಿಸಿಕೊಳ್ಳುವದಕ್ಕಿಂತ ನೌಕರಿಗೆ ರಾಜಿನಾಮೆ ಕೊಡುವುದೇ ಯೋಗ್ಯವೆಂದು ತಿಳಿದು, ಅವನು ನೌಕರಿಯನ್ನು ಬಿಟ್ಟುಕೊಟ್ಟಿ ದ್ದನು. ತದನಂತರ ಲಂಡನ್ನಿನ ಮಾನ್ಯವಂತರ ವಸತಿಯಲ್ಲಿ ಆತನನ್ನಾರೂ ಕಾಣಲಿಲ್ಲ. ಎಷ್ಟೋ ದಿನಗಳ ತರುವಾಯ ಅವನು ಡಾಫನಿ ಭಾರನನ್ನಳಿ ಗೊಂದು ಕಾಗದ ಬರೆದಿದ್ದನು. ಆ ಕಾಗದದ ಮೇಲೆ ಲಂಡನ್ನಿನ ಪೂರ್ವದಂಡೆ ಯಲ್ಲಿ ದೀನರು, ದುಃಖಿಗಳು, ಕಳ್ಳರು, ಕಾಕರು, ಸಮಾಜೇತರರು ಮುಂತಾ ದವರು ವಾಸಿಸುವ ಸ್ಥಳದ 'ಈಸ್ಟಎಂಡ'ದೊಳಗಿನ ಯಾವುದೊಂದು ಪೋಸ್ಟ ಆಫೀಸಿನ ಮುದ್ರೆಯಿದ್ದಿತು. ತನ್ನ ಹೃದಯದ ರಕ್ತದಿಂದಲೇ ಆತನು ಡಾಫ ನಿಗೆ ಆ ಕಾಗದವನ್ನು ಬರೆದಂತಾಗಿತ್ತು. ಅದರಲ್ಲಿ ಅವನು ತನ್ನ ಕಳವಿನ ಸಂ ಗತಿಯನ್ನು ಒಪ್ಪಿಕೊಂಡಿದ್ದನು. ತನ್ನ ಪಾಪಕ್ಕೆ ಯಾವ ಕಠಿಣ ಪ್ರಾಯಶ್ಚಿತ್ತ ಘಟಿಸಿರುವದೆಂಬದನ್ನೂ ಅವನು ಅವಳಿಗೆ ಬರೆದು ತಿಳಿಸಿದ್ದನು; ಅಲ್ಲದೆ ಉಪ ಸಂಹಾರರೂಪವಾಗಿ ಅವಳ ಕರುಣೆ ಮತ್ತು ಕ್ಷಮೆಗಳನ್ನು ಯಾಚಿಸಿ, ಅವಳಿಗೆ ಚಿರಜೀವನವನ್ನು ಕುರಿತು ಹರಸಿ, ಇನ್ನೆಂದೂ ತನ್ನ ಭೇಟಿಯಾಗದೆಂದು ಆರು ಹಿದ್ದನು. ಆ ಕಾಗದದ ಪ್ರತಿಯೊಂದು ವಾಕ್ಯ, ಪ್ರತಿಯೊಂದು ಶಬ್ದದಲ್ಲೂ

ಆತನ ಭಗ್ನ ಹೃದಯದ ವೇದನೆ-ಅನುತಾಪಗಳು ಮೂರ್ತಿವಂತಾಗಿ ಕಾಣು ತ್ತಿದ್ದವು.

ಆ ಬಳಿಕ ಇಂದಿನವರೆಗೆ ಕಿಲ್ಡೇಯಾರನ ಸಂಬಂಧದ ಯಾವ ಸಂಗತಿ ಯನ್ನೂ ಯಾರೂ ಕೇಳಿರಲಿಲ್ಲ. ಆತನು ಆಗ ತೀರ ಹೇಯನೂ, ಅಧಃಪತಿತ ನೂ, ಸಂಪೂರ್ಣ ಬೇಕಾರನೂ ಆಗಿದ್ದರೂ ಆತನ ಪಿತ್ರಾರ್ಜಿತ ಸಂಪತ್ತಿಯ ವೃತ್ತಿಯಿಂದ ಅವನಿಗೆ ವಾರಕ್ಕೆರಡು ಪೌಂಡು ಪ್ರಾಪ್ತಿಯಿದ್ದಿತು. ಅವನಿಗೆ ಊಟ-ಪಾಟ-ವಾಸಸ್ಥಳಗಳ ಬಗ್ಗೆ ಯಾವ ಆಧಾರವೂ ಇರದಿದ್ದರೆ ಬ್ಲೇಕನು ಅವನನ್ನು ಶೋಧಿಸಿ ಆತನು ಉಪವಾಸದಿಂದ ಸಾಯದರೀತಿ ಏನಾದರೂ ವ್ಯವ ಸ್ಥೆ ಮಾಡುತ್ತಿದ್ದನು. ತನ್ನ ಪ್ರಿಯಕರನು ಭೀಷಣ ಸಂಕಟಕ್ಕೆ ಸಿಲುಕಿದ್ದರಿಂದ ಬೇರೆ ಉಪಾಯಗಾಣದೆ ತನ್ನ ಅಲಂಕಾರಗಳನ್ನಪಹರಿಸಲಿಕ್ಕೆ ಪ್ರವೃತ್ತನಾಗ ಬೇಕಾಯಿತೆಂಬದು ಡಾಫನಿಗೆ ಯಾವಾಗ ತಿಳಿಯಿತೋ, ಆಗ ಅವಳಲ್ಲಿ ಅವನ ವಿಷಯಕ್ಕುಂಟಾಗಿದ್ದ ತಿರಸ್ಕಾರ-ಅವಹೇಲನೆಗಳು ಮಾಯವಾಗಿ, ಆ ಸ್ಥಳದಲ್ಲಿ ಕರುಣೆ ಮತ್ತು ಸಮವೇದನೆಗಳುದಯಿಸಿ ಅವುಗಳಿಂದ ಅವಳ ಕೋಮಲ ಹೃದಯವು ಕಮರಿಹತ್ತಿತು. ಅವಳು ಕಿಲ್ಡೇಯಾರನನ್ನು ಅಂತಃಕರಣ ಪೂರ್ವಕವಾಗಿ ಕ್ಷಮಿಸಿದಳು; ಆದರೆ ಲಾರ್ಡ ಮೆಸಿಂಡೇಲನು ಇನ್ನು ಮೇಲೆ ಎಂದೂ ಆ ಕಫಲ್ಲಕ ಕಳ್ಳನ ಹೆಸರು ಕೂಡ ಎತ್ತಲಾರೆನೆಂದು ಪ್ರತಿಜ್ಞೆಗೈದಿದ್ದ ನಲ್ಲದೆ, ಡಾಫನಿಯಾದರೂ ಅವನ ಸಂಬಂಧವಾಗಿ ಯಾವ ಮಾತೂ ಎತ್ತ ಕೂಡದೆಂದು ಕಟ್ಟಪ್ಪಣೆ ಮಾಡಿದ್ದನು. ಅದರಿಂದ ಡಾಫನಿಯು ಬೇರೆ ಉಪಾಯಗಾಣದೆ ತಂದೆಯ ಆದೇಶವನ್ನು ಶಿರಸಾಮಾನ್ಯವೆಂದು ತಿಳಿಯ ಬೇಕಾಗಿತ್ತು.

ಕಿಲ್ಡೇಯಾರನ ವಿಪತ್ತಿನಿಂದ ಬ್ಲೇಕನಿಗೆ ಅಂತರಂಗದಲ್ಲಿ ಹೆಚ್ಚಾಗಿ ದುಃಖವಾಗಿತ್ತು; ಆದರೆ ಆ ಎಲ್ಲ ಅನಿಷ್ಟಗಳ ಮೂಲ ಕಾರಣವನ್ನು ಹೊರ ಗೆಡಹುವದರ ಸಲುವಾಗಿಯೇ ಆತನು ಹೆಚ್ಚಾಗಿ ಪ್ರಯತ್ನಿಸುತ್ತಿದ್ದನು. ಯಾವ ಬಗೆಯಿಂದ ತನ್ನೀ ಸಂಕಲ್ಪವು ಬೇಗನೆ ಸಿದ್ಧಿಸುವದೆಂಬ ಬಗ್ಗೆಯೇ ಆತನು ಯೋಚಿಸತೊಡಗಿದ್ದನು. ನೇಭಿಲ ಹರಕೋರ್ಟನು ಕಳ್ಳರ ಮುಖಂಡನು; ಹಾಗು ಅಪಹೃತ ಧನ-ಸಂಪತ್ತಿಗಳ ಖಜಾಂಜಿಯು ಎಂಬದು ಬ್ಲೇಕನ ಅನು ಮಾನ ಮಾತ್ರ. ತನ್ನೀ ಅನುಮಾನಿತ ಸಿದ್ಧಾಂತವನ್ನು ಯಾವ ಬಗೆಯಿಂದ ಸತ್ಯವೆಂದು ಸಿದ್ಧಪಡಿಸಬೇಕೆಂದೇ ಆತನು ಯೋಚಿಸತೊಡಗಿದ್ದನು. ಆ ವಿಷಯ ದಲ್ಲಿ ಅವನು ಪ್ರಯತ್ನಗಳನ್ನೇನೂ ಕಡಿಮೆ ಮಾಡಿರಲಿಲ್ಲ. ಕೆಲ ತಿಂಗಳು ಗಳಿಂದ ಸ್ಮಿತ್ಥನು ಪ್ರತಿ ರಾತ್ರಿಯಲ್ಲಿ ಇಷ್ಟೇ ಅಲ್ಲ, ದಿನದ ಕೆಲ ಭಾಗದಲ್ಲಿ ಕೂಡ

ಬ್ಲೇಕನ ಅಪ್ಪಣೆಯ ಮೇರೆಗೆ ಹರಕೋರ್ಟನನ್ನು ಕೇವಲ ನೆಳಲಿನಂತೆ ಅನು ಸರಿಸುತ್ತಿದ್ದನು; ಆದರೆ ಇದುವರೆಗಿನ ಆತನ ಪರಿಶ್ರಮವೆಲ್ಲ ನಿಷ್ಫಲವಾಗಿ ದ್ದಿತು. ನೇಭಿಲ ಹರಕೋರ್ಟನು ಪ್ರಥಮ ತರಗತಿಯ ಹೋಟಲ್ಲುಗಳಲ್ಲಿ ಊಟ-ಉಪಾಹಾರಗಳನ್ನು ಮಾಡುತ್ತಿದ್ದನು. ಲಂಡನ್ನಿನೊಳಗಿನ ಸರ್ವ ಶ್ರೇಷ್ಠಗಳಾದ ಕ್ಲಬ್ಬುಗಳಲ್ಲೇ, ಮಾನ್ಯವಂತ ವ್ಯಕ್ತಿಗಳ ಸಮೂಹದಲ್ಲೇ ವಾಸಿ ಸುತ್ತಿದ್ದನು. ಅವರ ಜೊತೆಯಲ್ಲೇ ಆಮೋದ-ಪ್ರಮೋದಗಳನ್ನು ನಡೆಸು ತ್ತಿದ್ದನು. ಜೂಜಿನ ಅಡ್ಡೆಗೆ ಹೋಗಿ ಜೂಜಾಡುತ್ತಿದ್ದನು. ಜೂಜಿನಲ್ಲಿ ಹಲವು ಹಣ ಸೋಲುತ್ತಿದ್ದನು. ದೊಡ್ಡ ಜನರೊಡನೆ ಬೆರೆತು ವ್ಯಯಸಾಧ್ಯ ವಾದ ಭಾರೀ ಭಾರೀ ನಾಟಕಗಳನ್ನು ನೋಡುತ್ತಿದ್ದನು; ಆದರೆ ಇಷ್ಟೆಲ್ಲ ನೀರಿ ನಂತೆ ಖರ್ಚು ಮಾಡುವ ಹಣವನ್ನು ಆತನು ಎಲ್ಲಿಂದ ದೊರೆಕಿಸುತ್ತಿದ್ದಾ ನೆಂಬದು ಮಾತ್ರಎಷ್ಟು ಪ್ರಯತ್ನಿಸಿದರೂ ಬ್ಲೇಕನಿಗೆ ವಿದಿತವಾಗಲೇ ಇಲ್ಲ. ಸ್ಮಿತ್ಥನು ಹಗಲೂ ಇರುಳೂ ಅವನ ಮೇಲೆ ದೃಷ್ಟಿಯಿರಿಸಿದ್ದರೂ ಒಂದು ದಿನ ವಾದರೂ ಅವನು ಲಂಡನ್ನಿನ ಪೂರ್ವ ಭಾಗಕ್ಕೆ ಹೋದದ್ದನ್ನು ಕಂಡಿರಲಿಲ್ಲ. ಇಷ್ಟೆಲ್ಲ ಘಟಿಸಿದ್ದರೂ ಬ್ಲೇಕನು ಮಾತ್ರ ಹತಾಶನಾಗಲಿಲ್ಲ; ತನ್ನ ಅನುಮಾ ನದ ಬಗ್ಗೆ ಅವನಿಗೆ ಅವಿಶ್ವಾಸವುಂಟಾಗಲಿಲ್ಲ. ಅವನು ಅತ್ಯಂತ ಧೈರ್ಯ ದಿಂದ ನಿರೀಕ್ಷಿಸತೊಡಗಿದನು; ಸ್ಮಿತ್ಥನೂ ನಿರುತ್ಸಾಹಿಯಾಗಲಿಲ್ಲ.

ಆಕ್ಟೋಬರ ತಿಂಗಳ ಕೊನೆಯವಾರದಲ್ಲೊಂದು ದಿನ ಬೆಳಿಗ್ಗೆ ಸ್ಮಿತ್ಥನು ಮೇಲೆ ವಿವರಿಸಿದಂತೆ ಬ್ಲೇಕನ ಮನೆಯ ಉಪ್ಪರಿಗೆಯ ಮೇಲೆ ಕುಳಿತು ಕಿಟಕಿ ಯೊಳಗಿಂದ ರಾಜಬೀದಿಯಲ್ಲಿ ಇಣುಕುತ್ತಿದ್ದನು. ಆ ಕಾಲಕ್ಕೆ ಬ್ಲೇಕನಾಡಿದ ಕೆಲ ವಿಸ್ಮಯಕಾರಕ ಅಸ್ಫುಟ ಶಬ್ದಗಳು ಕೇಳಿಸಲು ಅವನು ತಟ್ಟನೆ ಮೋರೆದಿ ರುವಿ:"ಒಡೆಯಾ, ಏನದು?" ಎಂದು ಕೇಳಿದನು.

ಬ್ಲೇಕನು ಸ್ಮಿತ್ಥನ ಹತ್ತಿರವೇ ಒಂದು ಕುರ್ಚಿಯಲ್ಲಿ ಕುಳಿತು ವೃತ್ತ ಪತ್ರವನ್ನೋದುತ್ತಿದ್ದನು. ಅವನು ಆ ಪತ್ರದ ಮೇಲಿನ ತನ್ನ ದೃಷ್ಟಿಯನ್ನು ಚಲಿಸದೆ ಸ್ಮಿತ್ಥನನ್ನುದ್ದೇಶಿಸಿ:—"ಲಂಡನ್ನಿನೊಳಗಿನ ಮಾನ್ಯವಂತರ ಓಣಿ ಯೊಳಗೊಂದು ಬಹು ದೊಡ್ಡ ಕಳವು."

ಸ್ಮಿತ್ಥನು ಬಲವಂತದಿಂದ ಕೇಳುತ್ತಾನೆ:—"ಒಡೆಯಾ, ಅದೆಲ್ಲಿ?"

ಬ್ಲೇಕ:—"ಹ್ಯಾರಿಂಗ್ಟನ್ ಸ್ಟ್ರೀಟಿನಲ್ಲಿ ಕಳ್ಳರು ಸರ ಚಾರ್ಲಸ್ ಹೆಜೆ ಲೌಡರ ಮನೆಯನ್ನು ಹೊಕ್ಕು ಲೇಡೀ ಹೆಜೆಲೌಡಳ ಬಹು ಮೂಲ್ಯವಾನ ಮುತ್ತಿನ ಸರ ಮತ್ತು ರುಬಿಯಿಂದ ನಿರ್ಮಿಸಿದ್ದ ಒಂದು ಕಂಠಾಭರಣ ಇವು ಗಳನ್ನು ಕದ್ದೊಯ್ದಿರುತ್ತಾರೆ. ಆ ಅಲಂಕಾರಗಳು ಸರ ಚಾರ್ಲಸ್ಸರ "ವಾಚ

ನಾಲಯದೊಳಗಿನ ಭದ್ರವಾದ ತಿಜೋರಿಯಲ್ಲಿದ್ದವು. ಕಳ್ಳರು ಆಕ್ಸಿ-ಹೈಡ್ರೋಜನವ (Oxyhydrogen gas) ಉಗೆಯಿಂದ ಆ ತಿಜೋರಿಯನ್ನು ಒಡೆದು ಆ ಕಳವನ್ನು ಮಾಡಿರುತ್ತಾರೆ! ಓಡಿ ಹೋಗುವಾಗ ಅವರು ತಮ್ಮ ಕೆಲವು ಅಸ್ತ್ರಗಳನ್ನು ಅಲ್ಲಿ ಚೆಲ್ಲಿ ಹೋಗಿರುತ್ತಾರೆ; ಆದುದರಿಂದ ತಿಳಿದು ಬರುವುದೇನಂದರೆ, ಈ ಕಳವು ಕಸಬುಗಾರ ಕಳ್ಳರು ಮಾಡಿದ ಕಳವೇ ಎಂದು."

ಸ್ಮಿತ್ಥನು ವ್ಯಗ್ರಭಾವದಿಂದ:—"ಕಳ್ಳರನ್ನು ಹಿಡಿಯುವ ಯಾವ ಸೂತ್ರವಾದರೂ ದೊರೆತಿರುವದೇ?"

ಬ್ಲೇಕ:—"ಇಲ್ಲ. ಯಾವ ಎಳೆಯೂ ಸಿಕ್ಕಿಲ್ಲ. ಎಲ್ಲಿಯೂ ಒಂದು ಬೊಟ್ಟಿನ ಗುರ್ತು ಕೂಡ ಕಂಡು ಬಂದಿಲ್ಲ."

ಸ್ಮಿತ್ಥ:—"ಕಳೆದ ಕೆಲವು ತಿಂಗಳುಗಳಲ್ಲಿ ಈ ಕಡೆಗೆ ಈ ಬಗೆಯ ಭಯಂಕರ ಕಳವು ಆಗಿರಲಿಲ್ಲ. ಈ ಬಗ್ಗೆ ತಾವೇನೆನ್ನುವಿರಿ?"

ಬ್ಲೇಕ:—"ಕೆಲವು ತಿಂಗಳುಗಳೇ ಏಕೆ, ಎಷ್ಟೋ ತಿಂಗಳಲ್ಲಿ ಈ ಬಗೆಯ ಕಳವಾಗಿರಲಿಲ್ಲವೆನ್ನು."

ಸ್ಮಿತ್ಥ:—"ಈ ಕಳವಿನ ಪ್ರಕರ್ಣದಲ್ಲಿ ಹರಕೋರ್ಟನ ಸಂಬಂಧವಿದೆಯೋ ಇಲ್ಲವೋ ಎಂಬ ಬಗ್ಗೆ ಅನುಮಾನಿಸುವವೇ ಕಠಿಣವು."

ಬ್ಲೇಕ:—"ಈ ಪ್ರಕರಣದಲ್ಲಿ ಆತನ ಅಂಗವಿದ್ದರೆ ನಾನು ವಿಸ್ಮಯ ಪಡುವದಿಲ್ಲ; ಅಲ್ಲವೆ ಎಲ್ಲ ಕಡೆಯಿಂದ ಯೋಚಿಸಿ ನೋಡಿದರೂ ಅದೇ ಸಂಭವವೆಂದು ಅನಿಸುತ್ತವೆ."

ಸ್ಮಿತ್ಥ:—"ತಮ್ಮ ಅನುಮಾನಕ್ಕೇನಾದರೂ ಕಾರಣವಿದ್ದರೆ ನಾನು ಅದರ ಸಂಧಾನ ಹಚ್ಚಲಿಕ್ಕೆ ಪ್ರಯತ್ನಿಸುವೆನು."

ಬ್ಲೇಕ:—"ಸ್ಮಿತ್ಥ, ನನ್ನ ಅನುಮಾನವು ಬುಡವಿಲ್ಲದಿಲ್ಲ. ಸಂದೇಹದ ಕಾರಣವು ಬಹು ಪ್ರಬಲವಾಗಿವೆ. ಈ ಘಟನಾಚಕ್ರದಿಂದಲೂ ನನ್ನ ಸಂದೇಹವು ದೃಢತರವಾಗಿದೆ."

ಬಳಿಕ ಬ್ಲೇಕನು ಆ ವೃತ್ತಪತ್ರವನ್ನು ಟೇಬಲ್ಲಿನ ಮೇಲಿರಿಸಿ, ತನ್ನ ಚಿರೂಟಿನ ಕೊಳವೆಯಲ್ಲಿ ತಂಬಾಕ ತುರುಕಿದನು; ಮತ್ತು ಎರಡು-ಮೂರು ನಿಮಿಷಗಳ ವರೆಗೆ ಮೌನದಿಂದ ತಂಬಾಕ ಸೇದಿದ ನಂತರ ಅವನು ಸ್ಮಿತ್ಥನನ್ನು ಕುರಿತು:—"ಕಳೆದ ವಾರದಲ್ಲಿ ಲೇಡೀ ಹೆಜೆಲಾಡಳ ಮನೆಯಲ್ಲೊಂದು ಅಭಾರದರ್ಶಕ ಪಾರ್ಟಿಯಾಗಿತ್ತು. ನೇಭಿಲ ಹರಕೋರ್ಟನು ಖಂಡಿತವಾಗಿಯೂ ಆ ಪಾರ್ಟಿಗೆ ಹೋಗಿರಬೇಕು. ಆತನು ಆ ದಿನ ಲೇಡೀ ಹೆಜೆಲಾಡಳ

ಕೊರಳಲ್ಲಿಯ ಆ ಅಪಹೃತ ಅಲಂಕಾರಗಳನ್ನು ನಿಜವಾಗಿಯೂ ಕಂಡಿರಬೇಕು: ಮತ್ತು ಅವುಗಳನ್ನೆಲ್ಲಿಡುವರೆಂಬದನ್ನೂ ಬಹುಮಟ್ಟಿಗೆ ಅರಿತುಕೊಂಡಿರಬೇಕು. ಆ ಮೇಲೆ ಆತನು ಕಳ್ಳರಿಗೆ ಅದನ್ನೆಲ್ಲ ತಿಳಿಸಿರಬೇಕು, ಹೀಗೆಯೇ ನನ್ನ ಅನುಮಾನವಿದೆ; ಆದರೆ ಇವೆಲ್ಲ ಕೆಲಸಗಳೂ ಅವನಿಗೆ ಅಸಾಧ್ಯವಲ್ಲವೆಂಬದನ್ನಂತೂ ಒಪ್ಪುವೆಯಾ? ಆತನು ಇನ್ನು ಕೆಲವು ದಿನಗಳಲ್ಲೇ ಆ ಕಳ್ಳರನ್ನು ಎಲ್ಲಿಯಾದರೂ ಕಾಣುವನೆಂದು ನನ್ನ ನಂಬಿಗೆಯಿದೆ. ನೀನು ತೀರ ಜಾಗ್ರತೆಯಿಂದ ಅವನ ಚಲನವಲನವನ್ನು ನಿರೀಕ್ಷಿಸುತ್ತಿರು. ಇಂದು ರಾತ್ರಿಯೇ ನೀನು ಹೊರಹೊರಡಬೇಕು. ಅವನು ಒಂದುವೇಳೆ ಲಂಡನ್ನಿನ ಪೂರ್ವಭಾಗಕ್ಕೇ ಹೊರಟಿದುದಾದರೆ ನೀನು ಮತ್ತಿಷ್ಟು ಜಾಗ್ರತೆಯಿಂದ ಅವನನ್ನನುಸರಿಸು. ತುಸ ಅಜಾಗರೂಕನಾದರೂ ನೀನು ಮಹಾವಿಪತ್ತಿಗೀಡಾಗಬೇಕಾಗುವದು."

ಬ್ಲೇಕನು ಆಗ ಮತ್ತಾವುದನ್ನೂ ಹೇಳದೆ, ತತ್‌ಕ್ಷಣವೇ ಹಲಕೆಲವು ಪತ್ರಗಳನ್ನು ಬರೆಯಲುಪಕ್ರಮಿಸಿದನು.

---

## ಅಂದಿನ ಆ ನೆಲಮನೆ ಗೊತ್ತಿದೆಯಷ್ಟೆ?

ಅಂದೇ ರಾತ್ರಿ ಎಂಟು ಗಂಟೆಗೆ ನೇಭಿಲ ಹರಕೋರ್ಟನು ಮಾಸಿದ ಕೋಟು ತೊಟ್ಟು ಮತ್ತು ದಾರಿಹೋಕರ ಬಗೆಯದೊಂದು ಟೊಪ್ಪಿಗೆಯನ್ನು ತಲೆಗೆ ಹಾಕಿಕೊಂಡು ಬಡ ಕೂಲಿಕಾರನ ವೇಷದಿಂದ ತನ್ನ ಆ ಭೇಯಾರ ಸ್ಟ್ರೀಟಿನೊಳಗಿನ ಮನೆಯಿಂದ ಯಾರಿಗೂ ತಿಳಿಯದಂತೆ ಹೊರಬಿದ್ದನು. ರಾಜಬೀದಿಗೆ ಬಂದ ಮೇಲೆ ಅವನು ಸೂಕ್ಷ್ಮ ನಜರಿನಿಂದ ಹಲವು ಸಾರೆ ಹಿಂದಕ್ಕೆ ಹೊರಳಿ ಹೊರಳಿ ನೋಡಿದನು; ಆದರೂ ಸ್ಮಿಥನು ಆತನ ದೃಷ್ಟಿಗೆ ಕಾಣಿಸಲಿಲ್ಲ. ಸ್ಮಿಥನು ದೂರದಲ್ಲೇ ಮರೆಯಲ್ಲಿ ಆಕ್ಸಫರ್ಡ ಸರ್ಕಲ್ಲಿನ ವರೆಗೆ ಅವನನ್ನನುಸರಿಸಿ ಬಂದನು. ಆ ಬಳಿಕ ನೇಭಿಲ ಹರಕೋರ್ಟನು ದಾರಿಯೊಳಗಿನದೊಂದು ಟ್ಯಾಕ್ಸಿಯಲ್ಲಿ ಕುಳಿತನೆಂಬದು ಅವನಿಗೆ ಗೊತ್ತಾಯಿತು. ಸಮೀಪದಲ್ಲೇ ಮತ್ತೆ ಹಲವು ಟ್ಯಾಕ್ಸಿಗಳಿದ್ದವು. ಕೂಡಲೆ ಸ್ಮಿಥನೂ ಮತ್ತೊಂದು ಟ್ಯಾಕ್ಸಿಯನ್ನಾರೋಹಿಸಿ ಶೋಫರನಿಗೆ ತಾನು ಹೋಗಬೇಕಾದ ಸ್ಥಳದ ಬಗ್ಗೆ ಚೆನ್ನಾಗಿ ತಿಳಿಹೇಳಿದನು. ಟ್ಯಾಕ್ಸಿಯಲ್ಲಿ ಕುಳಿತ ಬಳಿಕ ಸ್ಮಿಥನು ತನ್ನ ಮನದಲ್ಲೇ "ಇಷ್ಟು ದಿನಗಳ ನಂತರ ಇಂದು ನನ್ನ ಶ್ರಮಸಾಫಲ್ಯವಾಗುವ ಆಶೆ ತೋರಹತ್ತಿದೆ. ಇಂದು ನಮ್ಮ ಕೆಲಸದ ಬಗ್ಗೆ ಏನಾದರೂ ಸೂತ್ರ ದೊರೆಯಬಹುದಾಗಿದೆ."

ಅವೆರಡೂ ಟ್ಯಾಕ್ಸಿಗಳು ದೂರದ ಅಂತರದಲ್ಲೇ ಪೂರ್ವಾಭಿಮುಖವಾಗಿ ಓಡತೊಡಗಿದವು. ನೇಭಿಲ ಹರಕೋರ್ಟನ ಟ್ಯಾಕ್ಸಿಯು ಕ್ರಮವಾಗಿ ಯಾ

ವಾಗ ಹೊರಾಯಿಟ ಚ್ಯಾಂಪೇಲ ರೋಡನ್ನು ದಾಟಿತೋ ಆಗ ಸ್ಮಿತ್ಥನು ಸ್ಪಷ್ಟ ವಾಗಿ ತಿಳಿದನೇನಂದರೆ, ಹರಕೋರ್ಟನು "ಈಸ್ಟಎಂಡಿ"ಗೇ ತನ್ನ ಬಂದುಗಳ ದರ್ಶನಕ್ಕೆ ನಡೆದನೆಂದು. ಮುಂದೆ ಆರೋಪಿಗಳ ಹಳ್ಳಿಯು ಹತ್ತಲು ನೇಭಿ ಲನ ಟ್ಯಾಕ್ಸಿಯು ಒಮ್ಮೆಲೆ ನಿಂತಿತು. ಕೂಡಲೆ ಅವನು ಗಾಡಿಯಿಂದ ಕೆಳ ಗಿಳಿದನು. ಸ್ಮಿತ್ಥನಾದರೂ ಅಲ್ಲಿಂದ ನಾಲ್ವತ್ತು-ಐವತ್ತು ಯಾರ್ಡುಗಳ ಹಿಂ ದೆಯೇ ತನ್ನ ಗಾಡಿಯನ್ನು ನಿಲ್ಲಿಸಬೇಕಾಯಿತು; ಹಾಗು ತಾನೂ ಗಾಡಿಯಿಂ ದಿಳಿಯಬೇಕಾಯಿತು.

ಆಗ ರಾತ್ರಿಯು ಹೆಚ್ಚಾಗಿರಲಿಲ್ಲ. ಮಾರ್ಗದಲ್ಲಿ ಬಹು ಜನರ ರಹದಾರಿ ಯಿತ್ತು. ಆದ್ದರಿಂದ ಹರಕೋರ್ಟನಿಗೆ ಅನುಮಾನವುಂಟಾಗದಹಾಗೆ ಅವನ ನ್ನನುಸರಿಸಿ ಹೋಗುವದು ಸ್ಮಿತ್ಥನಿಗೆ ಕಠಿಣವಾಗಲಿಲ್ಲ. ಹರಕೋರ್ಟನ ಮನ ಸ್ಸಿನಲ್ಲೂ ಆಗ ಸಂದೇಹವುಂಟಾಗಲಿಲ್ಲ. ಅದರಿಂದಅವನು ಹೋಗುವಾಗ ಒಮ್ಮೆ ಕೂಡ ಹೊರಳಿ ನೋಡಲಿಲ್ಲ. ಆತನು ಸಾಮಾನ್ಯವಾಗಿ ಕಾಲು ಫರ್ಲಾಂಗ ದಾರಿ ನಡೆದು ಹೋದ ಬಳಿಕ ಕೊನೆಗೊಂದು ಜನರ ಸುಳಿದಾಟವಿಲ್ಲದ ಚಿಕ್ಕ ಓಣಿ ಯಲ್ಲಿ ಹೊಕ್ಕನು. ಆ ಓಣಿಗೆ "ಗರಮ್ಲೋಸ್ಟ್ರೀಟ" ಎಂದೆನ್ನುವರು. ಆ ಓಣಿಯ ತುದಿಗೊಂದು ಚಿಕ್ಕ ಮೇಲುಪ್ಪರಿಗೆಯ ಮನೆಯಿತ್ತು. ನೇಭಿಲ ಹರಕೋ ರ್ಟನು ಆ ಮನೆಯನ್ನು ಹೊಕ್ಕನು. ಆ ಮನೆಗೆ ಹೊಂದಿದ್ದ ಮಾನೆಯೊಂದನ್ನು ದಾಟಿದರೆ ಅಲ್ಲೊಂದು ಬೀದಿಯ ಕೂಟಿದ್ದಿತು. ನೇಭಿಲ ಹರಕೋರ್ಟನು ಯಾವ ಮನೆಯನ್ನು ಪ್ರವೇಶಿಸಿದ್ದನೋ ಅದರ ಎದುರಿಗಿನ ಬೀದಿಯಲ್ಲಿ ದೀಪದ ಸ್ತಂಭವಿರಲಿಲ್ಲ. ಆ ಮನೆಯ ಬಾಗಿಲು ಕಿಟಕಿಗಳು ಮುಚ್ಚಿದ್ದ ವಾದ್ದರಿಂದ ಆ ದಾರಿಯೊಳಗಿಂದ ಮನೆಯ ಯಾವ ಭಾಗದಲ್ಲೂ ದೀಪವಿದ್ದಂತೆ ಸ್ಮಿತ್ಥನಿಗೆ ಕಾಣಿಸಲಿಲ್ಲ. ಆತನು ಆ ಮನೆಯ ಎದುರಗಡೆಗೆ ಬಂದು ಕೆಲ ಕ್ಷಣ ಗಳ ವರೆಗೆ ಅತ್ತಿತ್ತ ಇಣುಕಿಣುಕಿ ನೋಡಿದನು. ಆಗ ಆತನ ಮನಸ್ಸು ಉತ್ಸಾಹ ಪೂರ್ಣವಾಗಿತ್ತು; ಆದರೆ ಕಾರ್ಯಸಿದ್ಧಿಯಾಗುವವರೆಗೂ ಅವನ ಮನಸ್ಸಿನ ಚಾಂಚಲ್ಯವು ದೂರವಾಗುವಂತಿರಲಿಲ್ಲ.

ಆಗ ಸ್ಮಿತ್ಥನು ತನ್ನ ಮನಸ್ಸಿನಲ್ಲೇ ಆಲೋಚಿಸಹತ್ತಿದನು:—"ಈ ಹರ ಕೋರ್ಟನು ಕಳ್ಳರ ಮುಖಂಡನೆಂದು ಬ್ಲೇಕರನ್ನುತ್ತಿರುವದೇನೂ ಸುಳ್ಳಲ್ಲ. ತನ್ನ ಪಂಗಡದ ಕಳ್ಳರನ್ನು ಕಾಣಲಿಕ್ಕೆಂದು ಈತ ಇಲ್ಲಿಗೆ ಬಂದಿರುತ್ತಾನೆ. ಇವರು ಗಳಲ್ಲಿ ಏನೇನು ಸಂಭಾಷಣವಾಗುವದೋ ಅದನ್ನು ಕೇಳಿಕೊಳ್ಳದೆ ನಾನು ಮನೆಗೆ ಹಿಂದಿರುಗುವವನಲ್ಲ. ಇವರ ಸಂಭಾಷಣವನ್ನು ನಾನು ನಮ್ಮ ಒಡೆ ಯನಿಗೆ ತಿಳಿಸಿದರೆ, ನನ್ನ ಇಂದಿನ ವರೆಗಿನ ಶ್ರಮಸಾಫಲ್ಯವಾದಂತಾದೀತು;

ಆದರೆ ಯಾವ ಕೌಶಲ್ಯದಿಂದ ಈಗ ನಾನಿವರ ಸಂಭಾಷಣ ಕೇಳಿಕೊಳ್ಳಲಿ?"

ಕೂಡಲೆ ಅವನ ತಲೆಯಲ್ಲೊಂದು ಯುಕ್ತಿ ಹೊಳೆಯಿತು. ಆ ಮನೆಗೆ ಹೊಂದಿಪ್ಪ ಮನೆಯಾಚೆಗೆ ಯಾವ ದಾರಿಯಿದ್ದಿತೋ, ಅವನು ಆ ದಾರಿ ಹಿಡಿದು ಕೆಲ ಗಜ ಮುಂದೆ ಹೋಗಿ ನೋಡುತ್ತಾನೆ, ಆ ದಾರಿಯಿಂದ ಒಂದು ಚಿಕ್ಕ ಓಣಿಯು ಹೊರಟು ಅದು ಆ ಮನೆಗಳ ಹಿಂಬದಿಯಲ್ಲೇ ಸಾಗಿತ್ತು. ಆ ಓಣಿ ಯೊಳಗಿಂದ ಹಾಯ್ದು ಈ ಮೊದಲು ಗರವ್ಹಿಸ್ಟ್ರೀಟಿನ ಹಲವು ಮನೆಗಳನ್ನು ದಾಟಿ ಒಂದು ಗೇಟಿನ ಹತ್ತರ ತಲುಪಿದನು. ಆ ಗೇಟಿನ ಬಾಗಿಲಿಗೆ ಚಿಲಕ-ಕೀಲಿಗಳು ಹಾಕಲ್ಪಟ್ಟಿದ್ದವು. ಆ ಗೇಟಿನ ಒಳಗೆ ತಕ್ಕಮಟ್ಟಿಗೆ ವಿಶಾಲ ವಾದ ಅಂಗಳವಿದ್ದಿತು; ಆದರೆ ಆ ಇಡಿ ಒಳಂಗಳದ ಸುತ್ತಲೂ ಬಹು ಎತ್ತರದ ಇಟ್ಟಂಗಿಯ ಗೋಡೆಗಳಿದ್ದವು. ಸ್ಮಿತ್ಥನು ತನ್ನಲ್ಲಿಯ ಸಾಧನಗಳಿಂದ ಗೇಟಿನ ಕೀಲಿಯನ್ನು ಸುಲಭವಾಗಿ ತೆಗೆದೊಗೆದನು. ಆ ಮೇಲೆ ಆ ಒಳಂಗಳವನ್ನು ಹೊಕ್ಕು ನೇಭಿಲ ಹರಕೋರ್ಟನು ಗರವ್ಹಿಸ್ಟ್ರೀಟಿನೊಳಗಿಂದ ಯಾವ ಮನೆ ಯನ್ನು ಹೊಕ್ಕಿದ್ದನೋ ಅದೇ ಮನೆಯ ಹಿಮ್ಮಗ್ಗಲಿಗೆ ನೆಟ್ಟಗೆ ಹೋಗಿ ತಲು ಪಿದನು. ಅದೇ ಮನೆಯ ಕೆಳಭಾಗದ ಒಂದು ಕೋಣೆಯಲ್ಲಿ ದೀಪ ಉರಿಯು ತ್ತಿರುವಂತೆ ಸ್ಮಿತ್ಥನಿಗೆ ಕಾಣಿಸಿತು. ಎತ್ತರದಲ್ಲಿಯ 'ಕಿಟಕಿಯ ಸಂದಿನೊಳ ಗಿಂದ ಆ ದೀಪದ ಜ್ಯೋತಿಯು ಕಾಣಿಸುತ್ತಿತ್ತು. ಆತನು ಅತಿ ಜಾಗ್ರತೆಯಿಂದ ಆ ಕಿಟಕಿಯ ಹತ್ತರ ಹೋಗಿ ನಿಂತುಕೊಂಡನು. ಆ ಕೋಣೆಯಲ್ಲಿ ಅದಾರೋ ಮೆಲ್ಲಮೆಲ್ಲನೆ ಏನೇನೋ ಸಂಭಾಷಿಸುತ್ತಿದ್ದರು. ಸ್ಮಿತ್ಥನು ಕಿಟಕಿಯ ಕಡೆಗೆ ಕಿವಿ ಗೊಟ್ಟು ಕೇಳಹತ್ತಿದನು.

ಆ ಕೋಣೆಯಲ್ಲಿ ಕುಳಿತಿದ್ದ ಮೂರು ಜನರು ಮೆಲ್ಲನೆಮೆಲ್ಲನೆ ಮಾತನಾಡು ತ್ತಿದ್ದರು; ಆದರೆ ಸ್ಮಿತ್ಥನಿಗೆ ಅವರ ಎಲ್ಲ ಸಂಭಾಷಣವೂ ಬಹುಮಟ್ಟಿಗೆ ಸ್ಪಷ್ಟ ವಾಗಿಯೇ ಕೇಳಿಸಿತು. ನೇಭಿಲ ಹರಕೋರ್ಟನು ಆ ಮೂವರೊಳಗಿನವನೊಬ್ಬ. ಅವರ ಮಾತು-ಕತೆಗಳ ಮೇಲಿಂದ ಸ್ಮಿತ್ಥನು ತಿಳಿದುಕೊಂಡನೇನಂದರೆ, ಉಳಿ ದಿಬ್ಬರ ಹೆಸರುಗಳು ವಾರ್ಣಿ ಮತ್ತು ಜೋಸನ್. ಆ ಇಬ್ಬರು ಕಳ್ಳರೇ ಲೇಡೀ ಹೆಜೆಲೌಡಳ ಅಲಂಕಾರಗಳನ್ನು ಕದ್ದವರು. ನೇಭಿಲ ಹರಕೋರ್ಟನು ಅವರ ಬಳಿಯಿಂದ ಆ ಅಪಹೃತ ಅಲಂಕಾರಗಳನ್ನು ಇಸಕೊಂಡೊಯ್ಯಲಿಕ್ಕೆ ಬಂದಿ ದ್ದನು. ಅವನು ಅವುಗಳನ್ನು ಇಸಕೊಂಡು ಹೋಗಿ ಮಾರುವದಕ್ಕೆಂದು ದೇಶಾಂತರಕ್ಕೆ ಕಳಿಸುವವನು. ಅವುಗಳ ಬೆಲೆ ಬಂದ ಬಳಿಕ ಆ ಇಬ್ಬರು ಕಳ್ಳರಿಗೆ ಅವರ ಪರಿಶ್ರಮದ ಪಾಲು ದೊರೆಯತಕ್ಕದ್ದು. ಇವೇ ಅಂದಿನ ಅವರ ಸಂಭಾಷಣದ ಮರ್ಮವಾಗಿತ್ತು.

ಬಂದ ಕೆಲಸದ ಮಾತುಕಥೆಗಳು ಮುಗಿದವು. ಹರಕೋರ್ಟನು ಆ ಕಳ್ಳರಿಗೆ: "ನಾನಿನ್ನು ಹೋಗುವೆನು. ಇವುಗಳ ಹಣವು ಬಂದ ಕೂಡಲೆ ನಿಮಗೆ ನಿಮ್ಮ ಪಾಲು ದೊರೆಯುವದು. ಮತ್ತೆ ಕೆಲವು ಕಡೆಗೆ ದರೋಡೆ ಹಾಕಬೇಕಾಗಿದೆ. ಆ ವಿಷಯವನ್ನು ನಿಮಗೆ ಹಿಂದಿನಿಂದ ತಿಳಿಸುತ್ತೇನೆ; ಆ ಬಗ್ಗೆ ನೀವು ಹೆಚ್ಚು ದಿನ ನಿರೀಕ್ಷಿಸಬೇಕಾಗಿಲ್ಲ. ಬಹುಶಃ ಮುಂದಿನ ವಾರದಲ್ಲೇ ಯಾವದೊಂದು ದಿವಸ ನಾನೇ ಸ್ವಂತ ಇಲ್ಲಿಗೆ ಬಂದು ಅದನ್ನೆಲ್ಲ ನಿಮಗೆ ವಿಶದವಾಗಿ ತಿಳಿಸುತ್ತೇನೆ. ಇಷ್ಟರಲ್ಲಿ...." ನೇಛಿಲ ಹರಕೋರ್ಟನು ಮುಂದಿನ ಸಂಗತಿಯನ್ನು ತೀರ ಮೆಲ್ಲಗೆ ಹೇಳಿದ್ದರಿಂದ ಹೊರಗೆ ಇದ್ದ ಸ್ಮಿತ್ಥನಿಗೆ ಕೇಳಿಸಲಿಲ್ಲ. ಆ ಮೇಲೆ ಹೊರ ಬಾಗಿಲು ತೆರೆದ ಸಪ್ಪಳ ಕೇಳಿಸಲು, ಹರಕೋರ್ಟನು ಆ ಕಳ್ಳರ ಮನೆಯಿಂದ ಹೊರಬಿದ್ದು ತನ್ನ ಮನೆಗೆ ಸಾಗಿದನೆಂದು ಸ್ಮಿತ್ಥನು ತರ್ಕಿಸಿದನು; ಆದರೆ ಆ ಕಳ್ಳರಿಬ್ಬರೂ ಆ ಕೋಣೆಯಿಂದ ಹೊರಹೊರಡವೆ ಅಲ್ಲಿಯೇ ಕುಳಿತು ಮತ್ತೆ ಮಾತನಾಡತೊಡಗಿದರು. ಇನ್ನು ಮೇಲೆ ಹರಕೋರ್ಟನನ್ನನುಸರಿಸಿದರೆ ಪ್ರಯೋಜನವೇನೂ ಇಲ್ಲೆಂದು ಅರಿತ ಸ್ಮಿತ್ಥನು ಆ ಕಳ್ಳರ ಭಾಷಣವನ್ನು ಕೇಳಲಿಕ್ಕೆಂದು ಅಲ್ಲಿಯೇ ನಿಂತುಕೊಂಡನು. ಅವರುಗಳ ಸಂಭಾಷಣದಿಂದ ಸ್ಮಿತ್ಥನು ತಿಳಿದನೇನಂದರೆ, ಲಂಡನ್ನಿನೊಳಗಿನ ಇನ್ನೊಬ್ಬ ಸನ್ಮಾನ್ಯನ ಮನೆಯಲ್ಲಿ ಅವರು ಶೀವ್ರವೇ ಕನ್ನ ಹಾಕತಕ್ಕವರು. ಆ ಕಳ್ಳರ ಸಂಭಾಷಣ ಪೂರೈಸಲು ಸ್ಮಿತ್ಥನು ಆ ಸ್ಥಳದಿಂದ ಹಿಂದಕ್ಕೆ ಸರಿದು ಬರುವಷ್ಟರಲ್ಲಿ ಅಲ್ಲಿಯೇ ನೆಲದ ಮೇಲೆ ಬಿದ್ದಿದ್ದ ಒಂದು ಟಿನ್ನಿನ ಡಬ್ಬಿಗೆ ಅವನ ಕಾಲು ತಾಕಲು, ಅದು ಢಬ್ಬ ಎಂದು ಶಬ್ದಗೆಯ್ದಿತು.

ಆ ಒಳಂಗಳದ ಒಂದು ಮೂಲೆಯಲ್ಲಿ ಒಂದು ನಾಯಿಯು ಕಟ್ಟಲ್ಪಟ್ಟಿತ್ತು. ಅದು ಭೀಕರವಾದ ಚಳಿಯನ್ನು ಸಹಿಸಲಾರದೆ ಚಾಟಿಗೆ ಬಿದ್ದುಕೊಂಡಿತ್ತು. ಆ ಟಿನ್ನಿನ ಶಬ್ದವಾಗುತ್ತಲೆ ಆ ನಾಯಿಯು ಬಿದ್ದುಕೊಂಡಲ್ಲಿಂದ ಎದ್ದು ಶಬ್ದವಾದ ಕಡೆಗೆ ಮೋರೆ ತಿರುವಿ ಗಟ್ಟಿ-ಗಟ್ಟಿಯಾಗಿ ಬೊಗಳಹತ್ತಿತು; ಹಾಗು ತನ್ನ ಕೊರಳ ಪಟ್ಟಿಯನ್ನು ಕಿತ್ತುಕೊಂಡು ಅತ್ತ ಹೋಗಲಿಕ್ಕೆಂದು ಜಗ್ಗಾಡಹತ್ತಿತು. ನಾಯಿಯ ಬಾಯಿ ಕೇಳಿ ಆ ಕಳ್ಳರಿಬ್ಬರೂ ವಿಸ್ಮಯ ವ್ಯಂಜಕವಾಗಿ ಮೆಲ್ಲನೆ ಏನೋ ಅಂದು, ತತ್‌ಕ್ಷಣವೇ ಆ ಕಡೆಯ ಒಂದು ಬಾಗಿಲ ತೆರೆದರು. ಅವರ ಆ ಕೋಣೆಯೊಳಗಿನ ದೀಪದ ಆಧಾರದಿಂದ ಅವರಿಗೆ ಕಾಣಿಸಿತೇನಂದರೆ, ಯಾವನೊಬ್ಬನು ಆ ಒಳಂಗಳದ ಗೋಡೆಯ ಬಳಿಯಿಂದ ಓಡಿಹೋಗುತ್ತಿರುವನೆಂದು. ಆ ಒಳಂಗಳದ ಗೇಟು ತಾನು ನಿಂತಿದ್ದ ಸ್ಥಳದಿಂದ ದೂರದಲ್ಲಿದ್ದ ಮೂಲಕ ಸ್ಮಿತ್ಥನು ಆ ಗೇಟನಿಂದ ಹೋಗದೆ, ತ್ವರೆಯಿಂದ

ಸಮೀಪದ ಇಟ್ಟಂಗಿಯ ಗೋಡೆಯನ್ನೇರಿ ಹೊರಗಿನ ಓಣಿಯಲ್ಲಿ ಹಾರಿಕೊಳ್ಳಲು ಪ್ರವೃತ್ತನಾದನು.

ಸ್ಮಿತ್ಥನು ಆ ಗೋಡೆಯ ಮೇಲೇರಿದ್ದನ್ನು ಕಂಡು ಆ ಕಳ್ಳರಲ್ಲೊಬ್ಬನು ತನ್ನ ಜೊತೆಗಾರನನ್ನುದ್ದೇಶಿಸಿ:—“ಎಂಥ ಕೇಡಿಗನಪ್ಪ ಇವ? ಈ ಮನುಷ್ಯನು ಕಿಟಕಿಯ ಬಳಿಯಲ್ಲಿ ಕುಳಿತು ನಮ್ಮ ಸಂಭಾಷಣವನ್ನೆಲ್ಲ ಕೇಳಿರುವಂತಿದೆಯಲ್ಲ?”

ಅದಕ್ಕೆ ಎರಡನೇ ಕಳ್ಳನು ವ್ಯಗ್ರ ಭಾವದಿಂದ:—“ಜೋಸನ್, ಸುಮ್ಮನೆ ನಿಂತುಕೊಂಡೇಕೆ? ಓಡಿ ಹೋಗಿ ಆತನನ್ನು ಹಿಡಿ. ಆತನು ಹಾಗೆಯೇ ಓಡಿ ಹೋದದ್ದಾದರೆ ನಮ್ಮಗಳ ವಿಪತ್ತಿಗೆ ಮೇರೆಯೇ ಉಳಿಯಲಿಕ್ಕಿಲ್ಲ. ಓಡು, ನಾನೂ ಬಂದೆ.“

ಕಳ್ಳರು ತನ್ನನ್ನು ನೋಡಿದರೆಂಬದು ತಿಳಿದ ಕೂಡಲೆ ಸ್ಮಿತ್ಥನ ಎದೆಯು ಹಾರಹತ್ತಿತು. ಆತನು ಕೂಡಲೆ ಆ ಗೋಡೆಯ ಬೇರೆ ಕಡೆಗೆ ಹಾರಿಕೊಂಡು ಆ ಓಣಿಯೊಳಗಿಂದ ಓಡಹತ್ತಿದನು. ಅವನು ತೀವ್ರಗತಿಯಿಂದ ಓಡುತ್ತೋಡುತ್ತ ಗರಮ್ಲೊ ಸ್ಟ್ರೀಟನ್ನು ದಾಟಿ ಒಂದು ರಾಜಬೀದಿಗೆ ಬಂದು ತಲುಪಿದನು. ಆ ಬೀದಿಯಲ್ಲಿ ಇನ್ನು ಜನಗಳ ರಹದಾರಿಯು ಹೆಚ್ಚಿತ್ತು. ಆ ಬೀದಿಯ ಎರಡೂ ಮಗ್ಗಲು ಅಂಗಡಿಯ ಸಾಲುಗಳು. ತನ್ನನ್ನನುಸರಿಸಿ ಬರುವ ಕಳ್ಳರು ಇನ್ನು ತನ್ನನ್ನು ಹಿಡಿಯಲಾರರೆಂದು ಸ್ಮಿತ್ಥನಿಗೆ ಅನಿಸಿತು.

ಸ್ಮಿತ್ಥನು ಆಗ ತನ್ನ ಮನದಲ್ಲಿ:—“ಆ ಸೂಳೀಮಕ್ಕಳಿಗೆ ಚೆನ್ನಾಗಿ ಚಾಟಕೊಟ್ಟು ಓಡಿಬಂದೆನು. ಥೂ! ಓಡುವಾಗ ನನಗೆಷ್ಟು ಶ್ರಮವಾಯಿತೆನ್ನಲಿ? ಮೊಣಕಾಲು ಮುರಿಯದಿದ್ದದ್ದೇ ನನ್ನ ಸುದೈವ. ಏನೇ ಆಗಲಿ, ಅವರುಗಳ ಸಂಭಾಷಣವನ್ನೆಷ್ಟೋ ಕೇಳಿದಂತಾಯಿತು. ನೇಭಿಲ ಹರಕೋರ್ಟನೆಂಥ ರಾಸ್ಕಲನಪ್ಪಾ! ಅವನೇ ಕಳ್ಳರ ಮುಖಂಡನು. ಕಳವಿನ ಮಾಲು ಮಾರಿಯೇ ಅವನು ಈ ಬಗೆಯ ನವಾಬನಾಗಿರುವ! ನಮ್ಮ ಒಡೆಯನ ಅನುಮಾನವೇ ಕಡೆಗೆ ನಿಜವಾಯಿತು. ಆ ಹರಕೋರ್ಟನು ಕಳವು ಮಾಡತಕ್ಕ ಬೇತು ಹೇಳಿಕೊಡುವವನು; ಹಾಗು ಈ ಇಬ್ಬರು ನಿಷ್ಣಾತ ಕಳ್ಳರು ಕನ್ನ ಹಾಕಿ ಮನೆಯೊಳಗಿನ ಭದ್ರವಾದ ತಿಜೋರಿಗಳನ್ನು ಕೂಡ ಒಡೆದು ಮಾಲು ಕದಿಯುವವರು. ಎಂಥ ಗಟ್ಟಿಗ ಕಳ್ಳರಪ್ಪಾ ಇವರು! ನೇಭಿಲನು ಇವರ ಬಳಿಯ ಕಳವಿನ ಸಾಮಾನು ಇಸಕೊಂಡು ತನ್ನ ಮನೆಗೆ ಹೋಗಿರುತ್ತಾನೆ. ಇಂದು ರಾತ್ರಿಯಲ್ಲಿ ಅವನು ಆ ಸಾಮಾನುಗಳನ್ನು ಖಂಡಿತವಾಗಿಯೂ ತನ್ನ ಮನೆಯಲ್ಲಿಯೇ ಇರಿಸುವನು. ಇಂಥ ಸುದ್ದಿಗೇ ಸುದ್ದಿಯೆನಬೇಕು! ಈ ಸುದ್ದಿ

ಹತ್ತುತ್ತಲೇ ನನ್ನ ಒಡೆಯನು ಖಂಡಿತವಾಗಿಯೂ ಬಹು ಖುಷಿಯಾಗುವನು."

ಮೇಲಿನ ಆನಂದದ ಕಲ್ಪನೆಯೊಡನೆಯೇ ಸ್ಮಿತ್ಥನು ಮನಸ್ಸಿನಲ್ಲಿ:— "ನೇಥಿಲ ಹರಕೋರ್ಟನಂತಹ ಧೂರ್ತನು ಕಳವಿನ ಸಾಮಾನುಗಳನ್ನೊಯ್ದು ತನ್ನ ಮನೆಯಲ್ಲಿರಿಸುವ ಸಂಭವವು ಕಡಿಮೆ. ಅವನು ಈ ರಾತ್ರಿಯಲ್ಲಿ ಅವುಗಳನ್ನು ನಿರಾಪದ ಸ್ಥಳಗಳಿಗೆ ಸೇರಿಸಿ ಬಿಡುವನು; ಅಥವಾ ಮತ್ತೇನಾದರೂ ಮಾಡಿ ಬಿಡಬಹುದು; ಆದ್ದರಿಂದ ಪೋಲೀಸರನ್ನು ಕರೆದೊಯ್ದು ಅವನ ಮನೆ ಝಡತಿ ಮಾಡಿಸುವದರಿಂದೇನೂ ಪ್ರಯೋಜನವಾಗಲಿಕ್ಕಿಲ್ಲ." ಎಂಬದನ್ನು ಯೋಚಿಸಿ ಸ್ಮಿತ್ಥನು ಕೆಲ ಮಟ್ಟಿಗೆ ನಿರುತ್ಸಾಹಿಯಾದನು. ಕಡೆಗೆ ಆತನು ನಿರ್ಧರಿಸಿದನೇನಂದರೆ, ನಾನು ಈ ಎಲ್ಲ ಸಂಗತಿಯನ್ನು ನಮ್ಮ ಒಡೆಯನಿಗೆ ಶಕ್ಯವಾದಷ್ಟು ತೀವ್ರ ಅರುಹಬೇಕು; ಅಂದರೆ ಆತನು ಹರಕೋರ್ಟನನ್ನು ದಾರಿಯಲ್ಲೇ ಸೆರೆಹಿಡಿಯುವನು; ಆದರೆ ಹೀಗೆ ಕಾಲುನಡಿಗೆಯಿಂದ ಮನೆಗೆ ಹೋಗಿ ಒಡೆಯನಿಗೆ ಈ ಸುದ್ದಿ ತಿಳಿಸುವುದೆಂದರೆ ಬಹು ವಿಲಂಬವಾಗುವದು ಬೇರೆ ಯಾವ ಉಪಾಯದಿಂದ ತನ್ನ ಒಡೆಯನಿಗಾ ಸುದ್ದಿ ತಿಳಿಸಬೇಕೆಂಬ ಬಗ್ಗೆ ಎಷ್ಟು ಯೋಚಿಸಿದರೂ ಅವನಿಗೇನೂ ಬಗೆ ಹರಿಯಲಿಲ್ಲ.

ದಾರಿಯಲ್ಲಿ ಅವನಿಗಾವುದೊಂದು ಟ್ಯಾಕ್ಸಿಯಾಗಲಿ ಬೇರೆ ವಾಹನವಾಗಲಿ ದೊರೆಯಲಿಲ್ಲ. ಹತ್ತಿರವಲ್ಲಾವ ತಂತಿಯ ಕಚೇರಿಯೂ ಸಿಗಲಿಲ್ಲ. ಟೆಲಿಗ್ರಾಫ ಕಳಿಸಲು ಸಿಕ್ಕಿದ್ದರೂ ಎಷ್ಟು ತೀವ್ರವೆಂದರೂ ಅರ್ಧ ಗಂಟೆಯ ಒಳಗೆ ಆ ಸುದ್ದಿಯು ಆತನ ಒಡೆಯನಿಗೆ ತಿಳಿಯುವ ಸಂಭವವಿರಲಿಲ್ಲ. ಸ್ಮಿತ್ಥನು ಆ ಯೋಚನೆಯಲ್ಲಿ ಸುಮಾರು ಹದಿನೈದು ನಿಮಿಷಗಳ ವರೆಗೂ ತೀವ್ರ ಗತಿಯಿಂದಲೇ ನಡೆದನು. ಆ ಕಳ್ಳರು ತನ್ನನ್ನು ದೂರದಿಂದಲೇ ಅನುಸರಿಸಿ ಬರುತ್ತಿರುವರೆಂಬ ಬಗ್ಗೆ ಅವನಿಗೊಮ್ಮೆಯೂ ಸಂದೇಹ ಉಂಟಾಗಲಿಲ್ಲ. ಕೊನೆಗೆ ಆತನು ಡಿಸ್ಟ್ರಿಕ್ಟ ಬೋರ್ಡಿನ ಒಂದು ರೇಲ್ವೆ ಸ್ಟೇಶನ್ನಿಗೆ ಬಂದು ತಲುಪಿದನು. ಆಗ ಅವನ ಮನಸ್ಸಿನಲ್ಲೊಂದು ಹೊಸ ಬೇತು ಉದ್ಭವಿಸಿತು. ನಮ್ಮ ಒಡೆಯನು ನನ್ನ ದಾರಿ ಕಾಯುತ್ತ ಮನೆಯಲ್ಲೇ ಇದ್ದುದಾದರೆ ನನೀ ಇಚ್ಛೆ ಈಡೇರುವದು ಖಂಡಿತವು, ಎಂದಂದುಕೊಂಡು, ಸ್ಮಿತ್ಥನು ಲಗುಬಗನೆ ಆ ಸ್ಟೇಶನ್ನನ್ನು ಹೊಕ್ಕು ಸರ್ವಜನರಿಗುಪಯೋಗವಾಗಲಿಕ್ಕೆಂದು ಅಲ್ಲಿರಿಸಿದ್ದ ಟೆಲಿಫೋನ ಯಂತ್ರದ ಬಳಿಗೆ ಹೋದನು. ಅವನಿಗೆ ತನ್ನ ಮನೆಯ ಟೆಲಿಫೋನಿನ ನಂಬರು ಗೊತ್ತಿತ್ತು; ಹಾಗು ಅವನ ಜೇಬಿನಲ್ಲಿ ಆಗ ಕೆಲವು ತಾಮ್ರದ ನಾಣ್ಯಗಳೂ ಇದ್ದವು. ಅವುಗಳನ್ನು ಅವನು ಟೆಲಿಫೋನ ಯಂತ್ರದ ಬಾಯಲ್ಲಿ ಹಾಕಿದೊಡನೆಯೇ ಆ ಯಂತ್ರವು ತೆರೆಯಲ್ಪಟ್ಟಿತು. ಆಗ ಅವನು ತನ್ನ ಮನೆಯ

ನಂಬರಿನೊಡನೆ ಆ ಯಂತ್ರವನ್ನು ಜೋಡಿಸಿ ಬ್ಲೇಕನನ್ನು ಕುರಿತು:-"ಹಲೋ ಮಿಸ್ಟರ ಬ್ಲೇಕ" ಎಂದು ಕರೆದನು.

ಪರಕ್ಷಣದಲ್ಲೇ ಬ್ಲೇಕನು ಉತ್ತರವಿತ್ತನು:—"ಅಹುದು, ನಾನು ಬ್ಲೇಕನು. ನೀವಾರು?"

ಸ್ಮಿತ್ಥ:—"ನಾನು ಸ್ಮಿತ್ಥ; ನಾನು 'ಈಸ್ಟ ಎಂಡಿ'ಗೆ ಬಂದಿದ್ದೇನೆ. ಬಹು ಹುಷಾರಿಯಿಂದ ನನ್ನ ಸಂಗತಿ ಕೇಳಿಕೊಳ್ಳಿರಿ. ಇನ್ನು ಹೆಚ್ಚು ಅವಕಾಶವಿಲ್ಲ."

ಬ್ಲೇಕ:—"ಒಳ್ಳೇದು; ಹೇಳತಕ್ಕದ್ದನ್ನು ಬೇಗನೆ ಹೇಳು."

ಸ್ಮಿತ್ಥ:—"ನೇಭಿಲ ಹರಕೋರ್ಟನನ್ನು ಕಳ್ಳರ ಅಡ್ಡೆಯಲ್ಲಿ ಕಂಡೆನು. ತಾವು ಅವನ ಬಗ್ಗೆ ಅನುಮಾನಿಸಿದ್ದೇ ನಿಜವು. ಇಲ್ಲಿಂದ ಸುಮಾರು ಒಂದು ಮೈಲು ದೂರದಲ್ಲಿಯ ಒಂದು ಚಿಕ್ಕ ಮೇಲುಪ್ಪರಿಗೆಯ ಮನೆಯಲ್ಲಿ ಆತನು ತನ್ನ ಸಂಗಡಿಗರೊಡನೆ ಸಂಭಾಷಿಸುತ್ತಿದ್ದನು. ಅವನ ಜೊತೆಗಾರರಿಬ್ಬರು ಕಳ ರಲ್ಲಿ ಒಬ್ಬನ ಹೆಸರು ವಾರ್ನೆ, ಇನ್ನೊಬ್ಬನ ಹೆಸರು ಜೋಸನ. ಅವರೇ ಲೇಡಿ ಹೆಜೆಲೌಡಳ ಅಲಂಕಾರಗಳನ್ನು ಕದ್ದವರು. ಹರಕೋರ್ಟನು ಸುಮಾರು ಇಪ್ಪತ್ತು ನಿಮಿಷಗಳ ಮುಂಚೆ ಆ ಕಳ್ಳರ ಬಳಿಯಿಂದ ಕಳವಿನ ಮಾಲು ಇಸ ಕೊಂಡು ಹೋಗಿರುತ್ತಾನೆ. ಅವನು ಬಹುಶಃ ತನ್ನ ಮನೆಗೇ ಹೋಗಿರಬಹು ದಾಗಿದೆ; ಆದರೆ ಅವನು ಆ ಕಳವಿನ ಮಾಲನ್ನು ಇಂದು ರಾತ್ರಿಯೇ ದೇಶಾಂ ತರಕ್ಕೆ ಮಾರಲಿಕ್ಕೆಂದು ಕಳಿಸಬಹುದಾಗಿದೆ. ನೀವು ಇಂದೇ ರಾತ್ರಿ ಅವನನ್ನು ಸೆರೆಹಿಡಿದರೆ...."

ಸ್ಮಿತ್ಥನು ಆ ಟೆಲಿಫೋನ ರೂಮಿನ ಬಾಗಿಲವನ್ನು ಒಳಗಿನಿಂದ ಇಕ್ಕಿ ಕೊಂಡೇ ಟೆಲಿಫೋನಿನಲ್ಲಿ ಮಾತನಾಡುತ್ತಿದ್ದನು. ಆತನ ಕೊನೆಯ ವಾಕ್ಯವು ಪೂರ್ಣವಾಗುವ ಮೊದಲೇ ಆ ಕದವು ತೆರೆಯಲ್ಪಟ್ಟ ಶಬ್ದವು ಕೇಳಿಸಿತು. ಅವನು ಆ ಕೂಡಲೆ ನಿರ್ವಾಕ್ಯನಾಗಿ ಹಿಂದಿರುಗಿ ನೋಡುತ್ತಾನೆ, ಒಬ್ಬ ಪ್ರಚಂಡ ದಸ್ಯುವು ತನ್ನ ಹಿಂದೆ ಬಂದು ನಿಂತಿರುತ್ತಾನೆ! ಸ್ಮಿತ್ಥನು ಅವನ ದುರಭಿಪ್ರಾಯ ವನ್ನು ತಿಳಿದು ಕೂಗಿಕೊಳ್ಳಬೇಕೆಂದು ಬಾಯಿ ತೆರೆಯುವಷ್ಟರಲ್ಲೇ ಆ ಆಗಂತು ಕನು ಒಂದು ಕಬ್ಬಿಣ ಕೋಲಿನಿಂದ ಸ್ಮಿತ್ಥನ ತಲೆಗೆ ಬಹು ಬಲವಾಗಿ ಹೊಡೆ ದನು.ಆ ಪೆಟ್ಟು ಬಲು ಮರ್ಮಾಂತಿಕವಾದುದು! ಆದರೆ ಸ್ಮಿತ್ಥನ ತಲೆಯ ಮೇಲೆ ಟೊಪ್ಪಿಗೆಯಿದ್ದುದರಿಂದ ಆ ಪೆಟ್ಟು ಅಷ್ಟು ಮರ್ಮಾಂತಿಕವಾಗಿದ್ದರೂ ಅದು ಅವನಿಗೆ ಅಷ್ಟೊಂದು ತಾಕಲಿಲ್ಲ. ಆದರೂ ಕೂಡ ಆ ಆಘಾತದಿಂದ ಅವನು ಬವಳಿಗೊಂಡು ಸಮೀಪದ ಗೋಡೆಯ ಮೇಲೆ ಬಿದ್ದನು; ಹಾಗು ನಿಮಿಷ ಮಾತ್ರದಲ್ಲೇ ಅವನಿಗೆ ಸ್ಮೃತಿದಪ್ಪಿ ಹೋಯಿತು!

ಸ್ಮಿತ್ಥನನ್ನು ಹಾಗೆ ಆಕಸ್ಮಿಕವಾಗಿ ಆಕ್ರಮಿಸಿದ ದಸ್ಯುವು ಮೂವತ್ತು ವರ್ಷಕ್ಕಿಂತ ಹೆಚ್ಚಿನ ವಯಸ್ಸಿನವನಿರಲಿಲ್ಲ. ಅವನು ಶರೀರದಿಂದ ಬಹು ಬಲಿಷ್ಠನಾಗಿದ್ದು ಭವ್ಯವಾದ ಗಡ್ಡ-ಮೀಸೆಗಳನ್ನು ಧರಿಸಿದ್ದನು. ಆತನು ಸ್ಮಿತ್ಥನನ್ನು ಹಾಗೆ ಹೊಡೆದವನೇ ತನ್ನ ಆ ಲೋಹದಂಡವನ್ನು ತನ್ನ ಬಗಲೊಳಗೆ ಮುಚ್ಚಿ ಹಿಡಿದನು; ಹಾಗು ಸ್ಮಿತ್ಥನ ತಲೆಯ ಮೇಲಿನ ಟೊಪ್ಪಿಗೆಯನ್ನು ತೆಗೆದುಕೊಂಡು ಅದಕ್ಕೆ ಲೋಹದಂಡಕದ ಆಘಾತದಿಂದಾದ ತೆಗ್ಗನ್ನು ಬೊಟ್ಟಿನಿಂದ ಸರಿಪಡಿಸಿ ಅದನ್ನು ಮತ್ತೆ ಅವನ ತಲೆಯಮೇಲಿರಿಸಿದನು. ಇಷ್ಟೆಲ್ಲ ಕೃತಿಯನ್ನು ಅವನು ನಾಲ್ಕಾರು ಸೆಕಂದುಗಳಲ್ಲೇ ಪೂರೈಸಿಕೊಂಡು ಆ ಕೋಣೆಯಿಂದ ಹೊರಬಿದ್ದು, ಹೊರಗಿನಿಂದ ಬಾಗಿಲವನ್ನು ಮುಚ್ಚಿಕೊಂಡು ಒಮ್ಮೆ ನಾಲ್ಕೂ ಕಡೆಗೆ ಹೊರಳಿ ನೋಡಿದನು. ಅಲ್ಲಿ ಸಮೀಪದಲ್ಲಾರೂ ಇಲ್ಲವೆಂಬದು ತಿಳಿಯಲು, ಅವನು ತುಸ ದೂರ ನಡೆದು ಹೋಗಿ ವೇಟಿಂಗ ರೂಮಿನ ಬಳಿಯ ತಿಕೀಟಿನ ಕಿಟಕಿಯ ಬಳಿಯಲ್ಲಿ ನಿಂತು, ಅಲ್ಲಿದ್ದ ಬುಕ್ಕಿಂಗ ಕ್ಲಾರ್ಕ ಹಾಗು ಪ್ರವಾಸಿಗರ ಸಮೂಹವನ್ನು ಕುರಿತು ವ್ಯಗ್ರಭಾವದಿಂದ:—“ತಾವುಗಳು ಆ ಟೆಲಿಫೋನ ರೂಮಿಗೆ ಜರುವಿರಾ? ಅಲ್ಲಿ ಒಬ್ಬ ಮನುಷ್ಯನ ಸ್ಥಿತಿಯು ಸಂಕಟಪ್ರಾಯವಾಗಿದೆ” ಎಂದು ಹೇಳಿದನು.

ಹೀಗೆ ಹೇಳಿದವನೇ ಸ್ಮಿತ್ಥನನ್ನು ಆಕ್ರಮಿಸಿದ್ದ ಆ ದಸ್ಯುವು ಎಲ್ಲಕ್ಕೂ ಮೊದಲು ಆ ಟೆಲಿಫೋನ ರೂಮಿಗೆ ಬಂದು ಬಾಗಿಲು ತೆರೆದು, ಅಲ್ಲಿ ಸ್ಮೃತಿ ದಪ್ಪಿ ಬಿದ್ದುಕೊಂಡಿದ್ದ ಸ್ಮಿತ್ಥನನ್ನು ಜಗ್ಗಿಕೊಂಡು ಆ ಕೋಣೆಯಿಂದ ಹೊರಗೆ ತೆಗೆದನು. ಅಷ್ಟರಲ್ಲೇ ನಾಲ್ಕಾರು ಜನ ಪ್ರವಾಸಿಗರು ಬಂದು ಸ್ಮಿತ್ಥನನ್ನು ಸುತ್ತುಗಟ್ಟಿ ನಿಂತರು. ಸ್ಟೇಶನ್ನಿನೊಳಗಿನ ಬುಕ್ಕಿಂಗ ಕ್ಲಾರ್ಕನೂ ತಿಕೀಟ ಕಲೆಕ್ಟರನೂ ಅಲ್ಲಿಗೆ ಬಂದು ತಲುಪಿದರು.

ಅಷ್ಟರಲ್ಲಿ ಸ್ಮಿತ್ಥನ ಮೈಯೆಲ್ಲ ತಣ್ಣಗಾಗಿತ್ತು; ಆದರೆ ಆತನು ಯಾವ ಪ್ರಾಣಾಂತಿಕ ಪೆಟ್ಟಿನಿಂದ ಹಾಗೆ ಮೂರ್ಛೆ ಹೊಂದಿದ್ದನೋ ಅದನ್ನು ಅಲ್ಲಿ ಯವರಾರೂ ಅರಿಯರು. ಒಬ್ಬ ಮುದುಕಿಯು ಅಲ್ಲಿಗೆ ಬಂದು ಗಂಭೀರಭಾವದಿಂದ ತಲೆಯನ್ನಲ್ಲಾಡಿಸುತ್ತ:—“ಅಯ್ಯೋ! ಈ ಪೋರನು ಸರದಗರಮದಿಂದ ಆಕಸ್ಮಿಕವಾಗಿ ಸತ್ತುಹೋಗಿರುವನಲ್ಲ!” ಎಂದಂದಳು.

ಒಬ್ಬ ಭೀಮಾಕಾರದ ಕೆಂಪು ಮನುಷ್ಯನು ಗೊಗ್ಗರ ದನಿಯಿಂದ:—“ಛೇ! ಛೇ! ಇದಾವ ರೋಗದ ಮರಣವೂ ಅಲ್ಲ. ಈ ಪೋರನು ಪ್ರೇಮಭಂಗದಿಂದ ಗತಿಸಿರುವಂತಿದೆ. ಮನಸ್ಸಿನ ದುಃಖದಿಂದ ವಿಷಕುಡಿದು ಆತ್ಮಹತ್ಯೆ ಮಾಡಿಕೊಂಡಿರಬಹುದು. ಪಾಪ! ಈ ಬಡವನಿಗೆ ಸಾಯಲಿಕ್ಕೆ ಬೇರೆ

ಸ್ಥಳವೆಲ್ಲಿಯೂ ಮೊರಕಿರಲಾರವೇ?"

ತಿಕೀಟ ಕಲೆಕ್ಟರ:—"ಅಲ್ಲಲ್ಲ; ಇವನಿಗೆ ಮೂಲರೋಗವಿದ್ದಿರಬೇಕು; ಅಂತೆಯೇ ಇವನು ಹೀಗೆ ಒಮ್ಮೆಲೆ ಸಂಜ್ಞಾವಿಹೀನನಾಗಿ ಬಿದ್ದಿರಬೇಕು."

ಸ್ಮಿತ್ಥನನ್ನು ಆಕ್ರಮಿಸಿದ್ದ ಆ ದಸ್ಯುವು ಒಳ್ಳೇ ಮನುಷ್ಯನ ಆವಿರ್ಭಾವ ದಿಂದ:—"ಈ ಮಾತು ಅಲ್ಲವೆಂವೆನ್ನಲಿಕ್ಕೆ ಬಾರದು. ನಾನು ಟೆಲಿಫೋನ್ ಮಾಡುವದಕ್ಕೆಂದು ಟೆಲಿಫೋನ್ ರೂಮಿಗೆ ಹೋಗಲು, ಈ ಪೋರನು ಯಾರಿ ಗೋ ಫೋನ ಮೂಲಕ ಏನನ್ನೋ ಹೇಳುತ್ತಿರುವಾಗಲೇ ಒಮ್ಮೆಲೆ ನೆಲಕ್ಕೆ ಮೊಪ್ಪೆಂದು ಬಿದ್ದುದನ್ನು ನಾನು ಕಣ್ಮುಟ್ಟ ನೋಡಿವೆನು ಈತನ ಮೇಲೆ ಬಂದ ಪ್ರಸಂಗವು ದೇವರೇ, ನಮ್ಮ ಕಡು ವೈರಿಗೂ ಕೂಡ ಬರಬಾರದಪ್ಪಾ!" ಎಂದು ದುಃಖೋಕಾಗಿ ಹೇಳಿದನು.

ತಿಕೀಟ ಕಲೆಕ್ಟರ: —"ಏನೇ ಆಗಲಿ, ಈ ಪೋರನೀಗ ತುಂಬಾ ಅಸ್ವಸ್ಥ ನಾಗಿದ್ದಾನೆಂಬದಕ್ಕೆ ಅನುಮಾನವೇ ಇಲ್ಲ ಈಗ ಇವನಿಗೇನು ಮಾಡಬೇಕು?"

ವಯಸ್ಸಾದವರು:—"ಪೋಲೀಸರಿಗೆ ವರ್ದಿ ಕೊಡಿರಿ. ಅವರು ಕೂಡಲೆ ಅಂಬ್ಯುಲನ್ಸ ಕಾರ ತರಿಸಿ ಇವನನ್ನು ಆಸ್ಪತ್ರಿಗೆ ಕಳಿಸಿಕೊಡುವರು."

ಸ್ಮಿತ್ಥನನ್ನಾಕ್ರಮಿಸಿದವನು ಮುಂಬಂದು:—"ಅಯ್ಯೋ! ಪಾಪ! ಈತ ಯಾವ ಸಿರಿವಂತನ ಮಗನೋ ಕಾಣೆ. ಆಕಸ್ಮಿಕವಾಗಿ ಕಡುವಿಪತ್ತಿಗೀಡಾಗಿರು ತ್ತಾನೆ. ಎಲ್ಲಿಯ ಪೋಲೀಸ, ಎಲ್ಲಿಯ ಅಂಬ್ಯುಲನ್ಸ ಕಾರ? ಅದಕ್ಕಾಗಿ ತಡ ಮಾಡುವದು ತರವಲ್ಲ ಇಲ್ಲಿ ಯಾವದೊಂದು ಗಾಡಿ ಸಿಕ್ಕರೆ ನಾನೇ ಈತ ನನ್ನು ಕರೆದುಕೊಂಡೊಯ್ದು ಆಸ್ಪತ್ರಿಗೆ ಬಿಟ್ಟು ಬರುವೆನು. ಓಹೋ! ಆಗೋ, ಅಲ್ಲಿ ನಮ್ಮ ಗೆಳೆಯ ಕಾಣುತ್ತಾನೆ. ಅವನ ಜೊತೆಯಲ್ಲಿ ಗಾಡಿ ಕೂಡ ಇರಬಹುದಾಗಿದೆ."

ಯಾವ ಮನುಷ್ಯನನ್ನು ಕುರಿತು ಅವನು ಮಾತನಾಡಿದನೋ ಅವನು ಈತನ ಜೊತೆಗಾರ ಕಳ್ಳ ಜೋಸನನು. ಅವನು ಈತನ ಇಂಗಿತವನ್ನು ತಿಳ ಕೊಂಡು ಆ ಕೂಡಲೆ ಅಲ್ಲಿ ಕೂಡಿದ್ದ ಜನಸಂದಣೆಯನ್ನು ಬದಿಗೆ ಸರಿಸುತ್ತ ಸ್ಮಿತ್ಥನ ಬಳಿಗೆ ಬಂದು ನಿಂತುಕೊಂಡನು. ಆತನು ಈ ಮೊದಲೇ ಗಾಡಿ ಸಹಿತವಾಗಿ ಆ ಸ್ಟೇಶನ್ನಿಗೆ ಬಂದಿದ್ದನು.

ಆತನು ಬಂದವನೇ ಸ್ಮಿತ್ಥನನ್ನು ಆಘಾತಗೊಳಿಸಿದ್ದ ವಾರ್ನೆಯನ್ನು ಕುರಿತು:—"ಏನರೀ, ಉಯಿಲ್ಸ ಸಾಹೇಬ, ಏನದು? ಗಾಡಿಯನ್ನೇಕೆ ಅಪೇಕ್ಷಿ ಸುತ್ತಿರುವಿರಿ?"

ವಾರ್ನೆ:—"ಎಲೋ ಗೆಳೆಯಾ, ಮಹಾ ಸಂಕಟವೊದಗಿದೆ. ಈ ಸಿರಿ

ನಂತರ ಪ್ಪೋರನು ಆಕಸ್ಮಿಕವಾಗಿ ಬವಳಿ ಬಂದು ಬಿದ್ದಿರುತ್ತಾನೆ. ಟೆಲಿಫೋನ ಸಾಂಷಣ ಮಾಡುತ್ತಿರುವಾಗಲೇ ಇವನಿಗೀ ವಿಪತ್ತು ಒದಗಿತು."

ಜೋಸನ:—"ಈತನನ್ನು ಇಲ್ಲಿಯೇ ಹೀಗೆ ಚೆಲ್ಲಿಕೊಟ್ಟುಬಿಟ್ಟರೆ ಪಾಪ! ಸತ್ತುಹೋದಾನು. ನನ್ನ ಗಾಡಿ ಇವೆ. ನಡೆ, ಇವನನ್ನು ಆಸ್ಪತ್ರಿಗೆ ಕಳಿಸಿ ಬರೋಣ."

ವಾರ್ಣೆ:-"ಪರರಿಗುಪಕಾರ ಮಾಡುವ ಸುಸಂಧಿಯನ್ನು ನೀನೆಂದೂ ಕಳೆದುಕೊಳ್ಳಲಾರೆಯೆಂಬದನ್ನು ನಾನೇನರಿಯೆನೇ? ಇನ್ನು ತಡಮಾಡಿ ಪ್ರಯೋಜನವಿಲ್ಲ. ಹಿಡಿ, ನಾವಿಬ್ಬರೂ ಕೂಡಿ ಇವನನ್ನು ನಿನ್ನ ಗಾಡಿಗೆತ್ತಿ ಒಯ್ಯೋಣ."

ಹೀಗೆಂದು ಅಂದು ಅವರಿಬ್ಬರೂ ಕೂಡಿ ಸ್ಮಿತ್ಥನನ್ನು ಎತ್ತಿಕೊಂಡೊಯ್ದು ಸಮೀಪದಲ್ಲೇ ನಿಂತಿದ್ದ ಗಾಡಿಯಲ್ಲಿ ಮಲಗಿಸಿದರು. ಅಷ್ಟರಲ್ಲೇ ಅನೇಕರು ಅಲ್ಲಿಗೆ ಬರಲು ಅಲ್ಲಿ ಜನಸಂದಣಿಯು ಹೆಚ್ಚಿತು; ಆದರೆ ಅವರಾರ ಮನಸ್ಸಿನಲ್ಲೂ ಆ ಇಬ್ಬರು ಆಗಂತುಕರ ಆ ಕೃತಿಯ ಬಗ್ಗೆ ಯತ್ಕಿಂಚಿತ್ತೂ ಸಂದೇಹವುಂಟಾಗಲಿಲ್ಲ; ಅಥವಾ ಅವರು ಹಾಗೆ ಸ್ಮೃತಿದಪ್ಪಿ ಬಿದ್ದಿದ್ದ ಪ್ಪೋರನ ವೈರಿಗಳೆಂಬವು ಹೊಳೆಯಲಿಲ್ಲ. ಅದರಿಂದ ಅವರಿಬ್ಬರೂ ಸೇರಿ ಅವನನ್ನು ಆಸ್ಪತ್ರಿಗೆ ಸೇರಿಸುವ ನೆವದಿಂದ ಕೌಶಲ್ಯದಿಂದ ಅಲ್ಲಿಂದ ದಾಟಿಸಿಕೊಂಡು ನಡೆದರು.

ಸ್ಮಿತ್ಥನು ಆ ಒಳಂಗಳದ ಗೋಡೆಯಮೇಲಿಂದ ಹಾರಿ ಓಡಹತ್ತಲು ನೇಭಿಲ ಹರಕೋರ್ಟನ ಆ ಇಬ್ಬರು ಅನುಚರರು ಅವನನ್ನು ಬಹು ದೂರದವರೆಗೆ ಅನುಸರಣ ಮಾಡಿದರು; ಹಾಗು ಕೊನೆಗೆ ಮೇಲೆ ಹೇಳಿದಂತೆ ತಮ್ಮ ಉದ್ದೇಶವನ್ನು ಸಾಧಿಸಿಕೊಂಡರು.

ಆ ಗಾಡಿಯು ಹೋಗತಕ್ಕ ಸ್ಥಳದ ಕಡೆಗೆ ಓಡಹತ್ತಲು ವಾರ್ಣೆಯು ತನ್ನ ಜೊತೆಗಾರನಾದ ಜೋಸನನನ್ನು ಕುರಿತು:--"ಗೆಳೆಯಾ, ಈ ಗಾಡಿಯವನಾರಪ್ಪಾ, ನಮ್ಮ ಮಿತ್ರ ಜಾರ್ಭಿಸ್ಸನಷ್ಟೇ?

ಜೋಸನ:—"ಅಹುದು; ಜಾರ್ಭಿಸ್ಸನೇ. ನಮ್ಮ ಸುದೈವದಿಂದ ಇವನು ನನಗೆ ಸ್ಟೇಶನ್ನಿನ ಹೊರಗೇ ಭೆಟ್ಟಿಯಾದನು. ಇವನಿಂದ ನಮ್ಮ ಗೌಪ್ಯವು ಬಹಿರಂಗಗೊಳ್ಳುವ ಅಂಜಿಕೆಯಿಲ್ಲ; ಆದ್ದರಿಂದ ಇವನಿಗೆ ಇನಾಮು ತುಸ ಹೆಚ್ಚೇ ಕೊಡಬೇಕಾದೀತು; ಆದರೆ ಈ ಪ್ಪೋರನಾರು? ಈ ಸೈತಾನನ ಸಂತಾನನು ಟೆಲಿಫೋನಿನಲ್ಲಿ ಅದಾರಿಗೆ ಅವೇನೆಂದು ಹೇಳುತ್ತಿದ್ದನೆಂಬದನ್ನಾದರೂ ಕೇಳಿಕೊಂಡೆಯಾ?"

ವಾರ್ಣೆ:—"ಎಲ್ಲವನ್ನೂ ಕೇಳಿಕೊಂಡಿರುತ್ತೇನಪ್ಪಾ! ಆ ವಾರ್ತೆಯನ್ನು ಕೇಳಿಕೊಳ್ಳುತ್ತಿರುವಾಗ ನನ್ನ ಎದೆಯು ಗಟ್ಟಿಗಟ್ಟಿಯಾಗಿ ಹಾರುತ್ತಿತ್ತು!

ವ್ಯಗ್ರಭಾವದಿಂದ ಜೋಸನನು:—"ಏನೆನ್ನುತ್ತೀ? ಈತನೇನು ಹೇಳಿದ ನೆಂಬದನ್ನಾದರೂ ತಿಳಿಸು ನೋಡೋಣ. ಈ ಪೋರನು ಯಾವನೊಬ್ಬ ಪತ್ತೆದಾರನ ಗುಪ್ತಹಸ್ತಕನಲ್ಲವಷ್ಟೇ?"

ವಾರ್ಣಿ:"ಇವನು ಬೇರೆ ಯಾವ ಪತ್ತೆದಾರನ ಗುಪ್ತ ಚರನೂ ಅಲ್ಲ;ಆದರೆ ರಾಬರ್ಟ್ ಬ್ಲೇಕನ ಬಳಿಯಲ್ಲಿ ಯಾವನೋ ಒಬ್ಬ ಸಹಚರ ಹುಡುಗನಿರುವನೆಂಬ ದನ್ನು ಬಲ್ಲೆಯಷ್ಟೇ? ಅವನೇ ಈ ಸ್ಮಿತ್ಥನು. ರಾಬರ್ಟ ಬ್ಲೇಕನಿಗೆ ನಮ್ಮ ವಿಷ ಯಕ್ಕೆ ಹೇಗೆ ಅನುಮಾನ ಉಂಟಾಯಿತೆಂಬದು ತಿಳಿಯಲಿಲ್ಲ; ಆದರೆ ಈ ಪೋರನು ನೇಭಿಲ ಹರಕೋರ್ಟನನ್ನನುಸರಿಸಿ ನಮ್ಮ ಆ ಕೋಣೆಯ ವರೆಗೂ ಬಂದಿದ್ದನೆಂಬದಕ್ಕೆ ಕೊಂಚವೂ ಸಂದೇಹವಿಲ್ಲ. ಈ ಪೋರನು ಟೆಲಿಫೋನ ಮೂಲಕ ತನ್ನ ಮಾಲಕನಿಗೆ ನಮ್ಮಗಳ ಹೆಸರುಗಳನ್ನು ತಿಳಿಸಿರುತ್ತಾನೆ. ಹರ ಕೋರ್ಟನು ನಮ್ಮ ಬಳಿಯಿಂದ ಕಳವಿನ ಸಾಮಾನು ತಕ್ಕೊಂಡು ತನ್ನ ಮನೆಗೆ ತೆರಳಿದ ಸಂಗತಿಯನ್ನು ತಿಳಿಸಿರುವನು. ಬ್ಲೇಕನಿಗೆ ಹರಕೋರ್ಟನ ಮೇಲೆ ನಜರಿಡಬೇಕೆಂದೂ ತಿಳಿಸಿರುವನು. ಆ ಮೇಲೆಯೇ ನಾನು ಟೆಲಿ ಫೋನ ರೂಮಿನ ಬಾಗಿಲು ದೂಡಿ ಇವನ ತಲೆಯ ಮೇಲೆ ನನ್ನ ಕಬ್ಬಿಣ ಬಡಿಗೆಯಿಂದ ಏಟು ಕೊಟ್ಟದ್ದು; ಆದರೆ ಆ ಸ್ಟೇಶನ್ನಿನಲ್ಲಿಯ ಜನರು ಎಂಥ ಮೂರ್ಖರಪ್ಪಾ! ಅವರಲ್ಲಾರೂ ನನ್ನಲ್ಲಿ ಸಂದೇಹ ತಾಳಲಿಲ್ಲ!"

ಜೋಸನನು ಭಯಕಂಪಿತನಾಗಿ:—"ವಾರ್ಣಿ, ನೀನೊಳ್ಳೇ ಗಂಡಾಂತ ರದ ಸಂಗತಿಯನ್ನೇ ಹೇಳಿದೆ; ಆದರೆ ಈ ಹುಡುಗನು ಟೆಲಿಫೋನ ಮಾಡು ವಾಗ ತಾನು ಎಲ್ಲಿಂದ ಟೆಲಿಫೋನ ಮಾಡುತ್ತೇನೆಂಬದನ್ನು ಬ್ಲೇಕನಿಗೆ ತಿಳಿ ಸಿದ್ದನೇನು?"

ವಾರ್ಣಿ: —ಅಹುದು; ಈತ ಹೊರಾಯಿಟ ಚ್ಯಾಂಪೇಲದ ಹೆಸರು ಹೇಳಿ ರುವನು. ಆದರಿಂದ ಬ್ಲೇಕನು ಕೂಡಲೆ ಅಲ್ಲಿಗೆ ಬರುವದು ಖಂಡಿತವು; ಆದರೆ ಅಲ್ಲಿ ನಮ್ಮಗಳ ಯಾವ ಪತ್ತೆಯೂ ಅವನಿಗೆ ಹತ್ತಲಾರದು. ಈಗ ನಮ್ಮಗಳಿಗಿಂತಲೂ ನೇಭಿಲಹರಕೋರ್ಟನಿಗೇ ವಿಪತ್ತಿನ ಸಂಭವ ವಿಶೇಷವಿದೆ."

ಜೋಸನ:—"ಅದಂತೂ ಸರಿಯೆ; ಆದರೆ ಈಗಂತೂ ಆತನನ್ನು ಜಾಗ್ರತಪಡಿಸುವ ಯಾವ ಉಪಾಯವೂ ನಮ್ಮಲ್ಲಿರುವದಿಲ್ಲ. ನಾವು ಈಗ ಅವನ ಮನೆಯ ಕಡೆಗೆ ಹೊರಟರೆ, ನಾವು ಸೆರೆ ಸಿಗುವದು ಖಂಡಿತವು."

ವಾರ್ಣಿ:—"ಆದರೆ ಹರಕೋರ್ಟನು ಆಕಸ್ಮಿಕವಾಗಿ ಹಿಡಿಯಲ್ಪಟ್ಟರೆ, ಆ ಅಲಂಕಾರಗಳೆಲ್ಲ ಪತ್ತೆದಾರ ಬ್ಲೇಕನ ಕೈಗೆ ಹೋಗುವವು; ಆದರಿಂದ ನಮ್ಮ ಗಳ ಪರಿಶ್ರಮವೆಲ್ಲ ವ್ಯರ್ಥವಾಗುವದಿಲ್ಲವೆ?"

ಜೋಸನ:—"ಆ ಬಗ್ಗೆ ಇನ್ನು ಆಕ್ಷೇಪಿಸಿ ಫಲವೇನು? ನಾವು ಹಿಡಿಯಲ್ಪಡದಿದ್ದರೆ ಸಾಕು. ನಾವು ಇಂಥ ಎಷ್ಟೋ ಕಳವುಗಳನ್ನು ಮಾಡಿ ಈಗಾದ ಹಾನಿಯನ್ನು ತುಂಬಿಕೊಳ್ಳಲು ಬಂದೀತು. ಈ ಹುಡುಗನು ನಮ್ಮ ಮನೆಯ ಪತ್ತೆಯನ್ನು ಬೇರೆ ಬ್ಲೇಕನಿಗೆ ತಿಳಿಸಿಲ್ಲವಷ್ಟೆ? ಅಂದಬಳಿಕ ನಾವು ಈಗ ಚಿಂತಿಸುವದೇಕೆ? ಆ ಪತ್ತೆದಾರ ಬ್ಲೇಕನ ತಾತನಿಗೂ ಸಾಧ್ಯವಿಲ್ಲ, ನಮ್ಮ ಮನೆಯ ಪತ್ತೆ ಹಚ್ಚುವದಕ್ಕೆ"

ವಾರ್ನೆ:—"ಅದೇನೋ ನಿಜ. ನಾವು ಇಂಗ್ಲಂಡಿನಲ್ಲಿಲ್ಲವೆಂಬದು ಪೋಲೀಸರಿಗೆ ನಂಬಿಕೆಯಾಗಿದೆ. ಅದೆಲ್ಲಿರಲಿ. ಈಗ ಈ ಹುಡುಗನನ್ನೊಯ್ದು ಏನು ಮಾಡಬೇಕೆಂಬದನ್ನು ಹೇಳು ನೋಡೋಣ

ಜೋಸನ:—"ಅದನ್ನು ನೀನಿನ್ನೂ ನಿರ್ಧರಿಸಿಲ್ಲವೇ? ಆದರೆ ಈತನನ್ನು ನಮ್ಮ ಮನೆಗೊಯ್ದು ಅಲ್ಲಿರಿಸುವುದು ತರವಲ್ಲ. ಓಣಿಯ ಜನರಿಗೆ ಸಂದೇಹವುಂಟಾದರೆ ಗೊಂದಲವೆದ್ದೀತು; ಆದರೆ ಇವನನ್ನು ಒಮ್ಮೆಲೆ ಬಿಟ್ಟುಬಿಡುವದೂ ಯೋಗ್ಯವಲ್ಲ. ಬ್ಲೇಕನು ಬಹು ಚತುರನು. ಅವನು ಅನುಮಾನದಿಂದಲೇ ಆ ರೇಲ್ವೇ ಸ್ಟೇಶನ್ನಿನಿಂದ ಹೊರಾಯಿಟ ಜ್ಯಾಂಪೇಲದ ರಾಜ ಬೀದಿಗೂ ಬರಬಹುದಾಗಿದೆ; ಅಹುದು, ಈ ಪೋರನು ಮನೆಗೆ ಹಿಂತಿರುಗದಿದ್ದಹ್ದನ್ನು ಕಂಡು ಅವನು ಖಂಡಿತವಾಗಿಯೂ ಈ ಕಡೆಗೆ ಬರುವನು. ಆತ ಹಾಗೆ ಬಂದುಬಿಟ್ಟರೆ ನೇಖಿಲ ಹರಕೋರ್ಟನು ಇಂದು ಆತನ ಕೈಯೊಳಗಿಂದ ಸಹಜವಾಗಿ ಪಾರಾಗುವನು. ಬ್ಲೇಕನು ಇಲ್ಲಿಗೆ ಬಂದು ಈ ಪೋರನನ್ನು ಹುಡುಕಿ ಹುಡುಕಿ ಸಾಯಲಿ. ನಾವು ಈತನನ್ನೊಯ್ದು ಆ ನಮ್ಮ ನೆಲಮನೆಯಲ್ಲೇ ಗುಪ್ತವಾಗಿರೋಣ. ಅಂದಿನ ಆ ನೆಲಮನೆಯು ನಿನ್ನ ಲಕ್ಷ್ಯದಲ್ಲಿದೆಯಷ್ಟೇ?"

ವಾರ್ನೆ:—"ಒಳ್ಳೇ ಸಲಹೆಯಿದು. ಜಾರ್ಭಿಸ್ಸನಿಗೆ ಅತ್ತ ಕಡೆಗೇ ಗಾಡಿಯನ್ನೊಯ್ಯ ಹೇಳು. ಈ ಪೋರನನ್ನು ಅಲ್ಲಿರಿಸಿ ನಾವು ಬೇಗನೆ ಮನೆ ಸೇರೋಣ. ಹಲವು ಮಾತುಗಳನ್ನಾಡಬೇಕಾಗಿದೆ. ನಾವು ನಡುವೇ ಬ್ಲೇಕನ ಬಲೆಯಲ್ಲಿ ಸಿಕ್ಕರೆ ಭಯಂಕರ ವಿಪತ್ತಿಗೀಡಾಗಬೇಕಾದೀತು."

ಜೋಸನನ ಅಪ್ಪಣೆಯ ಮೇರೆಗೆ ಜಾರ್ಭಿಸ್ಸನು ಜನನಿಬಿಡವಾದ ದಾರಿಯನ್ನು ಬಿಟ್ಟು ಟೇಮ್ಸು ನದಿಯ ಕಡೆಗೆ ತನ್ನ ಗಾಡಿಯನ್ನು ಭರದಿಂದ ಓಡಿಸಹತ್ತಿದನು.

— —

*

## ಅದು ಅಷ್ಟು ಸಹಜ ಕೆಲಸವಲ್ಲ.

ರಾತ್ರಿಯು ಕ್ರಮವಾಗಿ ಹೆಚ್ಚುತೊಡಗಿತು. ಅಂದು ರಾತ್ರಿ ಎಂಟು ಗಂಟೆಗೆ ನೇಭಿಲ ಹರಕೋರ್ಟನನ್ನನುಸರಿಸಲೆಂದು ಸ್ಮಿತ್ಥನು ಮನೆಯಿಂದ ಹೊರಬಿದ್ದಿದ್ದನು. ಆ ರಾತ್ರಿ ಒಂಬತ್ತು ಗಂಟೆಗೆ ಆತನು ರೇಲ್ವೇ ಸ್ಟೇಶನ್ನಿಗೆ ಬಂದು ಬ್ಲೇಕನಿಗೆ ಕಳ್ಳರ ಸಂಬಂಧದ ವೃತ್ತವನ್ನು ಫೋನಿನಿಂದ ತಿಳಿಸಿದ್ದನು; ಹಾಗು ಅದೇ ಕಾಲಕ್ಕೆ ಆ ವಸ್ಯುವಿನಿಂದ ಪೆಟ್ಟು ತಿಂದು ಸ್ಮೃತಿದಪ್ಪಿ ಬಿದ್ದಿದ್ದನು. ಸುಮಾರು ರಾತ್ರಿಯ ಒಂಬತ್ತೂವರೆ ಗಂಟೆಗೆ ಒಂದು ಮೋಟರು ಹೊರಾಯಿಟ್ ಚ್ಯಾಂಪೆಲ್ ರೇಲ್ವೆ ಸ್ಟೇಶನ್ನಿನ ಬಳಿಗೆ ಬಂದು ನಿಂತಿತು. ಬ್ಲೇಕನು ಆ ಗಾಡಿಯಿಂದಿಳಿದು ಸ್ಟೇಶನ್ ಮಾಸ್ತರನ ಬಳಿಗೆ ಹೋದನು

ಸ್ಮಿತ್ಥನು ಫೋನಿನಲ್ಲಿ ಮಾತನ್ನಾಡುತ್ತಿರುವಾಗಲೇ ತನ್ನ ಹೇಳಿಕೆ ಪೂರೈಸುವ ಮೊದಲೇ ಆಕ್ರಮಕನಿಂದ ಆಘಾತ ಹೊಂದಿದ್ದನೆಂಬದು ವಾಚಕರಿಗೆ ಗೊತ್ತೇ ಇದೆ. ಬ್ಲೇಕನು ಆಗಲೂ ರಿಸೀವ್ಹರನ್ನು ಕಿವಿಗೆ ಹಿಡಿದು ಆತನ ಭಾಷಣ ಕೇಳಿಕೊಳ್ಳುತ್ತಿದ್ದನು; ಆದರೆ ಒಮ್ಮೆಲೆ ಅವನ ಮಾತು ಕಟ್ಟಾಯಿತು. ಅದರೊಡನೆಯೇ ಧಪ್ಪ ಎಂಬವೊಂದು ಸಪ್ಪಳದ ಕ್ಷೀಣ ಪ್ರತಿಧ್ವನಿಯೂ ಬ್ಲೇಕನಿಗೆ ಆ ಫೋನಿನ ರಿಸೀವ್ಹರದ ಮೂಲಕ ಕೇಳಿಸದಿರಲಿಲ್ಲ. ಅವನು ಆ ಫೋನಿನಲ್ಲಿ ಸ್ಮಿತ್ಥನನ್ನು ಹೆಸರುಗೊಂಡು ಮೂರು-ನಾಲ್ಕು ಸಾರೆ ಕರೆದರೂ ಅದರಿಂದೇನೂ ಪ್ರಯೋಜನವಾಗಲಿಲ್ಲ; ಹಾಗು ಆತನ ಸದ್ದೂ ಕೇಳಬರಲಿಲ್ಲ. ಆಗ ಅವನು ಅಲ್ಲಿಯ ವ್ಯಾಪಾರದ ಬಗ್ಗೆ ಸಂದೇಹಪಟ್ಟು ಆ ಕೂಡಲೆ ತನ್ನ ಆಗಿನ ಕರ್ತವ್ಯವನ್ನು ಸ್ಥಿರಪಡಿಸಿಕೊಂಡನು. ಆಗ ಅವನು ಹರಕೋರ್ಟನನ್ನನುಸರಿಸುವ ಇಚ್ಛೆಯನ್ನು ತ್ಯಜಿಸಿದನು. ಸಮಯಾಂತರದಲ್ಲಿ ಅವನನ್ನು ಹಿಡಿಯುವ ಸಂಧಿಯು ಮತ್ತೆ ದೊರೆತೀತೆಂದು ತಿಳಿದು, ಬ್ಲೇಕನು ತತ್‌ಕ್ಷಣವೇ ಮನೆಯಿಂದ ಹೊರಬಿದ್ದನು; ಹಾಗು ಒಂದು ಟ್ಯಾಕ್ಸಿಯನ್ನು ಗೊತ್ತು ಮಾಡಿಕೊಂಡು ಈಸ್ಟ ಎಂಡದ ಕಡೆಗೆ ಬಹು ವೇಗದಿಂದ ನಡೆದನು.

ಸ್ಮಿತ್ಥನು ಬಲವಾಗಿ ಗಾಯಹೊಂದಿದ್ದರಿಂದ ಅವನನ್ನು ಆಸ್ಪತ್ರೆಗೆ ಕಳಿಸಲಾಗಿದೆಯೆಂದು ಸ್ಟೇಶನ್ನಿನಲ್ಲಿ ತಿಳಿಯಬಹುದೆಂದು ಬ್ಲೇಕನ ಆಶೆಯಿದ್ದಿತು, ಆದರೆ ಸ್ಟೇಶನ್ನಿಗೆ ಬಂದ ಮೇಲೆ ಅವನು ಬೇರೆ ಪ್ರಕಾರವನ್ನೇ ಕೇಳಿಕೊಳ್ಳಬೇಕಾಯಿತು. ಅಲ್ಲಿಯ ತಿಕೀಟ ಕಲೆಕ್ಟರನು ಸ್ಮಿತ್ಥನನ್ನು ಯಾವ ಸ್ಥಿತಿಯಲ್ಲಿ ನೋಡಿದ್ದನೋ ಅದೆಲ್ಲವನ್ನೂ ಬ್ಲೇಕನಿಗೆ ಯಥಾಪ್ರಕಾರವಾಗಿ ತಿಳಿಸಿದನು. ಬ್ಲೇಕನು ಶುಷ್ಕಭಾವದಿಂದ ಆ ಸಂಗತಿಯನ್ನೆಲ್ಲ ಕೇಳಿಕೊಂಡನು. ಅದರಿಂದ ಅವನು ತರ್ಕಿಸಿದನೇನಂದರೆ, ಆ ಕಳ್ಳರಿಬ್ಬರೂ ಸ್ಮಿತ್ಥನನ್ನು ಟೆಲಿಫೋನ

ರೂಮಿನ ವರೆಗೂ ಅನುಸರಿಸಿದ್ದಾರು, ಅವರಲ್ಲೊಬ್ಬನು ಒಮ್ಮೆಲೆ ಅವನನ್ನು ಆಕ್ರಮಣ ಮಾಡಿ ಆಘಾತಗೊಳಿಸಿ ಅವನ ಸ್ಮೃತಿವಪ್ಪುವಂತೆ ಮಾಡಿದ್ದಾನು, ಇನ್ನೊಬ್ಬನು ಗಾಡಿಯನ್ನು ತಂದು, ನೋಡುತ್ತಿದ್ದವರ ಕಣ್ಣಿಗೆ ಮಣ್ಣೆರಚಿ, ಆ ಗಾಡಿಯಲ್ಲಿ ಸ್ಮಿತ್ಥನನ್ನು ಹಾಕಿಕೊಂಡು ಅಲ್ಲಿಂದ ಪಲಾಯನ ಹೇಳಿಸಿಹ್ದಾರೆಂದು.

ಬ್ಲೇಕನು ಕ್ಷಣ ಕಾಲವೇ ಯೋಚಿಸಿ ಆ ಟಿಕೀಟ ಕಲೆಕ್ಟರನನ್ನು ಕುರಿತು: "ನೀವು ಆ ಗಾಡಿಯುವನ ನಂಬರು ನೋಡಿದಿರಾ?"

ತಿ. ಕಲೆ:—"ಇಲ್ಲ. ಆ ಗಾಡಿಯ ನಂಬರು ನೋಡುವದವಶ್ಯವೆಂಬುದು ನನ್ನ ಮನಸ್ಸಿನಲ್ಲಿ ಕೂಡ ಬರಲಿಲ್ಲವಲ್ಲ!"

ಬ್ಲೇಕ:—"ನೀವು ಆ ಗಾಡಿಯ ಕೋಚಮನ್ನನನ್ನು ನೋಡಿದಿರಾ? ಅವನೇನು ಇದೇ ಭಾಗದ ನಿವಾಸಿಯೋ?"

ತಿ. ಕಲೆ:—"ಆ ಕೋಚಮನ್ನನನ್ನು ಈ ಮೊದಲು ಈ ಸ್ಟೇಶನ್ನಿನಲ್ಲಿಂಮೂ ನೋಡಿದಂತಿಲ್ಲ. ಆದ್ದರಿಂದ ಅವನ ಮೋರೆಯ ಗುರ್ತು ನನಗಿಲ್ಲ."

ಬ್ಲೇಕ:—"ಯಾವ ಇಬ್ಬರು ಆ ಪೋರನನ್ನು ಗಾಡಿಗೆ ಹೊತ್ತುಕೊಂಡೊಯ್ದರೋ ಅವರನ್ನು ಆ ಮೊದಲೆಂದಾವರೂ ನೋಡಿದ್ದಿರಾ?"

ತಿ. ಕಲೆ:—"ಇಲ್ಲ, ನೋಡಿದಂತಿಲ್ಲ. ಅವರು ನನಗೆ ಸಂಪೂರ್ಣ ಹೊಸಬರು."

ಆ ತಿಕೀಟ ಕಲೆಕ್ಟರನಿಂದ ಉಪಯುಕ್ತವಾದ ಯಾವ ಸಂಗತಿಯೂ ಬ್ಲೇಕನಿಗೆ ತಿಳಿಯಲಿಲ್ಲ. ಅವನು ಹೇಳಿದ್ದನ್ನೇ ಅಲ್ಲಿ ಕಲೆತಿದ್ದ ಮಿಕ್ಕ ಜನರೂ ಹೇಳಿದರು. ಯಾರಿಂದಲೂ ಅದಕ್ಕಿಂತ ಹೆಚ್ಚು ಸಂಗತಿ ತಿಳಿಯಲಿಲ್ಲ. ಆದ ಕಾರಣ ಸ್ಮಿತ್ಥನನ್ನು ಲಗುಬಗನೆ ಪತ್ತೆ ಹಚ್ಚಲಿಕ್ಕೆ ಯಾವ ಆಧಾರವೂ ಅವನಿಗೆ ದೊರೆಯಲಿಲ್ಲ. ಆ ಕಳ್ಳರು ಅರ್ಧ ಗಂಟೆ ಮೊದಲೇ ಸ್ಮಿತ್ಥನನ್ನು ಕದ್ದುಕೊಂಡು ಓಡಿ ಹೋಗಿದ್ದರು; ಅವರಿಂದ ಆ ಗಾಡಿಯುವನನ್ನನುಸರಿಸಿ ಹೋಗುವದೂ ವ್ಯರ್ಥವೇ ಆಗಿತ್ತು.

ಬಳಿಕ ಬ್ಲೇಕನು ಆ ಸ್ಟೇಶನ್ನಿನ ಹೊರಗೆ ಬಂದನು. ಅವನ ಟ್ಯಾಕ್ಸಿಯು ಇನ್ನೂ ನಿಂತುಕೊಂಡಿತ್ತು. ಅವನು ಟ್ಯಾಕ್ಸಿಯ ಬಳಿಗೆ ಬಂದು ನಿಂತು ಒಂದೆರಡು ನಿಮಿಷಗಳವರೆಗೆ ಏನನ್ನೋ ಯೋಚಿಸಿದನು. ಆ ಕಳ್ಳರ ನಿವಾಸವೆಲ್ಲಿಂಬದನ್ನು ಸ್ಮಿತ್ಥನು ಅವನಿಗೆ ತಿಳಿಸಿರಲಿಲ್ಲ. ಆದ್ದರಿಂದ ಅವರನ್ನು ಪತ್ತೆ ಹಚ್ಚಲೆತ್ನಿಸುವದೂ ವ್ಯರ್ಥವೇ; ಆದರೂ ಸ್ಮಿತ್ಥನ ಜೀವಕ್ಕೆ ಅಂಜಿಕೆಯೇನೂ ಇಲ್ಲೆಂಬ ನಂಬಿಗೆಯನ್ನು ಅವನ ಅಂತಃಕರಣವು ಅವನಿಗೆ ಹೇಳುತ್ತಿತ್ತು.

ಬ್ಲೇಕನು ಆಗ ಮನಸ್ಸಿನಲ್ಲಿ ಅಂದುಕೊಂಡದ್ದೇನಂದರೆ "ನಾನು ಮೊಟ್ಟ ಮೊದಲು ನೇಭಿಲ ಹರಕೋರ್ಟನನ್ನು ಸಂಧಿಸಬೇಕು. ಸ್ಮಿತ್ಥನು ಟೆಲಿಫೋನಿನಿಂದ ನನಗೆ ಯಾವ ಎಲ್ಲ ಸಂಗತಿಗಳನ್ನು ತಿಳಿಸಿದನೋ ಅವುಗಳನ್ನೆಲ್ಲ ಆತನ ಆಕ್ರಮಕನು ಮರೆಗೆ ನಿಂತು ಕೇಳಿಕೊಂಡಿರುವದು ಖಂಡಿತವು. ನನ್ನೀ ಅನುಮಾನವು ನಿಜವಾದರೆ, ಆ ಕಳ್ಳರಿಬ್ಬರೂ ಯಾವ ಮಾರ್ಗವನ್ನವಲಂಬಿಸಿದ್ದಾರು? ಅವರು ಹರಕೋರ್ಟನನ್ನು ಜಾಗ್ರತಗೊಳಿಸಲೆಂದು ತಾವು ಸ್ವತಃ ಖಂಡಿತವಾಗಿಯೂ ಭೇಯಾರ ಸ್ಟ್ರೀಟಿಗೆ ಬರಲಾರರು. ತಾವು ಹಿಡಿಯಲ್ಪಡಬಹುದೆಂಬ ಭ್ರಮದಿಂದಲೇ ಬರಲಿಕ್ಕಿಲ್ಲ. ಹರಕೋರ್ಟನಿಗೆ ತಂತಿಮೂಲಕ ಹಾಗೆಂದು ತಿಳಿಸುವ ಸಾಹಸಕ್ಕೂ ಹೋಗಲಾರರು. ಆ ಕಳ್ಳರು ಭಾವಿಸಿರಬಹುದೇನಂದರೆ, ಸ್ಮಿತ್ಥನಿಂದ ನನಗಾ ಸುದ್ದಿ ತಿಳಿಯುತ್ತಲೇ ನಾನು ಹರಕೋರ್ಟನನ್ನು ಸೆರೆಹಿಡಿಯಲಿಕ್ಕೆಂದು ಹೊರಟಿರುವೆನೆಂದು; ಹಾಗು ಅವರಿಂದ ನೇಭಿಲನಿಗೆ ತಮ್ಮ ತಂತಿ ಕೂಡ ದೊರೆಯುವದೆಂದು. ನಾನು ಈಗ ಮರಳಿ ಹೋಗಿ ನೇಭಿಲ ಹರಕೋರ್ಟನು ತನ್ನ ಮನೆಯಲ್ಲಿರುವನೋ ಇಲ್ಲವೋ ಎಂಬದನ್ನು ನೋಡುವೆನು. ಅವನು ಮನೆಯಲ್ಲೇ ಇದ್ದುದಾದರೆ, ನಾನು ಆ ಕೂಡಲೆ ಸ್ಕಾಟಲಂಡಯಾರ್ಡಿನಿಂದ ಪೋಲೀಸರನ್ನು ಕರೆಸಿಕೊಂಡು ಅವನ ಮನೆಯನ್ನು ಝಡತಿ ಮಾಡಿಸುತ್ತೇನೆ. ಅವನ ಮನೆಯಲ್ಲಿ ಕಳವಾದ ಅಲಂಕಾರಗಳು ದೊರೆತರೆ ಅವನ ಅಪರಾಧವನ್ನು ಸಿದ್ಧಪಡಿಸಲು ಕಠಿಣವಾಗಲಿಕ್ಕಿಲ್ಲ. ವಾರ್ಣಿ ಮತ್ತು ಜೋಸನರು ಕಸಬುಗಾರ ಕಳ್ಳರು. ಅವರನ್ನು ಸೆರೆಹಿಡಿಯುವ ಕೆಲಸವನ್ನು ಪೋಲೀಸರು ಕೈಕೊಳ್ಳುವರು. ಪೋಲೀಸರೇ ಸ್ಮಿತ್ಥನನ್ನು ಪತ್ತೆ ಹಚ್ಚುವರು. ಸ್ಮಿತ್ಥನ ಬಗ್ಗೆ ಅಷ್ಟೊಂದು ಆಲೋಚನೆಯಿಲ್ಲ. ಯಾಕೆಂದರೆ ಆತನ ಗಾಯವು ಅಷ್ಟೊಂದು ಗುರುತರವಾಗಿದ್ದರೆ ಕಳ್ಳರು ಆತನನ್ನು ಕಮ್ಡೊಯ್ಯುತ್ತಿರಲಿಲ್ಲ."

ಬಳಿಕ ಬ್ಲೇಕನು ಆ ಟ್ಯಾಕ್ಸಿಯನ್ನಾರೋಹಿಸಿ ಆಕ್ಸಫರ್ಡ ಸರ್ಕಲ್ಲಿಗಾಗಿ ತೀವ್ರ ಬಿಡಹೇಳಿದನು. ಮುಂದೆ ಅಲ್ಪಾವಧಿಯಲ್ಲೇ ಆತನು ಆಕ್ಸಫರ್ಡ ಸರ್ಕಲ್ಲಿಗೆ ಬಂದು ತಲುಪಿದನು. ಆತನು ಅಲ್ಲಿ ಗಾಡಿಯಿಂದಿಳಿದು ಅಲ್ಲಿಂದ ಕಾಲು ನಡಿಗೆಯಿಂದಲೇ ಕ್ಯಾಭೆಂಡಿಸ್ ಸ್ಕ್ವೇಅರನ್ನು ದಾಟಿ ಭೇಯಾರ ಸ್ಟ್ರೀಟಿಗೆ ಹೋಗಿ ತಲುಪಿದನು. ಆ ಮೇಲೆ ನೇಭಿಲ ಹರಕೋರ್ಟನ ಮನೆಯ ಎದುರಿಗಿನ ಮನೆಯ ಬಾಗಿಲ ಬಳಿಗೆ ಹೋಗಿ ಕತ್ತಲಲ್ಲಿ ಅಡಗಿಕೊಂಡು ಕುಳಿತನು.

ಆಗ ಬ್ಲೇಕನು ಮನಸ್ಸಿನಲ್ಲಿ:—"ಈ ರಾಸ್ಕಲ್ಲನು ಮನೆಯಲ್ಲಿಯೇ ಇರುವನು. ಮನೆಯಲ್ಲಿ ದೀಪವೂ ಉರಿಯುತ್ತಿದೆ. ಆದ್ದರಿಂದ ಈ ಹರಕೋರ್ಟ

ನಿಗೆ ನಮ್ಮಗಳ ಸಂಬಂಧದ ಯಾವ ಸಂಗತಿಯೂ ಇದುವರೆಗೆ ತಿಳಿದಿಲ್ಲ. ಸಂದೇಹವುಂಟಾಗಿದ್ದರೆ ಇಷ್ಟರಲ್ಲೇ ಇವನು ಇಲ್ಲಿಂದ ಜಾರಿಹೋಗುವ ಪ್ರಯತ್ನಕ್ಕೆ ತೊಡಗದಿರುತ್ತಿದ್ದಿಲ್ಲ."

ಬ್ಲೇಕನು ಆ ಕತ್ತಲೆಯಲ್ಲಿಯೇ ಸ್ಪಷ್ಟವಾಗಿ ಕಂಡುಕೊಂಡನೇನಂದರೆ, ಕೆಳಮನೆಯ ಎದುರಿಗಿನ ಕೋಣೆಯಲ್ಲಿ ಪರದೆಯ ಮರೆಯಲ್ಲಿ ಒಬ್ಬನು ಕುಳಿತಿದ್ದಾನೆ. ಪರದೆಯ ಕೆಳಗಿನಿಂದ ಆತನ ಕಾಲು ಕೂಡ ಕಾಣಿಸುತ್ತವೆ. ಮುಂದೆ ಮೂರು-ನಾಲ್ಕು ನಿಮಿಷಗಳಲ್ಲೇ ಆತನು ಅಲ್ಲಿಂದೆದ್ದು ಆ ಕೋಣೆಯಲ್ಲೇ ಅತ್ತಿತ್ತ ಅಡ್ಡಾಡ ತೊಡಗಿದನು. ಆ ಬಳಿಕ ಆತನು ಅಲ್ಲಿಯ ದೀಪವನ್ನು ಆರಿಸಿಬಿಟ್ಟನು. ಬ್ಲೇಕನು ಅಲ್ಲಿ ಮತ್ತೆ ನಿಲ್ಲಲಿಲ್ಲ. ಆತನು ಲಗುಬಗನೆ ಅಡಗಿದಲ್ಲಿಂದ ಹೊರಬಿದ್ದು ಹೋಗಿ ಬೀದಿಯ ಕೂಟಿನಲ್ಲಿ ನಿಂತುಕೊಂಡನು. ಅವನು ಆಗ ತನ್ನ ಮನದಲ್ಲೇ:—"ನಾನು ಈಗಲೆ ಸ್ಕಾಟಲಂಡ ಯಾರ್ಡಿಗೆ ಹೋಗುವದವಶ್ಯವು. ಹರಕೋರ್ಟನೇನನ್ನೂ ಅರಿಯನು. ಇಂದು ರಾತ್ರಿಯೇ ಆಗಲಿ ಇಲ್ಲವೆ ನಾಳೆ ಬೆಳಗ್ಗೆಯೇ ಆಗಲಿ ಪೋಲೀಸರ ಸಹಾಯದಿಂದ ಇವನ ಮನೆಯನ್ನು ಸುತ್ತುಗಟ್ಟಿ ಝಡತಿ ಮಾಡುತ್ತಲೆ, ಕಳವಿನ ಮಾಲು ಇವನ ಮನೆಯಲ್ಲೇ ದೊರಕುವದು."

ಬ್ಲೇಕನು ಅಸಾಧಾರಣ ಬುದ್ಧಿವಂತನಾಗಿದ್ದರೂ ಆ ಬಗೆಯ ಧೂರ್ತ ಮತ್ತು ಕುಟಿಲ ಬುದ್ಧಿಯ ಕಳ್ಳನ ಕೂಡ ವರ್ತಿಸುವಾಗ ಎಷ್ಟು ಮುಂಜಾಗ್ರತೆಯನ್ನು ಅವಲಂಬಿಸಬೇಕಾಗಿದ್ದಿತೋ ಅಷ್ಟು ವಹಿಸಲಿಲ್ಲ. ಭ್ರಮ, ಮರವು, ದುರ್ಬಲತೆ ಇವೆಲ್ಲ ಮನುಷ್ಯಮಾತ್ರರಿಗಾಗತಕ್ಕವುಗಳೇ. ಆದ್ದರಿಂದ ಬ್ಲೇಕನಾದರೂ ಅವುಗಳಿಂದ ಹೊರತಾಗುವ ಬಗೆ ಹೇಗೆ? ಸ್ವಂತದ ಬಗ್ಗೆ ಅವನಿಗೆ ಹೆಚ್ಚಾಗಿ ನಂಬಿಕೆಯಿದ್ದುದರಿಂದ ಆತನು ಆಗಾಗ್ಗೆ ಮುಂದಿಯಿಂದ ಮೋಸ ಪಡಬೇಕಾಗುತ್ತಿತ್ತು.

ನೇಭಿಲ ಹರಕೋರ್ಟನು ದಾರಿಗೆ ಹೊಂದಿದ್ದ ಕೋಣೆಯಲ್ಲಿ ಕುಳಿತು ಸಿಗರೇಟ ಸೇದುತ್ತಿರುವಾಗ ಅರ್ಧ ತಾಸಿನ ವರೆಗೂ ಮಂಜು ಬಿದ್ದಿತ್ತು. ಆ ಮೇಲೆ ಅವನಿಗೆ ನಿದ್ದೆ ಬರಹತ್ತಲು, ಕುರ್ಚಿಯಿಂದೆದ್ದು ದೀಪವನ್ನಾರಿಸಿ ಮಲಗುವ ಹೊತ್ತಿಗೆ ತನ್ನ ಕೋಣೆಯ ಕಿಟಕಿಯನ್ನು ಮುಚ್ಚಿಕೊಂಡು ಮಲಗುವದೇ ಯೋಗ್ಯವೆಂದು ಆತನಿಗೆ ಒಮ್ಮೆಲೆ ಅನಿಸಿತು. ಅವನು ಆ ಕಿಟಕಿಯ ಹತ್ತಿರ ಹೋಗಿ ಅದನ್ನು ಮುಚ್ಚ ಹತ್ತಿರುವಾಗ ಆತನ ದೃಷ್ಟಿಯು ಸಹಜವಾಗಿ ಬೀದಿಯ ಕಡೆಗೆ ಹೊರಳಲು, ತನ್ನ ಮನೆಯ ಎದುರಿಗಿನ ರೋಡಿನ ಫೂಟಪಾಥದಲ್ಲಿ ಯಾವನೋ ಒಬ್ಬನು ಧಕ್-ಧಕ್ ಎಂದು ತನ್ನ ಬೂಟಿನ ಸಪ್ಪಳ ಮಾಡುತ್ತ

ಹೋಗುತ್ತಿರುವವನನ್ನು ಕಂಡನು. ಕೂಡಲೆ ಹರಕೋರ್ಟನು ಆ ಪಥಿಕನ ಕಡೆಗೊಮ್ಮೆ ದಿಟ್ಟಿಸಿ ನೋಡಿದನು, ಆದರೆ ಆಗ ಆತನ ಮನಸ್ಸಿನಲ್ಲಿ ಯಾವ ಸಂದೇಹವೂ ಹುಟ್ಟಲಿಲ್ಲ. ಕೆಲವು ಗಜಗಳನ್ನು ನಡೆದು ದಾರಿಯ ಕೂಟಿಗೆ ಬಂದ ಮೇಲೆ ಆ ಪಥಿಕನು-ಬ್ಲೇಕನು-ಒಮ್ಮೆ ಹಿಂದಕ್ಕೆ ಹೊರಳಿ ನೋಡಿದನು. ಆ ಕೂಟಿನಲ್ಲಿ ಒಂದು ತೀಕ್ಷ್ಣ ಪ್ರಕಾಶದ ದೀಪವು ಉರಿಯುತ್ತಿತ್ತು. ಆ ಪ್ರಕಾಶವು ಬ್ಲೇಕನ ಮೋರೆಯ ಮೇಲೆ ಬಿದ್ದ ಕೂಡಲೆ ಹರಕೋರ್ಟನ ನಜರು ಅತ್ತಕಡೆಗೆ ಆಕರ್ಷಿಸಲ್ಪಟ್ಟಿತು.

ನೇಭಿಲನು ಬ್ಲೇಕನನ್ನು ಗುರ್ತಿಸಿದೊಡನೆಯೇ ಗಪಗುಟ್ಟಿ ನಡಗುತ್ತ ಅಸ್ಫುಟವಾಗಿ:—"ಎಂಥ ವಿನಾಶವಿದು? ಅಲ್ಲಿ ಕಾಣಿಸುವವನಂತೂ ಪತ್ತೆದಾರ ಬ್ಲೇಕನು! ಈ ಸರಿ ರಾತ್ರಿಯಲ್ಲಿ ಇತ್ತಕಡೆಗೆ ಅವನು ಯಾತಕ್ಕೋಸ್ಕರ ಬಂದಿದ್ದಾನು? ಅವನು ನನ್ನ ಮನೆಯ ಕಡೆಗೆ ಹೊರಳಿ ನೋಡಿದ ಉದ್ದೇಶವೇನಿರಬಹುದು? ಅವನು ನನ್ನ ಮನೆಯ ಮೇಲೆ ಪಹರೆ ಮಾಡಲಿಕ್ಕೆಂದು ಬಂದಿರಬಹುದೆ?"

ಬ್ಲೇಕನು ಆಗ ಛದ್ಮವೇಷದಿಂದ ಬಂದಿದ್ದರೆ ಹರಕೋರ್ಟನ ದೃಷ್ಟಿಯನ್ನು ಅತಿಕ್ರಮಿಸಬಹುದಾಗಿತ್ತು. ಆತನು ಅಷ್ಟು ದೂರ ಬಂದ ಬಳಿಕ ಹಿಂದಿರುಗಿ ನೋಡದಿದ್ದರೂ ನೇಭಿಲನು ಹಾಗೆ ಆಲೋಚನೆಗೊಳಗಾಗುವ ಪ್ರಸಂಗವೊದಗುತ್ತಿರಲಿಲ್ಲ; ಆದರೆ ಆ ನಡುರಾತ್ರಿಯಲ್ಲಿ ಬ್ಲೇಕನನ್ನು ಹಾಗೆ ಆಕಸ್ಮಿಕವಾಗಿ ಕಂಡ ಹರಕೋರ್ಟನ ಪಾಪಿ ಮನಸ್ಸು ಹಲವು ಸಂಶಯಗಳಿಗೆ ಬಲಿಯಾಯಿತು. ಆಗ ಅವನು ಒಮ್ಮೆಲೆ ಚೋರೆಂದು ಬೆವತೇ ಬಿಟ್ಟನು. ಅಂಜಿಕೆಯಿಂದ ಅವನ ಎದೆಯು ಧಡ್-ಧಡ್ ಎಂದು ಹಾರಹತ್ತಿತು. ಕ್ಷಣಕ್ಷಣಕ್ಕೂ ಆತನ ಸಂದೇಹವು ಹೆಚ್ಚಲಾರಂಭಿಸಿತು. ಅವನಿಂದನ್ನು ತಡೆಯಲಾಗಲಿಲ್ಲ. "ಬ್ಲೇಕನು ವಾರ್ಡ ಮತ್ತು ಜೋಸನರ ಮನೆಯ ವರೆಗೂ ತನ್ನನ್ನನುಸರಿಸಿ ಬಂದು, ತಮ್ಮಗಳ ಸಂಭಾಷಣ ಕೇಳಿಕೊಂಡು, ತಾನು ಅಲ್ಲಿಂದ ಕಳವಿನ ಮಾಲು ತಂದದ್ದನ್ನು ಕೂಡ ನೋಡಿರುತ್ತಾನೆಂದು ಹರಕೋರ್ಟನಿಗೆ ನಂಬಿಗೆಯಾಯಿತು. ಅವನು ಸ್ಕಾಟಲಂಡ ಯಾರ್ಡಿಗೆ ಹೋಗಿ ಮನೆ ಝಡತಿಯ ಅಪ್ಪಣೆ ಪಡೆದು ಖಂಡಿತವಾಗಿಯೂ ತನ್ನ ಮನೆ-ಮಠಗಳ ಝಡತಿ ಮಾಡುವನು; ಹಾಗೆ ಆದರೆ ನನಗೆ ಸಂಪೂರ್ಣ ವಿನಾಶವೇ ಸರಿ. ನಾನು ಪೋಲೀಸರಿಂದ ಸೆರೆಹಿಡಿಯಲ್ಪಡಬೇಕಾಗುವದು." ಇತ್ಯಾದಿಯಾಗಿ ಕಲ್ಪಿಸಿಕೊಂಡನು.

ಸೆರೆಹಿಡಿಯಲ್ಪಡುವ ಭಯದಿಂದ ಆತನು ಮಂಕು ಹಿಡಿದಂತಾದನು. ತಾನು ಈಗ ಏನು ಮಾಡಬೇಕೆಂಬದನ್ನು ಅವನು ಬೇಗನೆ ಸ್ಥಿರಪಡಿಸಲಾರದೆ

ಮನಸ್ಸನ್ನು ಬಲಪಡಿಸಲೋಸುಗ ಒಂದು ಸೀಸೆ ಬ್ರ್ಯಾಂಡಿಯನ್ನು ಕುಡಿದನು. ಆ ಮೇಲೆ ಆತನು ತನ್ನ ವಾಚನಾಲಯದ ಕೋಣೆಯನ್ನು ಪ್ರವೇಶಿಸಿದನು. ಆಗ ಆತನು ತನ್ನ ಮನಸ್ಸಿನಲ್ಲಿ ನಿರ್ಧರಿಸಿಕೊಂಡನೇನಂದರೆ:-"ಇನ್ನೂ ಸಮಯವಿದೆ; ಮೀರಿಲ್ಲ. ಈಗಲೂ ಆ ಕಳವಿನ ಒಡವೆಗಳನ್ನು ದಾಟಿಸಬಹುದಾಗಿದೆ ಆ ಮೇಲೆ ಪೋಲೀಸರು ಬಂದು ಝಡತಿ ಮಾಡಿದರೆ ಅವರಿಗೆ ಸಿಗುವದೇನು? ನಾನೂ ಏನನ್ನೂ ಒಪ್ಪುವದಿಲ್ಲ; ಮರಳಿ ಪೋಲೀಸರನ್ನೇ ಅಂಜಿಸಿ ಬಿಡುವೆ. ನನ್ನ ವಿರುದ್ಧ ಅವರೇನು ಪ್ರಮಾಣ ಪಡೆಯುವರು? ವಾರ್ನ-ಜೋಸನರು ಸೆರೆ ಹಿಡಿಯಲ್ಪಟ್ಟರೂ ಅವರು ಖಂಡಿತವಾಗಿಯೂ ನನ್ನ ಹೆಸರು ಹೇಳಲಾರರು.

ನೇಭಿಲ ಹರಕೋರ್ಟನ ವಾಚನಾಲಯದೊಳಗೆ ಒಂದು ದೊಡ್ಡ ತಿಜೋರಿಯು ಗೋಡೆಯಲ್ಲಿ ಹೂಳಲಾಗಿತ್ತು. ಅವೆಷ್ಟೋ ಕಳವಿನ ಆಭರಣಗಳು ಇಷ್ಟೇ ಅಲ್ಲ, ಕಿಲ್ಡೀಯರನ ಜೇಬಿನಿಂದ ಕಿತ್ತುಕೊಂಡಿದ್ದ ಅಲಂಕಾರಗಳೂ ಸಹ ಆ ತಿಜೋರಿಯಲ್ಲೇ ಸಂಗ್ರಹಿಸಲ್ಪಟ್ಟಿದ್ದವು. ಹರಕೋರ್ಟನು ಆಗ ಆ ತಿಜೋರಿಯನ್ನು ತೆರೆಯಹೋಗಿ ಮಹಾ ವಿಪತ್ತಿಗೀಡಾದನು. ತಿಜೋರಿಯ ಕೀಲೀ ಕೈ ಮುರಿಯಿತು, ಅದರಿಂದ ತಿಜೋರಿಯ ಬಾಗಿಲು ತೆರೆಯಲಾಗಲಿಲ್ಲ! ಬಾಗಿಲು ತೆರೆಯದ ಹೊರತು ಒಳಗಿದ್ದ ಕಳವಿನ ಜಿನಸುಗಳನ್ನೆಲ್ಲ ಹೊರವೆಗೆಯುವಂತಿರಲಿಲ್ಲ. ಅವನು ಆ ತಿಜೋರಿ ಬಾಗಿಲ ತೆರೆಯುವ ಸಲುವಾಗಿ ಬಹು ಕಷ್ಟಪಟ್ಟನು. ಅದರಿಂದ ಅವನ ಸರ್ವಾಂಗವೂ ಬೆವೆತು ತೊಲಸಾಯಿತು. ಹ್ಯಾಂಡಲ್ಲನ್ನು ಜಗ್ಗಿ ಜಗ್ಗಿ ಕೈಗೆ ಗುಳ್ಳೆಗಳೆದ್ದವು. ಏನು ಮಾಡಿದರೂ ತಿಜೋರಿಯನ್ನು ತೆರೆಯಲಾಗದೆ ನಿರುಪಾಯವಾಯಿತು. ಭಯದಿಂದ ಅವನ ಸೊಂಡೆ ಯೊಣಗಿತು. ಅವನು ನಿಂತುನಿಂತಿರಲಿಕ್ಕೆ ನಿಃಶ್ವಾಸಗರೆಯುತ್ತ ಇನ್ನು ತಾನೇನು ಮಾಡಬೇಕೆಂಬ ಬಗ್ಗೆ ಎಷ್ಟು ಯೋಚಿಸಿದರೂ ಯಾವ ಯೋಚನೆಯೂ ಬಗೆ ಹರಿಯಲಿಲ್ಲ. ಕಡೆಗೆ ಅವನು ಹತಾಶನಾಗಿ:—ಆಗದು, ನನ್ನಿಂದ ಇದನ್ನು ತೆರೆಯಲಾಗದು. ಈ ತಿಜೋರಿಯನ್ನೊಡೆಯಬೇಕು; ಆದರೆ ಈ ಗಟ್ಟಿಮುಟ್ಟಾದ ತಿಜೋರಿಯನ್ನು ನನ್ನಿಂದ ಒಡೆಯುವದಾದರೂ ಹೇಗಾದೀತು? ಕಸಬುಗಾರ ಕಳ್ಳರು-ದರವಡೆಖೋರರ ಹೊರತು ಅನ್ಯರು ಇದನ್ನು ಒಡೆಯಲಾರರು. ಈಗ ನಾನೇನು ಮಾಡಲಿ? ಎಲ್ಲವನ್ನೂ ಈ ತಿಜೋರಿಯಲ್ಲಿ ಕೂಡಿಟ್ಟು ಜೀವ ತಕ್ಕೊಂಡು ದೇಶಾಂತರಕ್ಕೆ ಓಡಿ ಹೋಗಲೊ? ನಾನೆಲ್ಲಿಗೆ ಹೋಗಲಿ? ಯಾವ ಬಗೆಯಿಂದ ಶೇಷಾಯುಷ್ಯವನ್ನು ನಿರ್ವಹಿಸಲಿ? ಇಷ್ಟು ಸುಖ, ಐಶ್ವರ್ಯ, ಆಮೋದ-ಪ್ರಮೋದ ಇವುಗಳನ್ನೆಲ್ಲ ತೊರೆದು, ಮುಂದಿನ ಯಾವ ನಿರ್ಧಾರವನ್ನೂ ಮಾಡದೆ ಬರಿಗೈಯಿಂದ ದೇಶತ್ಯಾಗ ಮಾಡಲೊ?

ಅವನಿಗೆ ಒಮ್ಮೆಲೆ ಜ್ಞಾಪಕವಾಯಿತೇನಂದರೆ, ತಾನು ಈ ಸಮಯ ದಲ್ಲಿ ವಾರ್ಣೆ-ಜೋಸನರ ಸಹಾಯ ಪಡೆದರೆ ಅವರು ಈ ವಿಪತ್ಸಾಗರದ ದಡ ವನ್ನು ತೋರಿಸುವರು. ಅವರು ಇದಕ್ಕಿಂತಲೂ ಭದ್ರವಾದ ಲೋಹದ ತಿಜೋರಿಗಳನ್ನೆಷ್ಟೋ ಒಡೆದಿರುತ್ತಾರೆ. ಅವರನ್ನು ಕರೆತಂದು ಈ ತಿಜೋರಿ ಯನ್ನು ಒಡೆಪಲು ಶಕ್ತನಾದರೆ, ಅವರ ಮೂಲಕ ಕಳವಿನ ಈ ಎಲ್ಲ ಜೀನಸು ಗಳನ್ನೂ ದಾಟಿಸಬಹುದಾಗಿದೆ; ಅಲ್ಲದೆ ನನ್ನ ತಿಜೋರಿಯನ್ನೊಡೆದು ಕಳ್ಳರು ನನ್ನಲ್ಲಿದ್ದಬಿದ್ದದ್ದನ್ನೆಲ್ಲ ದೋಚಿಕೊಂಡು ಹೋಗಿರುವರೆಂದು ಬೊಬ್ಬೆ ಹೊಡೆ ದು, ಬ್ಲೇಕ ಮತ್ತು ಅವನ ಜೊತೆಯ ಪೋಲೀಸರನ್ನು ಮೋಸಪಡಿಸಲಿಕ್ಕೂ ಬಂದೀತು; ಆದರೆ ವಾರ್ಣೆ-ಜೋಸನರನ್ನು ಕರೆಯಿಸಿ ಈ ಎಲ್ಲ ಕೆಲಸವನ್ನು ಪೂರೈಸಲಿಕ್ಕೆ ತೀರ ಕಡಿಮೆ ಎಂದರೂ ಒಂದು ಪ್ರಹರವಾದರೂ ಹಿಡಿದೀತು. ಒಂದುವೇಳೆ ಅಷ್ಟರಲ್ಲೇ ಪೋಲೀಸರು ಬಂದು ಮನೆಯನ್ನು ಸುತ್ತುಗಟ್ಟಿದರೆ ಆಗಂತೂ ಸಂಪೂರ್ಣ ವಿನಾಶವೇ ಸರಿ. ನಾವು ಮೂವರೂ ಕಳವಿನ ಮಾಲು ಸಹಿತ ನಮ್ಮ ಮನೆಯಲ್ಲೇ ಕೈಸೆರೆಯಾಗಬೇಕಾದೀತು! ಆದರೆ ಪೋಲೀ ಸರು ಈ ಸರಿ ರಾತ್ರಿಯಲ್ಲಿ ಬರದೆ ಬೆಳಿಗ್ಗೆ ಬಂದರೆ ನನ್ನನ್ನು ಹಿಡಿಯುವದೆಂತು? ಏನಾದರೂ ಈಗ ಸುಮ್ಮನಿರುವದು ಯಾವ ಬಗೆಯಿಂದಲೂ ಉಚಿತವಲ್ಲ!

ಹೀಗೆ ಹರಕೋರ್ಟನು ಎಲ್ಲ ರೀತಿಯಿಂದಲೂ ಆಲೋಚಿಸಿದ ಬಳಿಕ ತನ್ನಷ್ಟಕ್ಕೆ ತಾನೇ:—"ಈ ಕೆಲಸವನ್ನು ನಾನು ಮಾಡಲೇ ಬೇಕು. ವಾರ್ಣೆ-ಜೋಸನರು ಖಂಡಿತವಾಗಿಯೂ ಗರಮ್ಲಾ ಸ್ಟ್ರೀಟಿನಲ್ಲಿಯೇ ಇರುವರು. ಅವತ ಳಿಯಲ್ಲಿ ಕಳವಿನ ಮಾಲಿಲ್ಲವೆಂಬದನ್ನು ಬ್ಲೇಕನು ತಿಳಿದಿದ್ದರೆ, ಅವನು ಅವ ರನ್ನು ಸೆರೆ ಹಿಡಿಯಲಿಕ್ಕೆ ಇಂದೇ ಪ್ರಯತ್ನಿಸಲಾರನು. ಅವರು ಬಹುಶಃ ನಿರಾಪದರಾಗಿಯೇ ಇರುವರೆಂದು ಆಶಿಸುವೆನು."

ಆಗ ನೇಭಿಲನ ಆಳು-ಹೋಳುಗಳೆಲ್ಲ ಸುಖನಿದ್ರೆಯಲ್ಲಿದ್ದರು. ಅವನು ಆ ವಾಚನಾಲಯದೊಳಗಿಂದ ಹೊರಬಿದ್ದು ತನ್ನ ಕೂಡ್ರುವ ಕೋಣೆಗೆ ಬಂದು ಇನ್ನಿಷ್ಟು ಬ್ರ್ಯಾಂಡಿಯನ್ನು ಕುಡಿದನು ತದನಂತರ ಒಂದು ಮಾಸಿದ ಅಂಗಿ ಮತ್ತು ಕೀಳುತರದ ಟೋಪಿಗಳನ್ನು ಧರಿಸಿಕೊಂಡು, ಲಗುಬಗನೆ ಅಕ್ಸ ಫರ್ಡ ಸರ್ಕಲ್ಲಿಗೆ ಬಂದನು. ಅಲ್ಲಿಯ ಟ್ಯಾಕ್ಸಿಗಳ ಅಡ್ಡೆಯಲ್ಲೊಂದು ಟ್ಯಾಕ್ಸಿ ಯನ್ನು ಗೊತ್ತುಮಾಡಿಕೊಂಡು 'ಈಸ್ಟ ಎಂಡ'ದ ಕಡೆಗೆ ಸಾಗಿದನು.

* * *

ಅಂದಿನ ರಾತ್ರಿಯು ಬ್ಲೇಕನಿಗೆ ಒಳ್ಳೆಯದಿರದ್ದರಿಂದ ಆತನ ಎಲ್ಲ ಕೆಲಸ ಗಳಿಗೂ ವಿಘ್ನವೇ ಉಂಟಾಗುತ್ತಿತ್ತು. ಆದರಿಂದ ಮೊಟ್ಟ ಮೊದಲು ಅವನಿಗೆ

ಸ್ಮಿತ್ಥನ ಪತ್ತೆ ಹತ್ತಲಿಲ್ಲ. ಆ ಮೇಲೆ ಛದ್ಮ ವೇಷ ಧರಿಸದ ನೆವದ ಮೂಲಕ ಹರಕೋರ್ಟನಿಗೆ ಇವನ ಗುರ್ತು ಹತ್ತಿತು; ಆದರೆ ಈ ಸಂಗತಿಯು ಬ್ಲೇಕ ನಿಗೆ ತಿಳಿಯಲೇ ಇಲ್ಲ. ಆ ಬಳಿಕ ಸ್ಕಾಟಲಂಡ ಯಾರ್ಡಿಗೆ ಹೋಗಲು ಅಲ್ಲಿ ಹಲವು ವಿಧದಿಂದ ತಡವಾಗಹತ್ತಿತು. ಈ ಕೆಲಸದಲ್ಲಿ ಅಷ್ಟು ಅವಸರ ಮಾಡು ವದು ಸರಿಯಲ್ಲವೆಂದು ಭಾವಿಸಿ ಬ್ಲೇಕನು ತಾನಾಗಿಯೇ ಹಲವು ಜನ ಪೋ ಲೀಸ ಮೇಲಧಿಕಾರಿಗಳ ಬಳಿಯಲ್ಲಿ ಆ ನೇಭಿಲ್ಲನ ಸಂಬಂಧವಾಗಿ ಎಲ್ಲ ವಿವರಣ ವನ್ನು ಹೇಳಹತ್ತಿದನು; ಅಲ್ಲದೆ ವಾರ್ನ-ಜೋಸನ್ನರನ್ನು ಸೆರೆಹಿಡಿಯಲಾ ದೀತೋ ಇಲ್ಲವೋ ಎಂಬದರ ಬಗ್ಗೆ ಅವರುಗಳೊಳನೆ ಒಂದು ಗಂಟೆಯವರೆಗೂ ಆಲೋಚಿಸಿದನು.

ಆ ಮೇಲೆ ಯಾವ ಪೋಲೀಸ ಇನ್ಸಪೆಕ್ಟರನು ತನ್ನೊಡನೆ ಹರಕೋ ರ್ಟನ ಮನೆ ಝಡತಿ ಮಾಡಲಿಕ್ಕೆ ಬರುತ್ತಾನೆಂಬದನ್ನು ನಿರ್ಧರಿಸಿಕೊಂಡನು. ಆತನೊಡನೆ ತರ್ಕ-ವಿತರ್ಕ ಮಾಡುವುದರಲ್ಲಿಯೇ ಎಷ್ಟೋ ಕಾಲವು ಕ್ರಮಿಸಿ ಬಿಟ್ಟಿತು. ಆ ಇನ್ಸಪೆಕ್ಟರನ ಹೆಸರು ಉಯಿಜಿನ್‌ನೆಂದು. ಆತ ಕೊಂಚ ಭೀರು ವು. ನೇಭಿಲ ಹರಕೋರ್ಟನು ಒಳ್ಳೇ ಸನ್ಮಾನ್ಯಗೃಹಸ್ಥನು. ಅಂಥವನ ಮನೆ ಝಡತಿಗೆ ಹೋಗುವವೆಂದರೆ ಅವನ ಎದೆಯೇ ನಡುಗಿತು. ಝಡತಿಗೆ ಆತನು ಆ ರಾತ್ರಿಯಲ್ಲೇ ಬರಲಿಕ್ಕೆ ಮೊದಲು ಒಪ್ಪಲಿಲ್ಲ; ಆದರೆ ಬ್ಲೇಕನು ಬಿಟ್ಟಪ್ಪ ನಲ್ಲ; ಅವನು ಹಲವು ತರ್ಕವಿತರ್ಕಗಳಿಂದ ಅವನನ್ನು ಕೊನೆಗೊಮ್ಮೆ ರಾಜಿ ಪಡಿಸಿದನು. ಬಳಿಕ ಝಡತಿಯ ಆರ್ಡರು ತೆಗೆಯಿಸಲಿಕ್ಕೂ ಹೆಚ್ಚು ತಡವಾ ಯಿತು. ಕಡೆಗೆ ಆ ರಾತ್ರಿ ಎರಡುಗಂಟೆಗೆ ಬ್ಲೇಕನು ಇನ್ಸಪೆಕ್ಟರ ಉಯಿಜಿನ್ ಮತ್ತು ಕೆಲ ಜನ ಛದ್ಮವೇಷದ ಪೋಲೀಸರನ್ನೊಳಗೊಂಡು ನೇಭಿಲನ ಮನೆ ಯ ಝಡತಿಗೆಂದು ಅಲ್ಲಿಂದ ಹೊರಬಿದ್ದನು; ಹಾಗು ಒಂದು ಟ್ಯಾಕ್ಸಿಯಲ್ಲಿ ಕುಳಿತು ಭೇಯಾರ ಸ್ಟ್ರೀಟಿಗೆ ಬಂದು ತಲುಪಿದನು.

ಆಗ ಉಯಿಜಿನ್ನನು ಬ್ಲೇಕನನ್ನುದ್ದೇಶಿಸಿ:—"ನಾನು ನಿಮ್ಮೊಡನೆ ಬರು ತ್ತಿರುವೆನಷ್ಟೇ? ಆದರೆ ನೀವು ನೆನಪಿಡುವುದೇನಂದರೆ, ಈ ಸಂಬಂಧದ ಎಲ್ಲ ಹೊಣೆಯೂ ನಿಮ್ಮ ಮೇಲೆಯೇ ಎಂದು. ನೀವು ಒಂದುವೇಳೆ ಭ್ರಮದಿಂದ ನೇಭಿಲ ಹರಕೋರ್ಟನಂತಹ ಸನ್ಮಾನ್ಯನ ಮನೆ ಝಡತಿ ಮಾಡಿಸುತ್ತಿರಲಾಗಿ ಅದು ನಿಷ್ಫಲವಾದರೆ ಮಾತ್ರ ಆಗಿನ ವಿಪತ್ತಿಗೆ ಮೇರೆಯೇ ಉಳಿಯಲಾರದು. ನನ್ನ ನೌಕರಿಗೆ ಧಕ್ಕೆ ಬರದಿರಲೆಂದರೆ ಸಾಕು" ಇನ್ಸಪೆಕ್ಟರನ ಭಯವನ್ನು ಕಂಡು ಬ್ಲೇಕನು ಖತಿಗೊಂಡು:-"ಇನ್ನು ನಿಮಗಾವ ಭಯವೂ ಇಲ್ಲ. ತಪ್ಪು- ತಡೆಗಳೇನಾದರೂ ಅವುಗಳನ್ನು ನಾನು ನಿಮ್ಮ ಮೇಲೆ ಹೊರಿಸಲಾರೆನು. ಅವ

ಕ್ಕೆಲ್ಲ ನಾನೇ ಹೊಣೆಯಾಗುವೆನು."

"ಬ್ಲೇಕರೇ, ಒಟ್ಟಿನಲ್ಲಿ ನನಗಂತೂ ನಂಬಿಗೆಯಾಗುವದಿಲ್ಲ. ನೀವು ನಿಮ್ಮ ಸ್ಮಿತ್ಥನಿಂದ ಟೆಲಿಫೋನಿನ ಮೂಲಕ ಏನು ತಿಳಕೊಂಡಿರುತ್ತೀರೋ ಅದು ಒಂದುವೇಳೆ ನಿಜವಾಗಿರಲಿಕ್ಕಿಲ್ಲ. ಲೇಡಿ ಹೆಜೆಲ್‌ಡಳ ಕಳವಾದ ಅಲಂಕಾರಗಳು ನೇಭಿಲ ಹರಕೋರ್ಟನ ಮನೆಯಲ್ಲಿ ಬಹುಶಃ ಸಿಗಲಿಕ್ಕಿಲ್ಲ."

ಬ್ಲೇಕ:—"ಅವೆಲ್ಲ ನಿಮ್ಮ ಅನುಮಾನವು; ಮತ್ತು ನಾನು ಹೇಳುವುವೆಲ್ಲವೂ ಪರೀಕ್ಷಿಸಲ್ಪಟ್ಟ ಸತ್ಯವು. ಸ್ಮಿತ್ಥನ ಮಾತನ್ನು ನಾನು ಖಂಡಿತವಾಗಿಯೂ ನಂಬುವೆನು "

ಇನಸ್ಪೆಕ್ಟರನು:—"ಹಾಗಾದರೆ ಅಮೋಘೇ ಮಾತು. ನಮ್ಮಗಳ ಪ್ರಯತ್ನವು ಸಫಲವಾದರೆ ಏಹಿತವೇ ಆಗುವದು."

ಕ್ಯಾಭೆಂಜೆಸ್ ಸ್ಕ್ವೇಅರಿನ ಕೂಟಿನಲ್ಲಿ ಗಾಡಿಯಿಂದ ಇಳಿದು ಬ್ಲೇಕನು ಅವರೆಲ್ಲರೊಡನೆ ಕಾಲನಡಿಗೆಯಿಂದಲೇ ಭೇಯಾರ ಸ್ಟ್ರೀಟಿಗೆ ಸಾಗಿದನು. ಅವರು ಹರಕೋರ್ಟನ ಮನೆಯ ಬಳಿಗೆ ಹೋಗಿ ನೋಡುತ್ತಾರೆ, ಅಷ್ಟು ರಾತ್ರಿಯಲ್ಲಿ ಆ ಮನೆಯಲ್ಲಿ ದೀಪವು ಉರಿಯುತ್ತಿವೆ! ಅವರು ಕಿಟಕಿಯ ಬಳಿಗೆ ಹೋದ ಕೂಡಲೆ ನೇಭಿಲ ಹರಕೋರ್ಟನೇ ತಲೆಬಾಗಿಲು ತೆರೆದು ಅವರೆದುರಿಗೆ ಬಂದು ನಿಂತನು! ಆಗ ಆತನು ಮಲಗುವ ಉಡಿಪಿನಲ್ಲಿದ್ದು, ಅತ್ಯಂತ ಉತ್ತೇಜಕನಾಗಿರುವಂತೆ ತೋರಿದನು.

ಹರಕೋರ್ಟನು ಹೆಚ್ಚಾಗಿ ವಿಸ್ಮಯಪಟ್ಟಂತೆ ನಟಿಸಿ:—"ಯಾರವರು? ಬ್ಲೇಕರೇನು? ಬನ್ನಿರಿ-ಬನ್ನಿರಿ, ನನ್ನ ಸೌಭಾಗ್ಯದಿಂದ ನೀವಾಗಿಯೇ ನನ್ನಲ್ಲಿಗೆ ಬಂದಿರುತ್ತೀರಿ. ನಾನು ಪೋಲೀಸರನ್ನು ಕೂಗುವವಕ್ಕೆಂದು ಈಗಲೆ ಹೊರ ಹೊರಟಿದ್ದೆನು. ನಾನೀಗ ಮಹಾವಿಪತ್ತಿಗೀಡಾಗಿದ್ದೇನೆ; ನಮ್ಮ ಮನೆಯಲ್ಲಿ ಭಯಂಕರ ಕಳವಾಗಿದೆ!"

ಬ್ಲೇಕನು ವಿಸ್ಮಯವನ್ನು ತಡೆಕೊಳ್ಳಲಾರದೆ:—"ಕಳವಾಗಿದೆಯೇ!"

ಹರಕೋರ್ಟ:—"ಅಹುದು; ಕಳವು. ಕಳ್ಳರು ನನ್ನ ತಿಜೋರಿಯನ್ನೊಡೆದು ಎಷ್ಟೋ ನಗದು ಹಣವನ್ನು ಅಪಹರಿಸಿರುತ್ತಾರೆ. ಬನ್ನಿರಿ, ನಾನು ನಿಮಗದನ್ನು ತೋರಿಸುತ್ತೇನೆ".

ಬ್ಲೇಕನ ಮನಸ್ಸಿನಲ್ಲಿ ಸಂಪೂರ್ಣ ಸಂದೇಹವುಂಟಾಯಿತು. ಹರಕೋರ್ಟನು ಯಾವ ಬಗೆಯಿಂದಲೋ ತನ್ನ ಚಲನವಲನವನ್ನು ಕಂಡುಕೊಂಡು ಹುಷಾರಾಗಿರುವನೆಂದೂ, ತಿರುಗಿ ತನ್ನಲ್ಲೇ ಕಳವಾಗಿವೆಯೆಂದು ಹೂಲಿ ಎಬ್ಬಿಸಿರುವನೆಂದೂ ಅವನು ತಿಳಿದನು. ಅದರಿಂದ ಈಗ ಮನೆ ಝಡತಿ ಮಾಡು

ವದರಿಂದ ಪ್ರಯೋಜನವಿಲ್ಲೆಂಬದೂ ಅವನಿಗೆ ಹೊಳೆಯಿತು. ಪೋಲೀಸ ಇನ್ಸ ಪೆಕ್ಟರನು ಉದ್ವೇಗಪೂರ್ಣದೃಷ್ಟಿಯಿಂದ ಬ್ಲೇಕನ ಮೋರೆಯ ಕಡೆಗೆ ನೋಡಿ ದನು. ಹರಕೋರ್ಟನು ಅತ್ಯಂತ ಗಾಬರಿಗೊಂಡವನಂತೆ ಅವರನ್ನು ತನ್ನ ವಾಚನಾಲಯದೊಳಗೆ ಕರೆದೊಯ್ದನು. ಅಲ್ಲಿ ಆತನ ಮನೆಯ ಆಳುಗಳೆಲ್ಲ ಶಯನದ ಉಡುಪಿನಿಂದ ನಿಂತುಕೊಂಡು ವಿಸ್ಮಯವ್ಯಾಕುಲದೃಷ್ಟಿಯಿಂದ ಆ ಮುರುಕ ತಿಜೋರಿಯನ್ನು ನೋಡುತ್ತಿದ್ದರು. ಆ ತಿಜೋರಿ ಒಡೆದಿತ್ತು. ಅದರ ನಾಲ್ಕೂ ಮೂಲೆಗಳಲ್ಲಿ ಬೆಂಕಿಯ ಸಹಾಯದಿಂದ ಒಂದೊಂದು ಗವಿಗಳೇ ಉಂ ಟಾಗಿದ್ದವು! ನೆಲದ ಮೇಲೆ ಕಳ್ಳರು ಬಿಟ್ಟಿದ್ದ ಬಗೆ ಬಗೆಯ ಶಸ್ತ್ರಾಸ್ತ್ರಗಳು!

ಬ್ಲೇಕನು ಅದನ್ನೆಲ್ಲ ಪರೀಕ್ಷಿಸಿ:—"ಇದಂತೂ ಕಸಬುಗಾರ ಕಳ್ಳರ ಕಾರ್ಯ!"

ನೇಭಿಲನು ತಲೆಯಲ್ಲಾಡಿಸುತ್ತ:—"ಕಳ್ಳತನದ ಪರಿಪಾಠವೇ ಗೊತ್ತಿಲ್ಲ; ಆದರೂ ಈ ಕಳವು ಕಸಬುಗಾರ ಕಳ್ಳರಿಂದಲೇ ಆಗಿರಬೇಕೆಂದು ನನಗೂ ಅನಿ ಸುತ್ತದೆ."

ಹರಕೋರ್ಟನು ವಾರ್ನೆ-ಜೋಸನರಿಂದ ಅಂದಿನ ಎಲ್ಲ ಸಂಗತಿಯನ್ನು ಕೇಳಿಕೊಂಡಿದ್ದನು; ಆದರೆ ಆತನು ಏನೂ ಅರಿಯದವನಂತೆ ನಟಿಸುತ್ತಾ ಬ್ಲೇಕನೊಡನೆ ಸಂಭಾಷಿಸುತ್ತಿದ್ದನು. ಬ್ಲೇಕನು ಇಷ್ಟು ರಾತ್ರಿಯಲ್ಲಿ ಪೋ ಲೀಸರೊಡನೆ ಯಾವ ಉದ್ದೇಶಕ್ಕಾಗಿ ತನ್ನ ಭೇಯಾರ ಸ್ಟ್ರೀಟಿಗೆ ಬಂದಿದ್ದ ನೆಂಬ ಬಗ್ಗೆ ಆತನು ಬೇಕೆಂತಲೇ ಕೇಳಲಿಲ್ಲ. ಅವನು ತನ್ನ ಮನೆಯ ಕಳವಿನ ಬಗ್ಗೆಯೇ ಮತ್ತೆ ಹೇಳಹತ್ತಿದನು:-"ಆಕಸ್ಮಿಕವಾಗಿ ದೊಡ್ಡ ಸಪ್ಪಳವಾಗಹತ್ತಿದ್ದ ರಿಂದ ನನ್ನ ನಿದ್ರೆಯು ಹರಿಯಿತು; ಆ ಕೂಡಲೆ ನಾನು ನನ್ನ ಮೇಲುಪ್ಪರಿ ಗೆಯ ಮೇಲಿನ ಮಲಗುವ ಕೋಣೆಯಿಂದ ಕೆಳಗಿಳಿದು ಬಂದೆನು. ಇಲ್ಲಿ ನಾನು ಬಂದ ಕೂಡಲೆ ಏನು ನೋಡಿದೆನೋ, ತಾವುಗಳಾದರೂ ಈಗ ಅದನ್ನೇ ನೋ ಡುತ್ತಿರುವಿರಿ. ನಾನು ಇಲ್ಲಿಗೆ ಬರುವಷ್ಟರಲ್ಲಿ ಕಳ್ಳರು ಪಲಾಯನ ಹೇಳಿಸಿದ್ದರು. ಕರನ್ಸಿನೋಟು ಹಾಗು ಗಿನಿ ಹೀಗೆ ಒಟ್ಟು ನನ್ನಲ್ಲಿಯ ಸುಮಾರು ಐನೂರು ಪೌಂಡು ಕಳವಾಗಿ ಹೋಗಿವೆ."

ಬ್ಲೇಕ:—"ಮತ್ತೇನೇನು ಹೋಗಿದೆ?"

ಹರಕೋರ್ಟನು:—"ಮತ್ತೇನೂ ಕಳವಾಗಿಲ್ಲ. ಬರೀ ನಗದು ಹಣವೇ ಹೋಗಿದೆ."

ಬ್ಲೇಕ:—"ಕಳ್ಳರು ನಿಮ್ಮ ಮನೆಯನ್ನು ಎತ್ತಣಿಂದ ಹೊಕ್ಕರು? ಈ ಬಗ್ಗೆ ನೀವೇನಾದರೂ ತಿಳಕೊಂಡಿರುವಿರಾ?"

ನೇಭಿಲ:—"ಅವರು ಉಪವನದ ಗೋಡೆಯನ್ನೇರಿ ಬಂದು ಅಡಿಗೆಯ ಮನೆಯ ಕಿಟಕಿ ಮುರಿದು ಒಳಹೊಕ್ಕಿರುವರು; ಮತ್ತು ಅವರು ಬಹುಶಃ ಅದೇ ಮಾರ್ಗದಿಂದ ಹೊರಗೆ ಹೋಗಿರಬೇಕೆಂದು ಅನಿಸುತ್ತದೆ."

ಪೋಲೀಸ ಇನ್ಸಪೆಕ್ಟರನು ಮತ್ತೊಮ್ಮೆ ವಿಹ್ವಲ ದೃಷ್ಟಿಯಿಂದ ಬ್ಲೇಕನ ಕಡೆಗೆ ಇಣುಕಿದನು.

ಇನ್ಸಪೆಕ್ಟರನು ಹರಕೋರ್ಟನ ಸವಿಮಾತಿಗೆ ಮರುಳಾಗಿರುವನೆಂದು ಬ್ಲೇಕನು ತಿಳಿದನು. ಲೇಡಿ ಹೆಜೆಲಾಡಳ ಅಲಂಕಾರಗಳು ಈ ತಿಜೋರಿ ಯಲ್ಲೇ ಇದ್ದವೆಂಬ ಬಗ್ಗೆ ಬ್ಲೇಕನಿಗೀಗ ಯಾವ ಸಂದೇಹವೂ ಉಳಿಯಲಿಲ್ಲ; ಆದರೆ ಅದನ್ನು ಆಡಿ ತೋರಿಸುವದು ನಿಷ್ಫಲವೆಂದು ತಿಳಿದು ಅವನು ಆ ಪ್ರ ಸಂಗದಲ್ಲಿ ಏನನ್ನೂ ಒಡನುಡಿಯಲಿಲ್ಲ. ಬ್ಲೇಕನು ಅತ್ತಿತ್ತ ನೋಡುತ್ತಿರುವಾಗ ಹರಕೋರ್ಟನ ಕೈ ಬೆರಳುಗಳಿಗೆ ಗುಳ್ಳೆಗಳೆದ್ದಿರುವವೆಂಬದನ್ನು ದೃಷ್ಟಿಸಿದನು. ಆ ಬೆರಳುಗಳೆಲ್ಲ ಹೆಚ್ಚು ಕೆಂಪಗಾಗಿದ್ದು, ಒಂದು ಬೊಟ್ಟಿಗೆ ತೂತೇ ಬಿದ್ದಿತ್ತು!

ಬ್ಲೇಕನು ಹರಕೋರ್ಟನನ್ನುದ್ದೇಶಿಸಿ:—"ನೀವು ಈ ತಿಜೋರಿಯನ್ನು ಕೊನೆಯ ಬಾರೆ ತೆರೆದದ್ದಾವಾಗ?"

ಹರಕೋರ್ಟ:—"ನಿನ್ನೆ. ಆ ಮೇಲೆ ಈ ತಿಜೋರಿಯ ಕೀಲಿಯು ಹೇಗೋ ಕೆಟ್ಟು ಹೋಯಿತು. ನಾನಿದನ್ನು ನಾಳೆಗೆ ರಿಪೇರಿ ಮಾಡಿಸಿಕೊಳ್ಳ ಬೇಕೆಂದಿದ್ದೆ."

ಬ್ಲೇಕ:—"ನೀವು ಇಂದು ರಾತ್ರಿಯೂ ಈ ತಿಜೋರಿ ತೆರೆಯಲಿಕ್ಕೆ ಸಾಧ್ಯ ವಾದಷ್ಟು ಪ್ರಯತ್ನಿಸಿದ್ದಿರಾ?"

ಹರಕೋರ್ಟ:—"ಆ ಸಂಗತಿಯೂ ನಿಜ. ನಾನು ಮಲಗಲಿಕ್ಕೆ ಹೋ ಗುವ ಮೊದಲು ಮತ್ತೊಮ್ಮೆ ತಿಜೋರಿ ತೆಗೆಯಬೇಕೆಂದು ಪ್ರಯತ್ನಿಸಿದ್ದೆನು. ಈ ತಿಜೋರಿಯಲ್ಲಿ ಕೆಲ ಮಹತ್ವದ ಕಾಗದ ಪತ್ರಗಳಿದ್ದವು. ಅವುಗಳನ್ನು ಹೊರಗೆ ತೆಗೆಯುವದು ಅವಶ್ಯವಾಗಿತ್ತು."

ಆ ಮೇಲೆ ಬ್ಲೇಕನು ಪೋಲೀಸ ಇನ್ಸಪೆಕ್ಟರನೊಡನೆ ಹರಕೋರ್ಟನ ಉಪವನದ ಕಡೆಗೂ ಅಡಿಗೆಯ ಮನೆಯ ಕಡೆಗೂ ತೆರಳಿದನು. ಅಲ್ಲಿ ಸೂಕ್ಷ್ಮ ವಾಗಿ ನಿರೀಕ್ಷಿಸಲು ಉಪವನದಲ್ಲಿ ಹೆಜ್ಜೆಗಳು ಮೂಡಿರುವಂತೆಯೂ ಅಡಿಗೆ ಮನೆಯ ಕಿಟಕಿಯು ಮುರಿದಿರುವಂತೆಯೂ ಕಾಣಿಸಿತು. ಅವರು ಆ ವಾಚನಾ ಲಯಕ್ಕೆ ಮರಳಿ ಬಂದು ನೋಡಲು ನೇಭಿಲನ ಆಳು-ಹೋಳುಗಳಾರೂ ಅಲ್ಲಿ ರಲಿಲ್ಲ. ಹರಕೋರ್ಟನು ಮಾತ್ರ ಒಂದು ಆರಾಮಿ ಖುರ್ಚಿಯ ಮೇಲೆ ಬಿದ್ದು ಕೊಂಡು ನಿಶ್ಚಿಂತ ಮನಸ್ಸಿನಿಂದ ಚಿರೂಟ ಸೇದುತ್ತಿದ್ದನು.

ಬ್ಲೇಕ ಮತ್ತು ಪೋಲೀಸ ಇನ್ಸಪೆಕ್ಟರರು ಮರಳಿ ಬಂದುದನ್ನು ಕಂಡು ನೇಭಿಲನು:—"ನನ್ನ ನಗದು ಹಣ ಹೋದರೆ ಹೋಗಲಿ; ಆ ಬಗ್ಗೆ ನನಗೆ ವಿಶೇಷ ದುಃಖವಿಲ್ಲ. ಐನೂರು ಪೌಂಡಷ್ಟೇ? ಅದೇನು ದೊಡ್ಡ ರಕಮು! ಆದರೆ ಆ ಕಳ್ಳರು ಹಿಡಿಯಲ್ಪಟ್ಟರೆ ನಾನು ಸುಖಿಯಾಗುವೆನು. ತಾವು ಅವರನ್ನು ಹಿಡಿದುಕೊಟ್ಟು ನನ್ನ ಮನಸ್ಸಿಗೆ ಶಾಂತಿಯನ್ನುಂಟು ಮಾಡುವಿರೆಂದು ನಂಬುತ್ತೇನೆ."

ಬ್ಲೇಕನು ತೀಕ್ಷ್ಣನಜರಿನಿಂದ ನೇಭಿಲನ ಮುಖದ ಕಡೆಗೆ ನಿರೀಕ್ಷಿಸಿ ಕ್ಷಣಮಾತ್ರವೇ ನಿಸ್ತಬ್ಧನಾದನು. ಆ ಮೇಲೆ ಆತನು ಸುಸ್ಪಷ್ಟವಾಗಿ ಹೇಳಿದನೇನಂದರೆ:—"ನಾನು ಅವರನ್ನು ಪತ್ತೆ ಹಚ್ಚಿ ಕೊಡುವೆನು. ಈ ಬಗ್ಗೆ ನೀವು ನಿಶ್ಚಿಂತರಾಗಿರ್ರಿ; ಇಷ್ಟೇ ಅಲ್ಲ, ಯಾವ ಕಳ್ಳರು ದಯವಿಟ್ಟು ನಿಮ್ಮ ಮೇಲೆ ಈ ಉಪಕಾರ ಮಾಡಿ ಹೋಗಿರುವರೋ, ನನಗವರ ಹೆಸರು ಕೂಡ ಗೊತ್ತಿದೆ."

ನೇಭಿಲ ಹರಕೋರ್ಟನು ನಗೆಚೇಷ್ಟೆಗಾಗಿ:—"ಹಾಗಲ್ಲವೇ? ಗೊತ್ತಿರದ್ದರೆ ನೀವು ಈ ಬಗೆಯ ಬೊಟ್ಟುತೋರಿಸುವಂತಹ ಪ್ರಸಿದ್ಧ ಪತ್ತೆದಾರರಾಗುತ್ತಿದ್ದಿರಾ?"

ಬ್ಲೇಕನು ದೃಢಸ್ವರದಿಂದ:—"ಬೊಟ್ಟು ತೋರಿಸಲಿ-ತೋರಿಸದಿರಲಿ; ಆ ಕಳ್ಳರ ಮುಖಂಡನಾರೆಂಬದನ್ನು ಕೂಡ ಹೇಳಬಲ್ಲೆನು."

ಹರಕೋರ್ಟನು ಉಪಹಾಸದ ನಗೆ ನಕ್ಕು:—"ಮಹಾನುಭಾವರ ಮಾತಿನ ಮರ್ಮವು ತಿಳಿಯದಂತಿವೆ.

ಬ್ಲೇಕ:—"ಆ ಮರ್ಮವು ಇಂದು ತಿಳಿಯದಿದ್ದರೂ ತಿಳಿಯದಿರಲಿ; ಆದರೆ ಮುಂದೊಂದು ದಿನ ಅದು ತಾನೇ ತಿಳದೀತು. ನನ್ನ ಮಾತು ನಿಮಗೆ ತಿಳದಿದೆಯೋ ಇಲ್ಲವೋ ಎಂಬದು ನಿಮ್ಮ ಮನಸ್ಸಿಗೇ ಗೊತ್ತು. ಇನ್ಸಪೆಕ್ಟರರೇ, ನಡೆಯಿರಿನ್ನು ಹೊರಡೋಣ."

ಇನ್ಸಪೆಕ್ಟರನು ಅತ್ಯಂತ ಕ್ಷುಬ್ಧನೂ ತ್ರಸ್ತನೂ ಆಗಿ ಬ್ಲೇಕನೊಡನೆ ಬೀದಿಗೆ ಬಂದನು. ಆ ಮೇಲೆ ಬ್ಲೇಕನನ್ನುದ್ದೇಶಿಸಿ:—"ನಿಮಗೆ ಭ್ರಮವಾಗಿದೆಯೆಂದು ನಾನು ಮೊದಲೇ ಹೇಳಿರಲಿಲ್ಲವೇ? ನೀವು ಸುಮ್ಮಸುಮ್ಮನೆ ಈ ಗೊಂದಲವನ್ನೆಬ್ಬಿಸಿರುತ್ತೀರಿ. ಈ ಪ್ರಕರಣವು ಮತ್ತಿಲ್ಲಿಯ ವರೆಗೆ ಜಗಿಯುವುದೋ ತಿಳಿಯದು."

ಬ್ಲೇಕ:-"ಯಾವ ಗೊಂದಲವೂ ಆಗುವದಿಲ್ಲ. ನಾವು ಈಗ ಈ ರಾಸ್ಕಲ್ಲನಿಂದ ಮೋಸಗೊಂಡಿರುತ್ತೇವೆಂಬುದೇ ಶೋಚನೀಯ ಸಂಗತಿಯು! ಇಂದು

ಅವನ ಸಂಗಡಿಗರು ಅವನನ್ನು ಜಾಗ್ರತಪಡಿಸಿರಬೇಕು, ಇಲ್ಲವೆ ನಾನು ಇತ್ತ ಬಂದುದನ್ನು ಅವನು ನೋಡಿರಬೇಕು. ಆ ಕೂಡಲೆ ಅವನು ತಿಜೋರಿಯೊಳಗಿನ ಕಳವಿನ ಮಾಲನ್ನು ಫರಾರಿಮಾಡಬೇಕೆಂದು ನಿರ್ಧರಿಸಿ ತಿಜೋರಿಯನ್ನು ತೆರೆಯ ಹೋಗಿರಬೇಕು, ಆದರೆ ಆಗ ಅದು ಒಮ್ಮೆಲೆ ಕೆಟ್ಟಿದ್ದರಿಂದ ತೆರೆದಿರಲಿಕ್ಕಿಲ್ಲ. ಕೂಡಲೆ ಇವನು ಆ ಕಳ್ಳರಿಬ್ಬರನ್ನು ಕರೆತಂದು ಆ ತಿಜೋರಿಯನ್ನು ಒಡೆಸಿರಬೇಕು; ಹಾಗು ಅವರ ಮುಖಾಂತರ ಅದರೊಳಗಿನ ಕಳವಿನ ಮಾಲನ್ನು ಫರಾರಿ ಮಾಡಿಸಿರಬೇಕು. ನಾವು ಯಾವಾಗ ಇಲ್ಲಿಗೆ ತಲುಪಿದೆವೋ ಆಗ ಆ ಕಳ್ಳರು ಇಲ್ಲಿಂದ ಖಂಡಿತವಾಗಿಯೂ ಬಹು ದೂರ ಹೋಗಿರಲಾರರು. ಇನ್ನು ಮೇಲೆ ನಾವು ಅವರನ್ನೇ ಮೊದಲು ಹಿಡಿಯಬೇಕು."

ಇನ್ಸಪೆಕ್ಟರನು ಗೋಣನ್ನಲ್ಲಾಡಿಸಿ: –ಆ ಕೆಲಸವು ಸಹಜವಾದುದಲ್ಲ. "ಒಳ್ಳೇದು-ನೋಡೋಣ" ಎಂದಂದು, ಬ್ಲೇಕನು ಇನ್ಸಪೆಕ್ಟರನ ಅಪ್ಪಣೆ ಪಡೆದು ಚಿಂತಾತುರನಾಗಿ ಮನೆಗೆ ಹಿಂದಿರುಗಿದನು. ಬ್ಲೇಕನು ಎಷ್ಟೋ ದಿನಗಳಲ್ಲಿ ಈ ಬಗೆಯ ಫಜೀತಿ ಪಟ್ಟಿರಲಿಲ್ಲ.

---

## ಒಡೆಯಾ, ಮುಳುಗುತ್ತಿರುವೆನು; ರಕ್ಷಿಸು-ರಕ್ಷಿಸು!

ಹೊರಾಯಿಟ್ ಚ್ಯಾಂಪೇಲ ರೇಲ್ವೇ ಸ್ಟೇಶನ್ನಿನ ತಿಕೀಟ ಕಲೆಕ್ಟರನ ಮೂಲಕ ಬ್ಲೇಕನು ಆ ಇಬ್ಬರು ಕಳ್ಳರ ಹಾಗು ಅವರು ಸ್ಮಿತ್ಥನನ್ನು ಹಾಕಿಕೊಂಡು ಹೋದ ಗಾಡಿಯ ಕೋಚಮನ್ನನ ಮುಖಭಾವಗಳ ಬಗ್ಗೆ ಏನೇನು ತಿಳಿದಿದ್ದನೋ ಅವನ್ನೇ ಮನಸ್ಸಿನಲ್ಲಿಟ್ಟುಕೊಂಡು ಕಳೆದ ಮೂರು ದಿನಗಳಿಂದಲೂ ಅವನು ಆ ಭಾಗದಲ್ಲಿ ಪತ್ತೆ ಹಚ್ಚತೊಡಗಿದ್ದನು; ಆದರೆ ಆತನು ಲಂಡನ್ನಿನ ಆ ಈಸ್ಟ ಎಂಡದೊಳಗಿನ ಗಾಡಿಗಳ ಅನೇಕ ಅಡ್ಡೆಗಳನ್ನು ಸುತ್ತಾಡಿದರೂ ಅವನಿಗೆ ಆ ಕೋಚಮನ್ನನ ಬಗ್ಗೆ ಸ್ವಲ್ಪ ಸುಳಿವೂ ಹತ್ತಲಿಲ್ಲ. ಅವನು ಮೊದಲು ಅನುಮಾನಿಸಿದ್ದನೇನಂದರೆ, ಆ ಕಳ್ಳರಿಬ್ಬರೂ ಕೂಡಿ ಸ್ಮಿತ್ಥನನ್ನು ಕದ್ದೊಯ್ದರೂ ಅವರು ಅವನನ್ನು ಕೊಲ್ಲಲಾರರು. ಏನಾದರೂ ಅವನ ಜೀವಕ್ಕೆ ಭಯವಿಲ್ಲ; ಆದರೆ ಮೂರು ದಿನಗಳ ಪರಿಶ್ರಮದ ನಂತರವೂ ಸ್ಮಿತ್ಥನ ಬಗ್ಗೆ ಯಾವ ಸಂಧಾನವೂ ಹತ್ತದ್ದರಿಂದ ಬ್ಲೇಕನು ಅತ್ಯಂತ ಚಿಂತಿತನಾದನು.

ಮೂರನೇ ದಿವಸ ಮೂರೂ ಸಂಜೆಗೆ ಅವನು ಒಂದೆರಡು ಹ್ಯಾರಿಕೆಯ ಮಾತನ್ನೇ ನಂಬಿಕೊಂಡು, ಅದೆಷ್ಟೋ ಬಾಡಿಗೆಯ ಮನೆಗಳಲ್ಲಿ ಅನುಸಂಧಾನ

ನಡೆಸಿದನು. ಆ ಮನೆಗಳೆಲ್ಲ ಟೇಮ್ಸ ನದಿಗೆ ಹೊಂದಿ ಕಮರ್ಶಿಯಲ್ ರೋಡಿನಲ್ಲಿದ್ದವು. ಕೊನೆಗೆ ಬ್ಲೇಕನು ಒಂದು ಮನೆಯ ಎದುರಿಗೆ ಹೋಗಿ ಮುರುಕ ನಿಚ್ಚಣಿಕೆಯ ಮೂಲಕ ಮೇಲಂತಸ್ತಿಗೆ ಹೋದನು; ಹಾಗು ಅಲ್ಲಿಯಮೊಂದು ಬಾಗಿಲು ದೂಡಿ ಒಂದು ಅಸ್ವಚ್ಛವಾದ ಚಿಕ್ಕ ಕೋಣೆಯನ್ನು ಹೊಕ್ಕನು. ಆ ಕೋಣೆಯಲ್ಲಿ ಸ್ಥೂಲ ದೇಹದ, ಗಾಡಿಯವ ನಂತಹ ಮುಖಭಾವವುಳ್ಳವನೊಬ್ಬನು ಒಂದು ಮೇಜಿನ ಬಳಿ ಕುಳಿತು ಊಟಮಾಡುತ್ತಿದ್ದನು; ಹಾಗು ಇನ್ನೊಬ್ಬ ಪ್ರೌಢ ಸ್ತ್ರೀಯು ಒಲೆಯ ಹತ್ತಿರ ಕುಳಿತು ಹಂದಿಯ ಮಾಂಸವನ್ನು ಬೆಯ್ಯಿಸುತ್ತಿದ್ದಳು. ತಾವು ದರಿದ್ರರು; ತಮ್ಮ ಮನೆಗೆ ಒಬ್ಬ ಮಾನ್ಯವಂತ ಗೃಹಸ್ಥನು ಆಕಸ್ಮಿಕವಾಗಿ ಬಂದುದನ್ನು ಕಂಡು, ಅತ್ಯಂತ ವಿಸ್ಮಯಗೊಂಡು ಅವರಿಬ್ಬರೂ ಒಮ್ಮೆಲೆ ಬ್ಲೇಕನ ಮುಖದ ಕಡೆಗೆ ಟಕಮಕವೆಂದು ನೋಡಹತ್ತಿದರು.

ಆಗ ಬ್ಲೇಕನೇ ಮಾತಿಗೆ ಪ್ರಾರಂಭಿಸಿ:—"ನನ್ನನ್ನು ರಾಬರ್ಟ ಬ್ಲೇಕನೆಂಬೆನ್ನುವರು."

ಆ ಹೆಸರು ಅವರಿಬ್ಬರಿಗೂ ಚೆನ್ನಾಗಿ ಪರಿಚಿತವಾಗಿದ್ದಿತು. ರಾತ್ರಿಯ ಹೊತ್ತಿನಲ್ಲಿ ತಮ್ಮ ಮನೆಗೆ ಪ್ರಸಿದ್ಧ ಪತ್ತೆದಾರನು ಆಗಮಿಸಿದ್ದರಿಂದ ಅವರೀರ್ವರೂ ಹೆಚ್ಚಾಗಿ ಅಂಜಿದರು. ಆ ಸ್ತ್ರೀಯ ಮುಖವು ಗಾಬರಿಯಿಂದ ಬತ್ತಿ ಹೋಯಿತು. ಗಂಡಸಿನ ಕೈತುತ್ತು ಬಾಯಿಗೆ ಬೀಳಲಿಲ್ಲ. ಇಬ್ಬರೂ ಸ್ತಬ್ಧರಾದರು.

ಆಗ ಬ್ಲೇಕನೇ ಮತ್ತೆ:—"ಜಾರ್ಭಿಸ್, ನಿನ್ನಿಂದೊಂದು ಸಂಗತಿ ತಿಳಿಯಲಪೇಕ್ಷಿಸಿ ಇಲ್ಲಿಗೆ ಬಂದಿರುತ್ತೇನೆ. ಕಳೆದ ಶನಿವಾರ ರಾತ್ರಿಯಲ್ಲಿ ವಾರ್ನೆ ಮತ್ತು ಜೋಸನರೆಂಬ ಹೆಸರಿನ ಇಬ್ಬರು ಪ್ರಸಿದ್ಧ ಕಳ್ಳರು ನಮ್ಮ ಮನೆಯ ಒಬ್ಬ ಪೋರನನ್ನು ಕದ್ದು ತಂದು ನಿನ್ನ ಮನೆಯಲ್ಲಿ ಬಚ್ಚಿಟ್ಟಿರುತ್ತಾರೆ."

ಜಾರ್ಭಿಸ್ಸನು ತನ್ನ ಮೋರೆಯನ್ನೊರೆಸಿಕೊಂಡು ಬಹು ಸಭ್ಯ ಮನುಷ್ಯನಂತೆ:—"ತಾವು ಏನು ಅನ್ನುತ್ತಿರುವಿರೋ ನನಗದು ತಿಳಿಯದಾಗಿದೆ."

ಬ್ಲೇಕ:—"ಹೀಗೆ ಮೂರ್ಖನಂತೇಕೆ ಮಾಡುವೆ? ನಿಜವಾದುದನ್ನು ಹೇಳು."

ಜಾರ್ಭಿಸ್ಸನು ತನ್ನ ಕಣ್ಣುಗಳನ್ನು ಮೇಲಕ್ಕೇರಿಸಿ:—"ನನಗೇನೂ ಗೊತ್ತಿಲ್ಲ. ತಾವು ಭ್ರಮದಿಂದ ನಮ್ಮ ಮನೆಗೆ ಬಂದಿರುತ್ತೀರಿ."

ಬ್ಲೇಕ:—"ಇಲ್ಲ; ನನಗೆ ಭ್ರಮೆಯಾಗಿಲ್ಲ. ನೀನೇ ಸುಳ್ಳು ಹೇಳಿ ನನ್ನನ್ನು ಮೋಸಪಡಿಸಲು ಯತ್ನಿಸುತ್ತಿರುವೆ; ಆದರೆ ನನ್ನೆದುರಿಗೆ ಈ ನಿನ್ನ

ಹುಡುಗಾಟಿಕೆಯು ನಡೆಯದು. ನಿಜ ಹೇಳಿದರೆ ಅಂಜಿಕೆಯಿಲ್ಲ. ಜಾರ್ಭಿಸ್ಸ, ಸತ್ಯವನ್ನು ಹೇಳು. ಆ ಇಬ್ಬರು ಪ್ರಸಿದ್ಧ ಕಳ್ಳರು ಆ ನಮ್ಮ ಹುಡುಗನನ್ನು ಹೊರಾಯಿಟ ಚ್ಯಾಂಪೇಲ ರೇಲ್ವೇ ಸ್ಟೇಶನ್ನಿನಲ್ಲಿ ಕದ್ದು ನಿನ್ನ ಗಾಡಿಯಲ್ಲಿ ಹಾಕಿಕೊಂಡು ಬಂದಿರುತ್ತಾರೆಂಬದನ್ನು ನಾನು ಖಾತ್ರಿಪೂರ್ವಕ ತಿಳಿದಿರುತ್ತೇನೆ. ನೀನು ಅವನನ್ನೆಲ್ಲಿಗೆ ತಲುಪಿಸಿ ಬಂದೆಯೆಂಬುವದನ್ನು ಬೇಗನೆ ತಿಳಿಸು."

ಜಾರ್ಭಿಸ್ಸ:—"ಬ್ಲೇಕರೇ, ಅಲ್ಲ; ಆ ಗಾಡಿಯು ಖಂಡಿತವಾಗಿಯೂ ನನ್ನದಲ್ಲ-"

ಬ್ಲೇಕನು ರೋಷಗೊಂಡು:—"ಈಗಲೂ ಒಪ್ಪುವದಿಲ್ಲವೆ? ನಾನಾರೆಂಬದನ್ನು ಯೋಚಿಸಿ ನೋಡು ಹೆಚ್ಚು ವಾದಿಸಬೇಡ. ನೀನೀಗ ಒಪ್ಪದಿದ್ದರೆ ನಿನ್ನನ್ನು ರೇಲ್ವೆ ಸ್ಟೇಶನ್ನಿಗೆ ಹಿಡಿದೊಯ್ಯುತ್ತೇನೆ. ಅಲ್ಲಿಯ ತಿಕೀಟು ಕಲೆಕ್ಟರನೇ ಮೊದಲಾದವರು ನಿನ್ನನ್ನು ಯಾವಾಗ ಗುರ್ತಿಸುವರೋ, ಆಗ ನಿನಗೆ ಪಾರಾಗಲು ಮಾರ್ಗವುಳಿವುದೆ?"

ಬ್ಲೇಕನ ನುಡಿಗಳಿಂದ ಜಾರ್ಭಿಸ್ಸನು ಭಯದಿಂದ ನಡುಗಹತ್ತಿದನು. ಕ್ಷಣಮಾತ್ರವೇ ತನ್ನ ಬಾಯಲ್ಲೇ ಏನೇನೋ ಗುಣಗುಟ್ಟಿದನು. ಅವನ ಅವಸ್ಥೆಯನ್ನು ಕಂಡು ಆತನ ಹೆಂಡತಿಯು ಒಲೆಯ ಬಳಿಯಿಂದ ಎದ್ದು ಬಂದು ಜಾರ್ಭಿಸ್ಸನ ಹೆಗಲ ಮೇಲೆ ಕೈಯಿರಿಸಿ ಕಣ್ಣಲ್ಲಿ ನೀರು ತಂದುಕೊಂಡು: "ಕಾಂತನೇ, ನೀನು ಅಪರಾಧವನ್ನೇ ಮಾಡಿದ್ದಾದರೆ ಅದನ್ನು ಬಚ್ಚಿಕೊಳ್ಳದೆ ಈ ದೊಡ್ಡ ಮನುಷ್ಯರೆದುರಿಗೆ ಒಪ್ಪಿಕೋ. ಇವರು ಮಹಾನುಭಾವರು: ನಿಜ ಸಂಗತಿ ತಿಳಿಸಿದರೆ ಇವರು ನಿನಗಾವ ಅನಿಷ್ಟವನ್ನೂ ಬಗೆಯಲಾರರು," ಎಂದು ಹೇಳಿದಳು.

ಆಗ ಬ್ಲೇಕನು ಆ ಹೆಣ್ಣುಮಗಳ ಕಡೆಗೆ ಹೊರಳಿ:—"ತಾಯಿ, ನೀನು ಸರಿಯಾಗಿಯೇ ಹೇಳಿದೆ. ನಿನ್ನ ಗಂಡನು ನಿಜ ಸಂಗತಿ ತಿಳಿಸಿದರೆ, ನಾನು ಇವನಿಗಾವ ಕೇಡನ್ನೂ ಬಗೆಯೆನು."

ಜಾರ್ಭಿಸ್ಸನು ಕೆಲ ಹೊತ್ತು ಯೋಚಿಸಿ:—"ನೀವು ನನಗೆ ಯಾವ ಅನಿಷ್ಟವನ್ನೂ ಬಗೆಯಲಾರಿರೆಂದೆನ್ನುತ್ತಿರಲು, ಇನ್ನು ನಿಜ ಸಂಗತಿ ತಿಳಿಸಲು ಭಯವೇನು? ನಾನು ನಿಮಗೆ ಎಲ್ಲವನ್ನೂ ಬಿಚ್ಚಿ ಹೇಳುತ್ತೇನೆ. ವಾರ್ನೆ-ಜೋಸನರು ನನ್ನ ಗಾಡಿಯನ್ನು ಬಾಡಿಗೆಗೆ ಗೊತ್ತು ಮಾಡಿಕೊಂಡು ಹೊರಾಯಿಟ ಚ್ಯಾಂಪೇಲ ರೇಲ್ವೇ ಸ್ಟೇಶನ್ನಿಗೆ ಕರೆದೊಯ್ದಿದ್ದರು. ಆ ಮೇಲೆ ಅವರು ಒಬ್ಬ ಪೋರನನ್ನು ಅಚೇತನ ಸ್ಥಿತಿಯಲ್ಲಿ ನನ್ನ ಗಾಡಿಗೆ ತಂದು ಹಾಕಿ ಗಾಡಿಯನ್ನು

ಬಿಡತೇಳಿದರು. ಆ ಹುಡುಗನು ಅವರ ಸಂಬಂಧಿಕನೆಂದೂ ಅವನು ಸ್ಟೇಶನ್ನಿ ನಲ್ಲಿ ಒಮ್ಮೆಲೆ ಅಸ್ವಸ್ಥನಾದನೆಂದೂ ಅವರಿಂದ ತಿಳಿದಿರುತ್ತೇನೆ.

ಬ್ಲೇಕ:—"ಇದೆಲ್ಲ ಸುಳ್ಳೆಂಬದನ್ನು ನೀನು ಬಲ್ಲೆ. ಅವರೇ ಆ ಹುಡುಗನ ತಲೆಯ ಮೇಲೆ ಹೊಡೆದು ಅಚೇತನಗೊಳಿಸಿರುವರು."

ಜಾರ್ಭಿಸ್ಸ:—"ಇಲ್ಲ, ಅವರು ಸುಳ್ಳುಹೇಳುವರೆಂಬದನ್ನು ನಾನಾಗ ತಿಳಿದಿರಲಿಲ್ಲ ಆದರೂ ನನಗೆ ಕೊಂಚ ಸಂದೇಹವೇ ಎನಿಸಿತೆನ್ನಿ. ನಾನು ಆ ಗೊಂದಲದಲ್ಲಿ ಬೀಳಲಾರೆನೆಂದು ಹೇಳಲು, ವಾರ್ಣಿಯು ಆಣೆ ಮಾಡಿ ಹೇಳಿರುವದೇನಂದರೆ—ತಾವು ಆ ಹು ಡು ಗ ನಿ ಗೆ ಯಾವ ಅನಿಷ್ಟವನ್ನೂ ಬಗೆಯಲಾರೆವೆಂದು.

ಬ್ಲೇಕ:—"ಜಾರ್ಭಿಸ್ಸ, ಅವನನ್ನೆಲ್ಲಿಗೆ ತಲುಪಿಸಿ ಬಂದೆಯೆಂಬದನ್ನಷ್ಟು ತಿಳಿಸು. ನಾನು ನಿನ್ನ ಬೇರೆ ಹರಟೆಯನ್ನು ಕೇಳಲಿಚ್ಛಿಸುವದಿಲ್ಲ.

ಜಾರ್ಭಿಸ್ಸ:—"ಬಹಳ ದೂರವಿಲ್ಲ. ಓಯಾರ್ಟ ಲೇನಿನ ಬಳಿಯ ಕೂಟ ನಲ್ಲಿರುವ 'ಏಶಿಯಾ ಹೋಮ'ನಲ್ಲಿಳಿಸಿ ಬಂದೆನು.

ಬ್ಲೇಕ:—"ಆ ಸ್ಥಳವು ಗೊತ್ತಾಯಿತು. ಅಲ್ಲೊಂದು ಪ್ರಾಚೀನ ನೆಲ ಮನೆಯಿದೆಯಲ್ಲವೇ?

ಜಾರ್ಭಿಸ್ಸ:—ಮಹಾಶಯರೇ, ಅಹುದು. ಆ ನೆಲಮನೆಯು ಎಷ್ಟೋ ದಿನಗಳಿಂದ ತೆರವಿದೆ.

ಬ್ಲೇಕ:—ವಾರ್ಣಿ-ಜೋಸನರ ವಾಸಸ್ಥಳವೆಲ್ಲಿ?

ಜಾರ್ಭಿಸ್ಸ:—"ಅದನ್ನು ಅರಿಯೆನು. ಕಳ್ಳರ ವಾಸಸ್ಥಳ, ಕಳ್ಳರ ಸಂಗತಿ ಇವು ನನಗರಿಯವು. ಅವರು ದಾರಿಯಲ್ಲೇ ನನ್ನ ಗಾಡಿಯನ್ನು ತರುಬಿ ಗಾಡಿ ಯಿಂದಿಳಿದು ಎತ್ತೋ ಹೊರಟು ಹೋದರು.

ಬ್ಲೇಕ:—ನೀನವರಿಂದ ಬಾಡಿಗೆ ಪಡೆದುದೆಷ್ಟು?

ಜಾರ್ಭಿಸ್ಸ:—ಸಾಮಾನ್ಯಕ್ಕಿಂತ ಹೆಚ್ಚು. ಒಟ್ಟಿಗೆ ಎರಡೂವರೆ ಶಿಲ್ಲಿಂಗ ಬಾಡಿಗೆಯು ಅಂದು ನನಗೆ ದೊರೆಕಿತು.

ಬ್ಲೇಕ:—"ಮನುಷ್ಯನನ್ನು ಕಳವು ಮಾಡಿದ ಸಹಾಯಕರಿಗೆ ಎಷ್ಟು ದಿನಗಳ ಕಾರಾಗ್ರಹವಾಗುವದೆಂಬದನ್ನು ನೀನರಿತಿರುವೆಯಾ?

ಜಾರ್ಭಿಸ್ಸನು ಭಯಕಂಪಿತನಾಗಿ:—"ನಿಜ ಸಂಗತಿ ತಿಳಿಸಿದರೆ ನನಗಾವ ಭಯವೂ ಇಲ್ಲೆಂದು ತಾವು ಹೇಳಿದ್ದಿರಿ. ಹೀಗಿದ್ದು ಈಗ ಇದೇನನ್ನು ಅನ್ನು ತ್ತಿರುವಿರಿ? ಹಾಗಾದರೆ ನಿಮ್ಮ ಮಾತಿಗೇನೂ ಬೆಲೆಯೇ ಇಲ್ಲವೆ?"

ಬ್ಲೇಕ:—"ಇದೆ; ನನ್ನ ಮಾತಿಗೆ ವಿಶೇಷ ಬೆಲೆಯಿದೆ. ನನ್ನಿಂದ ನಿನ

ಗಾವ ಕೇಡೂ ಆಗಲಾರದು; ಆದರೆ ನ್ಯಾಯಾಲಯದಲ್ಲಿ ನೀನು ಆ ಕಳ್ಳರಿಬ್ಬರ ವಿರುದ್ಧ ಸಾಕ್ಷಿ ಕೊಡಬೇಕಾಗುವದು. ಆಗ ನೀನು ನಿಜ ಸಂಗತಿ ಹೇಳದಿದ್ದರೆ ಮಾತ್ರ ನಿನಗೆ ಮಹಾ ಸಂಕಟವೊದಗುವವೆಂಬದು ಖಂಡಿತವೆಂದು ನಂಬು."

ಹೀಗೆಂದು ಹೇಳಿ ಬ್ಲೇಕನು ಜಾರ್ಭಿಸ್ಸನ ಮನೆಯಿಂದ ಹೊರಟು ಸರಾಸರಿ ನೂರು ಗಜ ನಡೆದ ಮೇಲೆ ಒಂದು ಕತ್ತಲೆಗವಿದಿದ್ದ ಜನವಿರಹಿತ ದಾರಿಯ ಕೊಟಿಗೆ ಬಂದು ತಲುಪಿದನು. ಅಲ್ಲೊಂದು ಟ್ಯಾಕ್ಸಿಯು ಬಂದು ನಿಂತಿತ್ತು. ಬ್ಲೇಕನನ್ನು ಕಂಡ ಕೂಡಲೆ ಇನಸ್ಪೆಕ್ಟರ ಉಯಿಜಿನ್ನನು ಇಬ್ಬರು ಸಾದಾ ಉಡುಪಿನ ಪೋಲೀಸರು, ಬ್ಲೇಕನ ಪ್ರೀತಿಯ ನಾಯಿಯಾದ ಟೈಗರ ಇವರೊಡನೆ ಆ ಟ್ಯಾಕ್ಸಿಯಿಂದಿಳಿದನು. ಬ್ಲೇಕನು ಅಂದು ಸಾಯಂಕಾಲ ಸ್ಕಾಟಲಂಡ ಯಾರ್ಡಿಗೆ ಹೋಗಿ ಅವರೊಡನೆ ಆ ಬಗ್ಗೆ ಆಲೋಚಿಸಿ ಅವರಿಗೆ ಸಂಜೆಗೆ ಅಲ್ಲಿಗೆ ಬರಹೇಳಿದ್ದನು. ಜಾರ್ಭಿಸ್ಸನಿಂದ ಏನೇನು ತಿಳಿದಿತ್ತೋ, ಅದನ್ನೆಲ್ಲ ಬ್ಲೇಕನು ಇನಸ್ಪೆಕ್ಟರನಿಗೆ ತಿಳಿಸಿದನು.

ಬಳಿಕ ಬ್ಲೇಕನು ಕ್ಷಣ ಹೊತ್ತು ಸುಮ್ಮನಿದ್ದು ನಂತರ:—"ಆ ಕಳ್ಳರು ಸ್ಮಿತ್ಥನನ್ನು ಆ ಗಿಡದಡಿಯ ಕಟ್ಟಡದಲ್ಲಿಯೋ ಬಚ್ಚಿಟ್ಟಿರುವರು. ಸ್ಮಿತ್ಥನು ಅವರ ಹಲವು ಮಾತುಗಳನ್ನು ಇಷ್ಟರಲ್ಲೇ ಕೇಳಿಕೊಂಡಿರಬಹುದಾಗಿದೆ."

ಇನ್ಸಸ್ಪೆಕ್ಟರ:-" ಅವನನ್ನು ಅಚೇತನ ಅವಸ್ಥೆಯಲ್ಲಿ ಗಾಡಿಯೊಳಗಿಂದ ತಂದು ಟೇಮ್ಸ ನದಿಯಲ್ಲಿ ಚೆಲ್ಲಿಕೊಟ್ಟಿರಲಿಕ್ಕಿಲ್ಲವಷ್ಟೆ? ತಾವು ಹಿಡಿಯಲ್ಪಡುವೆವೆಂಬ ಅಂಜಿಕೆಯಿಂದ ಇಂಥ ಕುಕರ್ಮಗಳು ಘಟಿಸುವ ಸಂಭವವಿಲ್ಲದಿಲ್ಲ."

ಬ್ಲೇಕ:—"ಹಾಗೂ ಆಗಬಹುದು; ಆದರೆ ಹಾಗೆ ಮಾಡುವಷ್ಟು ಸಾಹಸವು ಅವರಲ್ಲಿಲ್ಲ."

ಇನ:—"ನಿಮ್ಮ ಅನುಮಾನವು ಸತ್ಯವಾದರೆ ಒಳ್ಳೇದೇ. ಸ್ಮಿತ್ಥನು ಸಿಕ್ಕರೆ ವಾರ್ನೆ-ಜೋನಸನರನ್ನು ಸೆರೆ ಹಿಡಿಯಲು ಸುಲಭವಾಗುವದು."

ಬ್ಲೇಕ:—"ಅದೇನೋ ಸರಿ. ಹರಕೋರ್ಟನನ್ನನುಸರಿಸಿ ಹೋಗಿ ಆತನು ಅವರ ಅಡ್ಡೆಯನ್ನು ಕೂಡ ನೋಡಿಬಂದಿರುತ್ತಾನೆ. ಬಹುಶಃ ಅವರು ಈಗಲೂ ಅಲ್ಲಿಯೇ ಇರಬಹುದು."

ಈ ಎಲ್ಲ ಆಲೋಚನೆಯನ್ನು ಮಾಡ ಮಾಡುತ್ತ ಅವರೆಲ್ಲರೂ ಟೇಮ್ಸ ನದೀತೀರಕ್ಕೆ ಸಾಗಿದರು. ಅಲ್ಲಿಂದ ಒಯಾರ್ಟ ಲೇನು ಕಾಲು ಮೈಲಿಗಿಂತ ದೂರಿರಲಿಲ್ಲ. ಆ ಓಣಿಯ ಮೊರೆಗೇ 'ಏಶಿಯಾ ಹೋಮ.' ಆ ಸ್ಥಳವು ತೀರ ನಿರ್ಜನವಾಗಿತ್ತು. ನಾಲ್ಕೂ ದಿಕ್ಕಿಗೆ ಮರ-ಮರ ಅನ್ನುತ್ತಿತ್ತು. ಆ ಹೋಮಿನ ಒಂದು ಭಾಗದಲ್ಲಿ ಮೇಲೆ ಹೇಳಿದ ಜೀರ್ಣ-ಶೀರ್ಣವಾದ ನೆಲಮನೆ

ಯಿದ್ದಿತು. ಆ ರಾತ್ರಿಯಲ್ಲಿ ಎಷ್ಟು ಕತ್ತಲೆ ಬಿದ್ದಿತ್ತೋ ಚಳಿಯೂ ಅಷ್ಟೇ ಹೆಚ್ಚಿತ್ತು. ಅದರ ಮೇಲೆ ಮಂಜು ಕ್ರಮ ಕ್ರಮವಾಗಿ ಒಟ್ಟುಗೂಡತೊಡಗಿತ್ತು.

ಬಾಗಿಲು ಮುಚ್ಚಿದ್ದ ಆ ನೆಲಮನೆಯನ್ನು ಪ್ರವೇಶಿಸಲಿಕ್ಕೆ ಅವರಿಗೆ ಕಠಿಣವಾಗಲಿಲ್ಲ. ಇನಸ್ಪೆಕ್ಟರನು ಅಲ್ಪಪ್ರಯಾಸದಿಂದ ಆ ಬಾಗಿಲವನ್ನು ತೆರೆ ತನು ಆಗ ಬ್ಲೇಕನು ತನ್ನ ಜೇಬಿನೊಳಗಿನ ಮಿಂಚಿನ ಹಿಲಾಲನ್ನು ಹೊತ್ತಿಸಿ ಎಲ್ಲರನ್ನೂ ಕರಕೊಂಡು ಆ ನೆಲಮನೆಯನ್ನು ಹೊಕ್ಕನು. ಅದು ಬಹು ದೊಡ್ಡ ನೆಲಮನೆಯು. ಅದರ ನೆಲದ ಮೇಲೆ ಧೂಳು ದಪ್ಪವಾಗಿ ಬಿದ್ದಿತ್ತು. ಆ ಧೂಳಿನಲ್ಲಿ ಹಲವು ಜನರ ಪಾದಚಿಹ್ನಗಳು ಮೂಡಿದ್ದವು. ನೆಲಮನೆಯ ಒಂದು ದಿಕ್ಕಿಗೆ ನೆಲದ ಮೇಲೊಂದು ಪುಟ್ಟ ಬಾಗಿಲವಿತ್ತು. ಆ ಬಾಗಿಲಿ ಗೊಂದು ಬಹು ದಪ್ಪನ್ನ ಕಬ್ಬಿಣ ಬಳೆಯಿತ್ತು. ಆ ಬಳೆಯನ್ನು ಜಗ್ಗಿ ದೂಡಲು ಆ ಕದವು ತೆರೆಯಿತು. ಅಲ್ಲಿ ನೆಲದ ಕೆಳಗೆ ಮತ್ತೊಂದು ನೆಲಮನೆ ಯೂ ಅದಕ್ಕಿಳಿಯುವ ನಿಚ್ಚಣಿಕೆಯೂ ಕಾಣಿಸಿದವು. ಬ್ಲೇಕನು ಮಿಂಚಿನ ಹಿಲಾಲಿನೊಡನೆ ಆ ನಿಚ್ಚಣಿಕೆಯ ಮೂಲಕ ಆ ನೆಲಮನೆಯಲ್ಲಿಳಿದನು. ಅವನ ಜೊತೆಗಾರರೂ ಅವನ ಹಿಂದಿನಿಂದ ಹೋದರು. ಕೆಲ ದೂರ ಹೋದ ಬಳಿಕ ಅಲ್ಲೊಂದು ಕೋಣೆ ಕಾಣಿಸಿತು. ಅದರೊಳಗಿಂದ ನೀರಿನಂತಹ ಹೊಲಸು ಹನಿ ಗಳು ಚಿಮ್ಮುತ್ತಿದ್ದವು. ಅಲ್ಲಿಯ ದುರ್ಗಂಧವಂತೂ ಸಹಿಸಲಸಾಧ್ಯವಾಗಿತ್ತು. ನಾಲ್ಕೂ ದಿಕ್ಕಿಗೆ ಅಸಂಖ್ಯವಾದ ಜೇಡಹುಳಗಳ ಬಲೆಗಳು ಹೆಣೆಯಲ್ಪಟ್ಟಿದ್ದವು. ಆ ಕೋಣೆಯ ಗೋಡೆಯು ಒಳಮಗ್ಗಲಲ್ಲಿ ನದಿಯ ಕಡೆಗೆ ಬಂದು ಬಹು ದೊಡ್ಡ ತೂತು! ಕೋಣೆಯ ಒಂದು ಮೂಲೆಯಲ್ಲಿ ಅವೆಷ್ಟೋ ಹುಲ್ಲಿನ ಚಾಪೆಗಳು. ಅವು ಅಲ್ಲಿಯವರಾರಿಗಾದರೂ ಹಾಸುಗೆಗೆ ಉಪಯುಕ್ತವಾಗ ಲೆಂದು ಇರಿಸಿದಂತಿದ್ದವು. ಅವುಗಳಿಗೆ ಸಮೀಪದಲ್ಲೇ ಒಂದು ನೀರಿನ ಪಾತ್ರೆ- ಮಿಠಾಯಿಯ ಪುಡಿಯು ಅಲ್ಲಿದ್ದದ್ದು ಕಾಣಿಸಿತು; ಆದರೆ ಸ್ಮಿತ್ಥನು ಮಾತ್ರ ಅಲ್ಲೆಲ್ಲೂ ಕಾಣಿಸಲಿಲ್ಲ.

ಇನ್ಸ:-"ಆ ಪೋರನನ್ನು ಇಲ್ಲಿಂದ ಬೇರೆ ಕಡೆಗೆ ದಾಟಿಸಿರುವಂತೆ ತೋರು ತ್ತದೆ. ನಾವು ಇದಕ್ಕೂ ಸ್ವಲ್ಪ ಮುಂಚಿತವಾಗಿಯೇ ಇಲ್ಲಿಗೆ ಬಂದಿದ್ದರೆ ಅವ ನನ್ನು ಕಾಣಬಹುದಾಗಿತ್ತು"

ಕಳ್ಳರು ಸ್ಮಿತ್ಥನನ್ನು ಆ ನೆಲಮನೆಯಲ್ಲೇ ಬಚ್ಚಿಟ್ಟಿದ್ದರೆಂಬದು ಅವ ರೆಲ್ಲರಿಗೂ ಖಾತ್ರಿಯಾಯಿತು. ಟೈಗರವು ಚಾಪೆಯನ್ನು ಮೂಸಿ ನೆದೀಡಿ ವ್ಯಗ್ರಭಾವದಿಂದ ನಾಲ್ಕೂ ಕಡೆಗೆ ಓಡಾಡಹತ್ತಿತು.

ಆಗ ಬ್ಲೇಕನು:—ಸ್ವಲ್ಪ ತಡ ಮಾಡಿ ಬಂದುದರಿಂದ ಹುಡುಗನನ್ನು

ದೊರೆಕಿಸುವ ಸಂಧಿಯನ್ನು ಕಳಕೊಂಡಂತಾಯಿತು. ಎಂಥ ಮೋಸವಿದು? ಆ ದುರುಳರು ಆತನನ್ನು ಇಲ್ಲಿಂದ ಯಾವ ಉದ್ದೇಶಕ್ಕಾಗಿ ಬೇರೆ ಕಡೆಗೊಯ್ದರೋ ತಿಳಿಯದು.

ಇನ್ಸ:—ಅವರು ಒಂಬುವೇಳೆ ಅವನನ್ನು ಇಂದು ಸಂಜೆಗೆ ಬಿಟ್ಟುಗೊಟ್ಟಿರಬಹುದು; ಆದರಿಂದ ಅವನು ಇಷ್ಟರೊಳಗೆ ಮನೆಗೆ ಹೋಗಿದ್ದರೂ ಹೋಗಿರಬಹುದಾಗಿದೆ.

ಬ್ಲೇಕ:-ನಿಮ್ಮ ನುಡಿಯು ಸತ್ಯವಾದರೆ ಬಹು ಸಂತೋಷವೇ ಆದೀತು, ಆದರೆ ನನ್ನ ಅನುಮಾನವು ಬೇರೆಯೇ ಆಗಿವೆ.

ಇನ್ಸ:—ಈಗ ಅವರು ಸ್ಮಿತ್ಥನನ್ನು ಬೇರೆ ಎಲ್ಲಿಗೇ ಒಯ್ದಿದ್ದರೂ ಅವರು ಅವನನ್ನು ಇಲ್ಲಿಂದ ಒಯ್ದು ಹೆಚ್ಚು ವೇಳೆಯಾಗಿಲ್ಲವೆಂದು ಇಲ್ಲಿ ಧೂಳದಲ್ಲಿ ಮೂಡಿರುವ ಅವರ ಹೆಜ್ಜೆಗಳ ಗುರ್ತಿನಿಂದ ತಿಳಿಯುವಂತಿವೆ. ಈ ಧೂಳದಲ್ಲಿ ಯಾವ ಎಲ್ಲ ಹೆಜ್ಜೆಗಳು ಮೂಡಿರುವವೂ ಅವುಗಳಲ್ಲಿ ಬಹು ಸಣ್ಣವಾದ ಹೆಜ್ಜೆಗಳೂ ಇರುತ್ತವೆ.

ಆಗ ಅವರೆಲ್ಲರೂ ಬೊಗ್ಗಿ ನೋಡಲು ಅಲ್ಲಿಯ ಧೂಳದಲ್ಲಿ ಸಣ್ಣ ಬೂಟುಗಳುಳ್ಳ ಕಾಲಿನ ಚಿಹ್ನಗಳು ಬಹು ಸ್ಪಷ್ಟವಾಗಿ ಮೂಡಿದ್ದವು. ಆ ಬೂಟಿನ ಚಿಹ್ನಗಳನ್ನು ಕಂಡು ಬ್ಲೇಕನು ಅನುಮಾನಿಸಿದನೇನಂದರೆ, ಆ ದುರುಳರು ಸ್ಮಿತ್ಥನನ್ನು ದರದರನೆ ಎಳೆಯುತ್ತ ಆ ಗೋಡೆಯಲ್ಲಿ ಯಾವ ಒಂದು ಬಹು ದೊಡ್ಡ ತೂತು ಇದ್ದಿತೋ ಅತ್ತ ಕಡೆಗೇ ಎಳೆಯೊಯ್ದುರುವರು. ಗೋಡೆಯ ಆ ಬದಿಗೇ ನದಿಯ ಪ್ರವಾಹವಿದ್ದಿತು. ಬ್ಲೇಕನು ಪದಚಿಹ್ನಗಳನ್ನನುಸರಿಸಿ ಆ ತೂತಿನೊಳಗಿಂದ ಆ ಗೋಡೆಯ ಹೊರಗಡೆಗೆ ಬಂದನು. ಇನ್ಸಪೆಕ್ಟರ ಹಾಗು ಅವನ ಜೊತೆಗಾರರೂ ಅವನನ್ನನುಸರಿಸಿದರು. ಟೈಗರವೂ ಬಹು ಕಷ್ಟಪಟ್ಟು ಆ ತೂತಿನೊಳಗಿಂದ ಪಾರಾಗಿ ಹೋಯಿತು. ಬ್ಲೇಕನು ತನ್ನ ಹಿಲಾಲಿನ ಆಧಾರದಿಂದ ಕಂಡುಕೊಂಡನೇನಂದರೆ, ಗೋಡೆಯ ಮೇಲ್ಭಾಗದಿಂದ ಕಟ್ಟಿಗೆಯದೊಂದು ಜೀರ್ಣ ಸೇತುವೆಯು ಆ ನೆಲಮನೆಯ ಪ್ರಾಮುಖ್ಯ ಭಾಗದ ವರೆಗೂ ಹಬ್ಬಿತ್ತು. ಆ ಸೇತುವೆಯ ಎರಡೂ ಮಗ್ಗಲುಗಳಲ್ಲಿ ಕೆಸರಿನಿಂದ ಮುಳುಗಿದ್ದ ಬಹು ದೊಡ್ಡ ಕಲ್ಲುಗಳು ಬಿದ್ದಿದ್ದವು. ಟೈಗರು ಆ ಜೀರ್ಣ ಸೇತುವೆಯ ಮೇಲೆ ಬಂದು ಮತ್ತೆಮತ್ತೆ ಆಘ್ರಾಣಿಸಿ ಮುಂದೆ ಹೋಗದಾಯಿತು; ಆದರೆ ವ್ಯಾಕುಲಭಾವದಿಂದ ಒಮ್ಮೆ ನದಿಯ ಕಡೆಗೂ, ಮತ್ತೊಮ್ಮೆ ಬ್ಲೇಕನ ಕಡೆಗೂ ನೋಡುತ್ತ ಒದರಹತ್ತಿತು. ಅವರು ಮತ್ತೆ ಕೆಲ ಗಜ ಮುಂದೆ ಸಾಗಿ ಹೋಗಿ ನೀರಿನ ಪ್ರವಾಹದ ಬಳಿಗೆ ಕಲ್ಲುಬಂಡೆಗಳ ಮೇಲಿನ ಕೆಸರ

ಲ್ಲೊಂದು ಬಹುದೊಡ್ಡ ಗುರ್ತನ್ನು ನೋಡಿದರು. ಅದರಿಂದ ಅವನಿಗೆ ತಿಳಿಯಿ ತೇನಂದರೆ, ಅಲ್ಲಿಗೊಂದು ನೌಕೆಯು ಬಂದು ಅದಕ್ಕೆ ಆತು ನಿಂತಿತ್ತು. ಅದರ ತಾಕಲಾಟದಿಂದಲೇ ಅಂಥ ಆ ದೊಡ್ಡಗುರ್ತಾಗಿದೆ.

ಆಗ ಬ್ಲೇಕನು:—"ದುರುಳರು ಸ್ಮಿತ್ಥನನ್ನು ಇಲ್ಲಿಯ ವರೆಗೆ ಜಗ್ಗಿ ಕೊಂಡು ಬಂದು ನೌಕೆಯಲ್ಲಿ ಹಾಕಿದ್ದಾರೆ. ಇದೇನು ವ್ಯಾಪಾರವೋ ತಿಳಿಯ ದಾಗಿದೆ. ಅವನನೆಲ್ಲಿಗೆ ಒಯ್ದಿದ್ದಾರು?"

ಬಳಿಕ ಅವರೆಲ್ಲರೂ ತೀಕ್ಷ್ಣದೃಷ್ಟಿಯಿಂದ ನದಿಯಲ್ಲಿ ನೋಡಲು, ನದಿ ಯ ಮಧ್ಯಭಾಗದಲ್ಲೊಂದು ಬಹು ದೊಡ್ಡ ಹಡಗ ನಿಂತಿರುವದು ಅವರಿಗೆ ಗೋಚರವಾಯಿತು. ಇವರು ಆ ಕಡೆ ನೋಡಹತ್ತಿರುವಾಗಲೆ ಆ ಹಡಗವು ಆಗ ತಾನೆ ಲಂಗರವನ್ನೆತ್ತಿಕೊಂಡು ಮುಂದೆ ಸಾಗಹತ್ತಿತು. ಪರಕ್ಷಣದಲ್ಲೇ ಅವರು ಒಂದು ಆರ್ತನಾದವನ್ನು ಕೇಳಿದರಲ್ಲದೆ ಅದರೊಡನೆಯೇ ಹಡಗದಿಂದ ಏನೋ ಭಾರೀ ಭಾರವುಳ್ಳ ಜೀನಸು ಬೀಳುತ್ತಿರುವದನ್ನೂ ನೋಡಿದರು. ನೀರಲ್ಲಿ ಹಾರಿಕೊಂಡವನಾರೋ ಕಾತರ ಸ್ವರದಿಂದ:—"ರಕ್ಷಿಸಿರಿ, ಸಂರಕ್ಷಿಸಿರಿ; ನನ್ನನ್ನು ಬದುಕಿಸಿರಿ." ಎಂದು ಕೂಗಿದನು.

ಆ ದನಿಯನ್ನು ಕೇಳಿದ ಕೂಡಲೆ ಟೈಗರವು ಚೀತ್ಕಾರ ಮಾಡುತ್ತ ನೀ- ರಲ್ಲಿ ಹಾರಿಕೊಂಡಿತು; ಹಾಗು ತನ್ನ ಶಕ್ತಿಮೀರಿ ಈಸುತ್ತ ಆ ಹಡಗದ ಕಡೆಗೆ ಸಾಗಿತು.

ಆಗ ಸ್ಮಿತ್ಥನು ಹೊಳೆಯೊಳಗಿಂದಲೇ ಅತಿ ದೀನ ಸ್ವರದಲ್ಲಿ ಮತ್ತೆ:— "ಒಡೆಯಾ, ಮುಳುಗುತ್ತಿರುವೆನು; ರಕ್ಷಿಸು-ರಕ್ಷಿಸು" ಎಂದು ಕೂಗಿದನು.

—·—

## ಅದಾರು ಹೇಳುವರು, ಅಧರ್ಮಕ್ಕೇ ಜಯವೆಂದು?

ಟೇಮ್ಸ ಹೊಳೆಯ ಪ್ರವಾಹದಲ್ಲಿ ಮುಳುಗಹತ್ತಿದ್ದ ಸ್ಮಿತ್ಥನ ಆರ್ತ ಧ್ವನಿಯನ್ನು ಕೇಳಿ ಇನ್ಸಪೆಕ್ಟರ:—"ಇದಂತೂ ಸ್ಮಿತ್ಥನ ದನಿಯೇ. ಎಂಥ ಅವಸ್ಥೆಯಿದು! ಸ್ಮಿತ್ಥನು ನದಿಯಲ್ಲಿ ಬಿದ್ದ ಬಗೆ ಹೇಗೆ?"

ಬ್ಲೇಕ:—ಹೌದು; ಅವನು ಸ್ಮಿತ್ಥನೇ. ಅವನು ಆ ಹಡಗದಿಂದ ಖಂಡಿತ ವಾಗಿಯೂ ನದಿಗೆ ಹಾರಿಕೊಂಡಿರುತ್ತಾನೆ. ಸ್ಮಿತ್ಥ, ಅಂಜದಿರು; ನಾವು ಇಲ್ಲಿಗೇ ಬಂದಿದ್ದೇವೆ. ನೀನು ಶಕ್ತಿಮೀರಿ ಮಾರುಗೈ ಹಾಕಿ ಈಸಿ ಬಾ."

ಬ್ಲೇಕನ ಈ ಅಭಯವಾಣಿಯು ಸ್ಮಿತ್ಥನ ಕಿವಿಗೆ ಕೇಳಿಸಿತೋ ಇಲ್ಲವೋ ತಿಳಿಯದು. ವಿಶೇಷವೆಂದರೆ, ಸ್ಮಿತ್ಥನ ಉಡುಪು-ತೊಡಪುಗಳು ನೀರಲ್ಲಿ ತೊಯ್ದು ಅತ್ಯಂತ ಭಾರವಾಗಿದ್ದವು; ಅದಲ್ಲದೆ ಪ್ರವಾಹದ ಸೆಳವು. ನದಿಯ

ಸೆಳವಿನಿಂದ ಆತನು ಕೆಳಬದಿಯ ತಿರುಗಣಿ ಮಡುವಿನ ಕಡೆಗೆ ಸೆಳೆಯಲ್ಪಡ ಹತ್ತಿದನು. ಪ್ರವಾಹದ ವಿರುದ್ಧ ಈಸಿ ಈಸಿ ಆತನು ಬೇಗನೆ ದಣಿದು ಹೋದನು. ಅವನ ಕೈ-ಕಾಲುಗಳು ಶಕ್ತಿಗುಂದಿದವು. ಕ್ಷಣ ಕ್ಷಣಕ್ಕೂ ತಾನು ಮುಳುಗುವದೇ ಖಂಡಿತವೆಂಬ ಶಂಕೆಯು ಅವನಲ್ಲಿ ಬಲವತ್ತರಿಸಿತು.

ಸ್ಮಿತ್ಥನ ಆಪತ್ತನ್ನು ಕಂಡ ಬಾಯುಗರವು ವಿರುದ್ಧ ಪ್ರವಾಹದಲ್ಲೇ ಒಮ್ಮೆ ಮುಣುಗಿ ಒಮ್ಮೆ ಪ್ರವಾಹದ ಕೂಡ ತೇಲಿ ಹೀಗೆ ಮಾಡುತ್ತ ಈಸುತ್ತ ಅವನೆಡೆಗೆ ನಡೆದಿತ್ತು. ಬ್ಲೇಕನು ಸಿಟ್ಟುಸಿರುಗರೆಯುತ್ತ ತೀಕ್ಷ್ಣದೃಷ್ಟಿಯಿಂದ ಆ ಅಂಧಕಾರದಲ್ಲಿ ಸ್ಮಿತ್ಥನಿದ್ದ ದಿಕ್ಕಿನ ಕಡೆಗೇ ನೋಡುತ್ತ ನಿಂತನು; ಆದರೆ ಅವನಿಗೆ ಆ ಗಾಢಾಂಧಕಾರದಲ್ಲಿ ಏನೂ ಕಾಣಿಸುತ್ತಿರಲಿಲ್ಲ. ಆಗ ಆತನು ಗಟ್ಟಿಯಾಗಿ ಕೂಗಿ ಹೇಳುತ್ತಾನೆ:—"ಯಾರಿದ್ದೀರೋ ಅಲ್ಲಿ? ಒಂದು ಡೋಣಿಯನ್ನು ತನ್ನಿರಿ. ಬೇಗನೆ ಒಂದು ಡೋಣಿ ತಕ್ಕೊಂಡು ಬನ್ನಿ. ನೀವು ಎಷ್ಟು ಹಣ ಕೇಳುವಿರೋ ಅಷ್ಟನ್ನೂ ಮೇಲೆ ಇನಾಮನ್ನೂ ಕೊಡುತ್ತೇನೆ."

ಆ ನೆಲಮನೆಯ ಬೇರೆ ಕಡೆಯ ಗೋಡೆಗೊಂದು ಡೋಣಿಯು ಕಟ್ಟಲ್ಪಟ್ಟಿತ್ತು. ಅದರೊಳಗಿನ ಅಂಬಿಗನು ಬ್ಲೇಕನ ನುಡಿ ಕೇಳಿ ಡೋಣಿಯನ್ನು ತೀವ್ರವಾಗಿ ಬಿಟ್ಟುಕೊಂಡು ಬಂದನು. ಬ್ಲೇಕನು ಆ ಕೂಡಲೆ ಅದರಲ್ಲಿ ಜಿಗಿದು ಸ್ಮಿತ್ಥನನ್ನು ಪಾರುಗಾಣಿಸಲಿಕ್ಕೆಂದು ಆತನಿದ್ದ ದಿಕ್ಕಿಗೆ ಡೋಣಿ ನಡೆಸ ಹತ್ತಿದನು.

ಅದುವರೆಗೆ ಅಲ್ಲಿ ನಡೆದ ವರ್ತಮಾನವೆಂಬದನ್ನು ಈಗ ನಮ್ಮ ವಾಚಕರಿಗೆ ತಿಳಿಸುವದು ಆವಶ್ಯಕವು. ಬ್ಲೇಕನು ಪೋಲೀಸರೊಡನೆ ಮೇಲೆ ಹೇಳಿದ ನೆಲಮನೆಗೆ ತಲುಪುವದಕ್ಕೆ ಸುಮಾರು ಅರ್ಧಗಂಟೆ ಮುಂಚೆ ವಾರ್ಣೆ ಮತ್ತು ಜೋಸನರು ಸ್ಮಿತ್ಥನಿಗೆ ಕ್ಲೋರೋಫಾರ್ಮ ಕೊಟ್ಟು ಸ್ಮೃತಿದಪ್ಪಿಸಿ ಮೇಲೆ ಹೇಳಿದ ಹಡಗಿಗೆ ಜಗ್ಗಿಕೊಂಡೊಯ್ದಿದ್ದರು; ಹಾಗು ಆತನ ಎರಡೂ ಕೈಗಳನ್ನು ಕಟ್ಟಿ ಒಂದು ಕೆಬಿನ್ನದೊಳಗೆ ಕೂಡಿದ್ದರು; ಆ ಹಡಗಿನ ಸೆರೆಗುಡುಕ ಕ್ಯಾಪ್ಟನ್ನನಿಗೆ ಸಾಕಷ್ಟು ಮದ್ಯವನ್ನು ಪೂರೈಸಿ ವಶಪಡಿಸಿಕೊಂಡು, ಅವರು ತಮ್ಮ ಕಾರ್ಯವನ್ನು ಸಾಧಿಸಿಕೊಂಡಿದ್ದರು. ಆ ಹಡಗ ಅಂದೇ ರಾತ್ರಿಯಲ್ಲಿ ಲಂಗರವನ್ನೆತ್ತಿ ದೂರ ದೇಶಕ್ಕೆ ಹೊರಡಲಿದ್ದಿತು; ಆದರೆ ವಾರ್ಣೆ-ಜೋಸನರು ಕ್ಲೋರೋಫಾರ್ಮ ಕೊಡಬಂದಾಗ ಸ್ಮಿತ್ಥನು ತನ್ನ ಉಸಿರನ್ನು ನಿರೋಧ ಪಡಿಸಿಕೊಂಡದ್ದರಿಂದ ಅವನು ಕ್ಲೋರೋಫಾರ್ಮಿನಿಂದ ಚೇತನಾರಹಿತನಾಗಲಿಲ್ಲ. ಅಚೇತನನಾಗಿರದಿದ್ದರೂ ಅವನು ಮೂರ್ಛೆ ತಾಳಿದವರಂತೆ ಸೋಗು ಹಾಕಿಕೊಂಡು ಆ ಕೆಬಿನ್ನದಲ್ಲಿ ಬಿದ್ದುಕೊಂಡಿದ್ದನು. ಆ ಸ್ಥಳದಿಂದ ಅವನು ಓಡಿ

ಹೋಗಲಾರನೆಂದು ಭಾವಿಸಿ, ಹಡಗ ತೊರಡುವ ಮೊದಲೇ ಆತನ ಕೈಕಾಲು ಬಿಚ್ಚಲಾಗಿದ್ದವು ಆ ಕೆಬಿನ್ನದ ಬಾಗಿಲನ್ನೂ ಹೊರಗಿನಿಂದ ಭದ್ರಪಡಿಸಿರಲಿಲ್ಲ.

ನಿಯಮಿತ ಅವಧಿಗೆ ಹಡಗಿನ ಲಂಗರವು ಎತ್ತಲಾಯಿತು. ಹಡಗದ ಎಂಜಿನ್ನು ಘರ್ರ-ಘರ್ರ ಎಂದು ಸಪ್ಪಳ ಮಾಡಹತ್ತಿತು. ಕಡೆಗೆ ಹಡಗವು ಮಂದ ಗತಿಯಿಂದ ಸಮುದ್ರದ ಕಡೆಗೆ ಹೋಗಹತ್ತಿತು. ಆಗ ಸ್ಮಿತ್ಥನು ಆತ್ಮರಕ್ಷಣೆಗೆ ಬೇರೆ ಯಾವ ಉಪಾಯವನ್ನೂ ಕಾಣದೆ, ಬೇರೆ ಪ್ರವಾಸಿಗಳಿಗೆ ಕಾಣದ ಹಾಗೆ ಕೆಬಿನ್ನದ ಹೊರಗೆ ಬಂದನು; ಮತ್ತು ಹಡಗದ ಕಟಾಂಜನದ ಹತ್ತರ ನಿಂತು ಒಮ್ಮೆ ಅಂಧಕಾರಪೂರ್ಣವಾದ ನದಿಯ ಪ್ರವಾಹದ ಕಡೆಗೆ ನೋಡಿದನು. ಅದನ್ನು ಕಂಡು ಅವನ ತಲೆ ತಿರುಗಹತ್ತಿತು; ಆದರೆ ಅದೇ ಕಾಲಕ್ಕೆ ತಮ್ಮ ಟೈಗರ ನಾಯಿಯು ಹೊಳೆಯ ದಡದಲ್ಲಿ ನಿಂತು ಗಂಭೀರ ದನಿಯಿಂದ ಒದರ ಹತ್ತಿತ್ತು. ಟಾಯಗರದ ಚಿರಪರಿಚಿತ ದನಿ ಕೇಳಿದ ಕೂಡಲೆ ಸ್ಮಿತ್ಥನ ಮನಸ್ಸಿನಲ್ಲಿ ಸಾಹಸದ ಸಂಚಾರವಾಯಿತು. ಬ್ಲೇಕನು ತನ್ನ ಪತ್ತೆಗಾಗಿ ಟಾಯಗರ ದೊಡನೆ ನದಿಯ ದಡದಲ್ಲಿ ಬಂದು ನಿಂತಿರುತ್ತಾನೆಂದು ಆತನು ತಿಳಕೊಂಡನು. ಆಗ ಆತನು ಆ ಹಡಗದ ಕಟಾಂಜನದ ಮೇಲಿಂದ ಹೊಳೆಯ ಮಧ್ಯದಲ್ಲಿ ಹಾರಿಬಿಟ್ಟನು; ಹಾಗು ಆ ಕೂಡಲೆ ಕಾತರ ಸ್ವರದಿಂದ:-"ರಕ್ಷಿಸಿರಿ, ಸಂರಕ್ಷಿಸಿರಿ; ನನ್ನನ್ನು ಬದುಕಿಸಿರಿ" ಎಂದು ಕೂಗಿಕೊಂಡನು. ಆತನ ದನಿ ಕೇಳುತ್ತಲೆ ಟಾಯಗರವು ನದಿಯಲ್ಲಿ ಹಾರಿ ಸ್ಮಿತ್ಥನಿದ್ದ ಕಡೆಗೆ ಈಸಿ ಹೋಗಹತ್ತಿತು. ಸ್ಮಿತ್ಥನಿಗೆ ಉತ್ಸಾಹವುಂಟಾಗಲಿಕ್ಕೆಂದು ಬ್ಲೇಕನಾದರೂ ಅವನಿಗೆ ಅಭಯ ವನ್ನಿತ್ತನು.

ಸ್ಮಿತ್ಥನು ಹಾಗೆ ನೀರಲ್ಲಿ ಹಾರಿಕೊಳ್ಳಲು ಆ ಹಡಗದ ಕ್ಯಾಪ್ಟನ್ನನಿಗೆ ತಿಳಿಯಿತೇನಂದರೆ, ಬೇಟೆಯು ಕೈಬಿಟ್ಟಿತು. ಆತನು ಆ ಕೂಡಲೆ ಹಡಗಕ್ಕೆ ಲಂಗರ ಹಾಕಿಸಿದನು; ಹಾಗು ಬೇಗನೆ ಡೋಣಿ ಚೆಲ್ಲಿ ಅವನನ್ನು ಹಿಡಿತರ್ರಿ ರೆಂದು ಕೈಕೆಳಗಿನವರಿಗೆ ಅಪ್ಪಣೆ ಮಾಡಿದನು.

ಆ ನುಡಿಗಳನ್ನು ಕೇಳಿ ತಾನಿನ್ನು ಸಿಕ್ಕುಬೀಳುವೆನೆಂಬ ಭಯದಿಂದ ಸ್ಮಿತ್ಥನು ಶಕ್ತಿ ಮೀರಿ ಈಸಿ ಅವರ ಕೈಯಿಂದ ಪಾರಾಗಲಿಕ್ಕೆ ಪ್ರಯತ್ನಿಸಹತ್ತಿದನು. ಆದರಿಂದ ಕ್ರಮವಾಗಿ ಅವನ ಕೈಕಾಲುಗಳು ಶಕ್ತಿಗುಂದಿ ಒರಟು ಹಿಡಿಯಹತ್ತಿದವು. ಅವನ ದೃಷ್ಟಿಶಕ್ತಿಯೂ ಕ್ಷೀಣವಾಗತೊಡಗಿತು. ಆತನು ಹತಾಶಭಾವದಿಂದ ಎದುರಿಗೆ ನೋಡಲು, ಟಾಯಗರದ ತಲೆಯು ತನ್ನಿಂದ ಎರಡೇ ಮೊಳದ ಅಂತರದಲ್ಲಿ ತೇಲಿಬರುತ್ತಿರುವದು ಅವನಿಗೆ ಗೋಚರ ವಾಯಿತು. ಆಗ ಅವನು ನಿಟ್ಟುಸಿರು ಬಿಡುಬಿಡುತ್ತಲೇ:—"ಟಾಯಗರವು

ನನ್ನನ್ನಿನ್ನು ಬದುಕಿಸಲಾರವೆಂದು ತೋರುತ್ತದೆ; ನಾನು ಮುಣುಗುವದೇ ಖಂಡಿತ" ಎಂಹಂದನು.

ಟಾಯುಗರವು ಅವನ ಬಳಿಗೆ ಬಂದು ತನ್ನ ಬಾಯನ್ನು ಮತ್ತಿಷ್ಟು ತೆರೆದು ನೀರಲ್ಲಿ ಗುಟಕು ನೀರು ಕುಡಿಯು ಹತ್ತಿದ್ದ ಸ್ಮಿತ್ಥನ ಕತ್ತನ್ನು ಗಟ್ಟಿಯಾಗಿ ಹಿಡಿದುಕೊಂಡಿತು; ಹಾಗು ಬೆಕ್ಕು ತನ್ನ ಮರಿಯ ಕುತ್ತಿಗೆಯನ್ನು ಹೇಗೆ ಹಿಡಿದುಕೊಂಡ ಒಂದು ಸ್ಥಳದಿಂದ ಇನ್ನೊಂದು ಕಡೆಗೆ ಸಾಗಿಸುವದೋ ಹಾಗೆ ಸ್ಮಿತ್ಥನ ಗೋಣನ್ನು ಹಿಡಿದು, ಆತನ ತಲೆಯನ್ನು ನೀರ ಮೇಲಿರಿಸಿ ಪ್ರವಾಹದ ವಿರುದ್ಧ ಬಹು ಕಷ್ಟದಿಂದ ಈಸುತ್ತ ನಡೆಯಿತು; ಆದರೆ ಒಬ್ಬ ಮನುಷ್ಯನ ಭಾರವನ್ನು ಬಾಯೊಳಗೆ ಹಿಡಿದುಕೊಂಡು ಅದು ಎಷ್ಟು ಹೊತ್ತು ತಾನೆ ಈಸಬಲ್ಲದು? ಕಡೆಗೆ ಟಾಯುಗರದ ಅವಸ್ಥೆಯೂ ಶೋಚನೀಯವಾಯಿತು. ಏನೇ ಆಗಲಿ, ಮುಂದೆ ಕೆಲ ನಿಮಿಷಗಳಲ್ಲೇ ಬ್ಲೇಕನು ಡೋಣಿಯೊಡನೆ ಆ ಟಾಯುಗರದ ಹತ್ತರ ತಲುಪಿದನು; ಹಾಗು ಸ್ಮಿತ್ಥ ಮತ್ತು ಟಾಯುಗರ ಇವರನ್ನು ನೀರೊಳಗಿಂದ ಡೋಣಿಗೆ ಎತ್ತಿಕೊಂಡನು. ಅದರಿಂದ ಅವರಿಬ್ಬರ ಜೀವಗಳೂ ರಕ್ಷಿಸಲ್ಪಟ್ಟಂತಾದವು. ಡೋಣಿಗೆ ಹಾಕಿದ ಬಳಿಕಾದರೂ ಸ್ಮಿತ್ಥನ ಅವಸ್ಥೆಯು ಅನುಕಂಪನೀಯವೇ ಆಗಿದ್ದಿತು. ಟಾಯುಗರವು ಅತ್ಯಂತ ಶ್ರಮದಿಂದಲೂ ಚಳಿಯಿಂದಲೂ ನಡುಗುತ್ತ ನಿಟ್ಟುಸಿರುಗರೆಯುತ್ತಿತ್ತು.

ಆ ಹಡಗದಿಂದ ನದಿಯೊಳಗೆ ಚೆಲ್ಲಲ್ಪಟ್ಟ ಬೋಟು ಶಕ್ಯವಾದಷ್ಟು ತೀವ್ರಗತಿಯಿಂದ ಇತ್ತ ಕಡೆಗೇ ಬರಹತ್ತಿತ್ತು; ಆದರೆ ಬೇಟೆಯು ತಮ್ಮ ಕೈ ಮೀರಿ ಹೋಯಿತೆಂಬದು ತಿಳಿದ ಕೂಡಲೆ ಸರ್ವಸಾಧಾರಣ ಇಪ್ಪತ್ತು ಗಜಗಳ ಅಂತರದಿಂದಲೇ ಅದರೊಳಗಿನ ಅಂಬಿಗರು ತಮ್ಮ ಬೋಟನ್ನು ಹಡಗದ ಕಡೆಗೆ ತಿರುಗಿಸಿಕೊಂಡು ಹೋದರು. ಅದನ್ನು ಕಂಡು ಇನಸ್ಪೆಕ್ಟರನು ಬ್ಲೇಕನನ್ನು ಕುರಿತು:—"ನಾವು ಅವರನ್ನು ಬೆನ್ನಟ್ಟೋಣವೇ?"

ಬ್ಲೇಕ:—"ಬೇಡ; ಅದೇನೂ ಬೇಕಿಲ್ಲ. ಅವರು ಹೊರಟು ಹೋಗಲಿ. ವಾರ್ನ-ಜೋಸನರು ಆ ಹಡಗದಲ್ಲಿರಬಹುದೆಂದೆನಿಸುವದಿಲ್ಲ; ಅಲ್ಲದೆ ಈಗ ನಮಗೆ ಇನ್ನೂ ಅನೇಕ ಕೆಲಸಗಳವೆ."

ಆಗ ಇನಸ್ಪೆಕ್ಟರನು ಬ್ಲೇಕನ ಕೈಯೊಳಗಿನ ಹುಟ್ಟು ತಕ್ಕೊಂಡು ತಾನು ಹುಟ್ಟು ಹಾಕಹತ್ತಿದನು. ಬ್ಲೇಕನು ಸ್ಮಿತ್ಥನ ಶುಶ್ರೂಷೆಗೆ ತೊಡಗಿದನು. ಬ್ಲೇಕನ ಜೇಬಿನಲ್ಲಿ ಫ್ರೆಂಚ ಬ್ರ್ಯಾಂಡಿಯ ಸೀಸೆಯಿತ್ತು. ಅವನು ಅದನ್ನು ಸ್ಮಿತ್ಥನ ಬಾಯೊಳಗೆ ಸ್ವಲ್ಪಸ್ವಲ್ಪಾಗಿ ಸುರುವಿದನು. ಅದು ಹೊಟ್ಟೆಗೆ ಸೇರುತ್ತಲೆ ಸ್ಮಿತ್ಥನು ಅಲ್ಪಾವಧಿಯಲ್ಲೇ ಶಕ್ತಿಯುತನಾದನು. ಮುಂದೆ [illegible] ನಿಮಿಷ

ಗಳಲ್ಲೇ ಆತನು ಎದ್ದು ಕೂಡ್ರಲು ಸಮರ್ಥನಾದನು. ಅಷ್ಟರಲ್ಲಿ ಅವರ ಡೋಣಿಯು ಆ ನೆಲಮನೆಗೆ ಬಂದು ತಲುಪಿತು. ಆ ಹಡಗವು ತ್ವರಿತಗತಿಯಿಂದ ಸಮುದ್ರಕ್ಕೆ ಸೇರಿತು.

ಆಗ ಸ್ಮಿತ್ಥನು:—ಆ ಹಡಗದ ಹೆಸರು "ಕಾಶ್ಮಿರ." ಅದು ಭೂಪ್ರದಕ್ಷಿಣೆಗೆಂದು ಹೊರಟಿದೆ. ಹಡಗದಲ್ಲಿದ್ದರೆ ನನಗೂ ಪುಕ್ಕಟೆಯಾಗಿ ಭೂಪ್ರದಕ್ಷಿಣೆ ಮಾಡ ದೊರೆಯುತ್ತಿತ್ತು.

ಟೆಲಿಫೋನ ರೂಮಿನಲ್ಲಿ ಏನೇನು ಘಟಿಸಿತು; ಹಾಗು ತನಗೆ ಸ್ಮೃತಿ ದಪ್ಪಿದ ನಂತರ ತನ್ನನ್ನು ಹೇಗೆ ಮತ್ತು ಎಲ್ಲಿ ಬಚ್ಚಿಟ್ಟರು; ಕೊನೆಗೆ ಅಲ್ಲಿಂದ ಹಡಗಕ್ಕೆ ಹೇಗೆ ಸಾಗಿಸಿದರು? ಮುಂತಾದ ಸಂಗತಿಯನ್ನು ಸ್ಮಿತ್ಥನು ತನ್ನ ಒಡೆಯನಿಗೆ ಸವಿಸ್ತರವಾಗಿ ತಿಳಿಸಿದನು. ಅದನ್ನೆಲ್ಲ ಕೇಳಿ ಬ್ಲೇಕ:—"ನಾವು ನದೀತೀರಕ್ಕೆ ಇನ್ನು ನಾಲ್ಕೈದು ನಿಮಿಷ ತಡೆದು ಬಂದಿದ್ದರೆ ನೀನು ನಮಗೆ ಪುನಃ ಸಿಗುತ್ತಿರಲಿಲ್ಲ. ಅಷ್ಟರಲ್ಲಿ ನೀನು ನೀರಲ್ಲಿ ಮುಳುಗಿ ಸತ್ತೇ ಹೋಗುತ್ತಿದ್ದೆ."

ಸ್ಮಿತ್ಥ:—"ಆದರೆ ನಾನು ಆ ಹಡಗದೊಳಗಿಂದ ಓಡಿ ಬರಲಿಕ್ಕೆ ಪ್ರಯತ್ನಿಸದಿದ್ದರೆ ನನ್ನ ಗತಿಯೇನಾಯಿತೆಂಬದು ಕೂಡ ತಮಗೆ ತಿಳಿಯುತ್ತಿದ್ದಿಲ್ಲ."

ಬ್ಲೇಕ:—"ಅದೇನೋ ನಿಜ. ಏನೇ ಆಗಲಿ. ಆಗತಕ್ಕದ್ದೆಲ್ಲ ಆಗಿ ಹೋಗಿದೆ. ಅದಿರಲಿ. ಈಗ ವಾರ್ನ-ಜೋಸನರನ್ನು ಸೆರೆಹಿಡಿಯಲು ಏನು ಯುಕ್ತಿ ಮಾಡಬೇಕೆಂಬದನ್ನು ಹೇಳು ನೋಡುವಾ. ನೀನು ನಮ್ಮನ್ನು ಅವರ ನಿವಾಸಸ್ಥಳಕ್ಕೊಯ್ಯ ಬಲ್ಲೆಯಾ?"

ಸ್ಮಿತ್ಥ;—"ಅದೇಕೊಯ್ಯಲಿಕ್ಕಿಲ್ಲ? ಗರವ್ಹೋಸ್ಟ್ರೀಟಿನಲ್ಲೇ ಅವರ ವಾಸಸ್ಥಳ. ಆ ಮನೆಯು ಇಲ್ಲಿಂದ ಹೆಚ್ಚು ದೂರದಲ್ಲಿಲ್ಲ. ನಡೆದೇ ಹೋಗೋಣ ಬನ್ನಿ."

ಬ್ಲೇಕ:—"ನೀನೀಗ ಮನೆಗೆ ಹೋಗುವದೇ ವಿಹಿತವು. ನೀನು ಈಗಲೆ ಮತ್ತೆ ಥಂಡಿ ಮಾಡಿಕೊಂಡರೆ ನಿನಗೆ 'ನಿಮೋನಿಯಾ' ಆಗುವದೇ ಖಂಡಿತ."

ಸ್ಮಿತ್ಥ:—"ನೀವು ನನಗಾಗಿ ಚಿಂತಿಸಬೇಡಿ. ನನಗೆ ಶೀತ ಸಹಿಸುವ ಅಭ್ಯಾಸವಿದೆ. ಅದರಿಂದ ನನಗೆ ಶೀತವಾಗಲಾರದು."

ಇನ್ಸ:-"ನಾವಿನ್ನು ವೇಳೆಗಳೆಯುವದು ತರವಲ್ಲ. ನಾವು ಯಾವ ಡೋಣಿಯನ್ನೊಯ್ದು ಸ್ಮಿತ್ಥನನ್ನು ಪಾರುಮಾಡಿಕೊಂಡು ಬಂದೆವೋ ಆ ಬೋಟಿನಲ್ಲೇ ಕಳ್ಳರು ಸ್ಮಿತ್ಥನನ್ನೊಯ್ದು ಹಡಗಕ್ಕೆ ಸೇರಿಸಿರಬಹುದೆಂದು ನನಗೆ ನಂಬಿಗೆಯಿದೆ. ಇಲ್ಲದಿದ್ದರೆ ಇಷ್ಟು ರಾತ್ರಿಯಲ್ಲಿ ಅದು ಆ ನೆಲಮನೆಯ ಹತ್ತರ

ಕಾಣಬರುತ್ತಿರಲಿಲ್ಲ. ಆ ಬೋಟಿನಿಂದಲೇ ಅವರು ಧಡಕ್ಕೆ ಬಂದಿಳಿದಿರುವರು. ಒಂದುವೇಳೆ ಅವರು ಸ್ಮಿತ್ಥನ ಆರ್ತ ನಾದವನ್ನು ಕೂಡ ಕೇಳಿರಲಿಕ್ಕೆ ಸಾಕು. ನನ್ನೀ ಅನುಮಾನವು ನಿಜವಾದರೆ, ಸ್ಮಿತ್ಥನು ಹಡಗದಿಂದ ಓಡಿ ಬಂದನೆಂಬ ದನ್ನು ಕೂಡ ಅವರು ಖಂಡಿತವಾಗಿಯೂ ತಿಳಿಯುವರು."

ಬ್ಲೇಕನಿಗಾದರೂ ಹಾಗೆಯೇ ಅನಿಸುತ್ತಿತ್ತು. ಅವನು ಇನ್ಸಪೆಕ್ಟರನ ಮಾತು ಸಂಪೂರ್ಣ ಯುಕ್ತಿಸಮ್ಮತವೆಂದು ಒಪ್ಪಿಕೊಂಡನು. ಅವನು ಕ್ಷಣ ಮಾತ್ರವೇ ಯೋಚಿಸಿ, ಇನಸ್ಪೆಕ್ಟರನನ್ನು ಕುರಿತು:—"ಹಾಗಾದರೆ ನಡೆಯಿರಿ. ನಾವು ಈಗಲೇ ವಾರ್ನೆ-ಜೋಸನರ ನಿವಾಸಕ್ಕೆ ಹೋಗೋಣ. ತಡವಾದರೆ ಅವರು ಸ್ಥಳಾಂತರಕ್ಕೆ ಓಡಿಹೋಗುವ ಸಂಭವವಿದೆ. ಅವರು ಒಂದುವೇಳೆ ಅಲ್ಲಿಯೇ ಇದ್ದರೆ ಕಳವಿನ ಮಾಲೂ ಅವರಲ್ಲಿಯೇ ದೊರೆಯುವುದು. ಕಳವಿನ ಮಾಲಿನೊಡನೆ ಅವರನ್ನು ಸೆರೆಹಿಡಿಯಲಾದರೆ, ಅವರಿಗೆ ಲಘು ಶಿಕ್ಷೆಯ ಆಶೆ ಹಚ್ಚಿ ನೇಭಿಲ ಹರಕೋರ್ಟನ ವಿರುದ್ಧ ಅವರ ಸಾಕ್ಷಿ ಮಾಡಿಸುವದು ಕಠಿಣ ವಾಗಲಾರದು. ಸ್ಮಿತ್ಥ, ನೀನು ಟೆಲಿಫೋನ ಮಾಡಿ ತಿಳಿಸಿದ ಸುದ್ದಿಯಿಂದ ಏನು ಫಲವಾಯಿತೆಂಬದನ್ನು ಅರಿಯ ಲು ಆತುರನಾಗಿರುತ್ತೀಯಷ್ಟೇ? ಅದನ್ನು ದಾರಿಯಲ್ಲಿ ವಿಶದವಾಗಿ ಹೇಳುತ್ತೇನೆ, ನಡೆ"

ಸ್ಮಿತ್ಥನು ತೊಯ್ದ ಉಡುಪಿನಿಂದಲೇ ಬ್ಲೇಕನಿಗೆ ದಾರಿ ತೋರಿಸುತ್ತ ಸಾಗಿದನು; ಯಾವ ಬಗೆಯ ನೆವವನ್ನೂ ಮುಂದೆ ಮಾಡಲಿಲ್ಲ. ಬ್ಲೇಕನು ಹರಕೋರ್ಟನ ಸಂಬಂಧದ ಎಲ್ಲ ಸಂಗತಿಯನ್ನು ಆತನಿಗೆ ಹೇಳ-ಹೇಳುತ್ತ ದಾರೀ ಕ್ರಮಿಸುತ್ತಿದ್ದನು. ಟಾಯಗರವು ಇನಸ್ಪೆಕ್ಟರ ಹಾಗು ಸಾದಾವೇಷದ ಪೋಲೀಸರೊಡನೆ ನಡೆದಿತ್ತು.

ಆ ಗರಮ್ಲೊಸ್ಟ್ರೀಟು ನದೀ ದಡದಿಂದ ಎಳೆಂಟು ನಿಮಿಷಿನ ದಾರಿ. ಅವರು ಹೋಗತಕ್ಕೆ ಮೇಲಂತಿಸ್ತಿನ ಮನೆಯು ಕೆಲ ಗಜ ದೂರವಿರುತ್ತಲೇ ಒಮ್ಮೆಲೆ ನಿಂತುಕೊಂಡರು. ಆಗ ಅವರಿಗೆ ಆ ಕಳ್ಳರ ನಿವಾಸದಲ್ಲಿ ದೀಪದ ಬೆಳಕು ಕಾಣಿಸಲಿಲ್ಲ. ಅದರಿಂದ ಇನ್ಸಪೆಕ್ಟರನು:—"ಈ ಮನೆಯಲ್ಲಂತೂ ಕತ್ತಲೆ ಮುಸಕಿದೆ. ಅವರು ಬಹುಶಃ ಇಲ್ಲಿಂದ ಜಾರಿಕೊಂಡಿರಬಹುದು."

ಬ್ಲೇಕ:—"ಹಾಗೆಯೇ ಆಗಿರಬಹುದೆಂದು ಹೇಳಬರುವಂತಿಲ್ಲ. ಒಂದು ವೇಳೆ ಅವರು ಹಿಂಬದಿಯ ಮೂಲೆಯೊಳಗಿನ ಕೋಣೆಯಲ್ಲಿ ಕುಳಿತಿರಬಹುದು. ಮನೆಯ ಹಿಂಬದಿಯಲ್ಲಿ ಈ ಪೋಲೀಸರಿಬ್ಬರನ್ನು ಪಹರೆಗೆ ಕಳಿಸಿ ನಾವು...."

ಬ್ಲೇಕನ ಮಾತು ಪೂರೈಸುವ ಮೊದಲೇ ಸ್ಮಿತ್ಥನು ಅವರುಗಳಿಗೆ ಮೆಲ್ಲನೆ:-ಸುಮ್ಮನಿರ್ರಿ. ಅಗೋ, ನೋಡಿರಿ. ಅದಾರೋ ಆ ಮನೆಯೊಳಗಿಂದ

ಹೊರಹೊರಡುತ್ತಿದ್ದಾರೆ.

ಕೇವಲ ಅದೇ ಸಮಯಕ್ಕೆ ಯಾವನೊಬ್ಬನು ಆ ಮನೆಯ ತಲೆಬಾಗಿಲ ವನ್ನು ತೆರೆದು ಲಗುಬಗನೆ ಬೀದಿಗೆ ಬಂದು ನಿಲ್ಲುತ್ತಲೆ ಬೀದಿಯ ದೀಪದ ಬೆಳಕು ಆತನ ಮೋರೆ-ಕಣ್ಣುಗಳ ಮೇಲೆ ಬಿದ್ದಿತು. ಅವನು ಅಲ್ಲಿಂದ ಮುಂದೆ ಹೋಗಲಿಲ್ಲ.

ಇನ್ಸಪೆಕ್ಟರ ಉಯಿಜಿನ್ನನು ಅವನನ್ನು ಕಂಡೊಡನೆಯೇ ಗುರ್ತಿಸಿದನು; ಹಾಗು ವಿಸ್ಮಯಭರದಿಂದ ಗಟ್ಟಿಯಾಗಿ:—"ಎಂಥ ಆಶ್ಚರ್ಯವಿದು! ಈತ ನಂತೂ ನೇಭಿಲ ಹರಕೋರ್ಟನು!"

ಇನಸ್ಪೆಕ್ಟರನ ನುಡಿಗಳು ಬಹುಶಃ ಹರಕೋರ್ಟನಿಗೆ ಕೇಳಿಸಿರಬೇಕು. ಆತನು ನಿಮಿಷ ಮಾತ್ರ ಯೋಚಿಸಿ, ಮತ್ತೆ ಭರದಿಂದ ಆ ಮನೆಯನ್ನು ಹೊಕ್ಕನು.

ಆಗ ಬ್ಲೇಕನು ಉತ್ಸಾಹಭರದಿಂದ:—"ತೀವ್ರ ನಡೆಯಿರಿ. ಆ ಮನೆ ಯಲ್ಲೇ ಅವನನ್ನು ಸೆರೆ ಹಿಡಿಯಬಹುದು. ನೇಭಿಲನು ಇಲ್ಲಿ ಸಿಕ್ಕಾನೆಂದು ಅನಿಸಿರಲಿಲ್ಲ."

ಅವರೆಲ್ಲರೂ ಮೂರೇ ಹಾರಿಕೆಗಳಲ್ಲಿ ಆ ಮೇಲಂತಸ್ತಿನ ಮನೆಯ ತಲೆ ಬಾಗಿಲಿಗೆ ಹೋಗಿ ತಲುಪಿದರು; ಹಾಗು ಬಾಗಿಲವನ್ನು ಬಲವಾಗಿ ದೂಡಿ ದರು; ಆದರೆ ಅದಕ್ಕೆ ಒಳಗಿನಿಂದ ಅಗಳಿ ಹಾಕಲಾಗಿತ್ತು. ಆ ಬಾಗಿಲು ಸಹಜವಾಗಿ ತೆರೆಯಲ್ಪಡದ್ದರಿಂದ ಇನ್ಸಪೆಕ್ಟರನು ಒದ್ದು ಒದ್ದು ಅದನ್ನು ಮುರಿದು ಆ ಮನೆಯನ್ನು ಪ್ರವೇಶಿಸಿದನು. ಬ್ಲೇಕನು ಲಗುಬಗನೆ ನಡುಮ ನೆಗೆ ಹೋಗಲು ಎದುರಿನಲ್ಲೇ ಹರಕೋರ್ಟನನ್ನು ಕಂಡನು. ಬ್ಲೇಕನು ತನ್ನೆದು ರಿಗೆ ಬಂದು ನಿಂತದ್ದನ್ನು ಕಂಡು ಅವನು ನಿಮಿಷಾರ್ಧದಲ್ಲೇ ತನ್ನ ಜೇಬಿ ನೊಳಗಿಂದ ಕಾಡತೂಸು ತುಂಬಿದ್ದ ಪಿಸ್ತೂಲು ತೆಗೆದನು; ಆದರೆ ಅವನು ಅದ ನ್ನೆತ್ತಿ ಬ್ಲೇಕನ ಮೇಲೆ ಗುರಿ ಹಿಡಿಯುವ ಮುಂಚೆಯೇ ಬ್ಲೇಕನು ಅವನ ಮೂಗಿನಮೇಲೊಂದು ಬಹು ಬಲವಾದ ಮುಷ್ಟ್ಯಾಘಾತ ಮಾಡಲು, ಆ ಪೆಟ್ಟಿನ ನೋವನ್ನು ಸಹಿಸಲಾರವೆ ಒಮ್ಮೆಲೆ ಬವಳಿಗೊಂಡು ನೆಲಕ್ಕೆ ಬಿದ್ದುಬಿಟ್ಟನು.

ಬ್ಲೇಕನು ಟಾಯಗರವನ್ನುದ್ದೇಶಿಸಿ:—"ಟಾಯಗರ, ಈತನ ಮೇಲೆ ಪಹರೆ ಮಾಡುತ್ತಿರು. ಈ ಕಾಲಸರ್ಪನು ಎದ್ದೇಳಲು ಪ್ರಯತ್ನಿಸುತ್ತಲೆ ಇವನ ಕುತ್ತಿಗೆಯನ್ನೇ ಹಿಚುಕಿ ಹಿಡಿ" ಎಂದು ಆಜ್ಞಾಪಿಸಿದನು.

ಟಾಯಗರು ಹರಕೋರ್ಟನ ಎದೆಯ ಮೇಲೆ ಹಾರಿ ಅವನ ಕುತ್ತಿಗೆಗೆ ಬಾಯಿ ಹಚ್ಚಿಕೊಂಡೇ ಕುಳಿತಿತು. ಭೀಕರವಾದ ಆಘಾತದ ನೋವಿನಿಂದ

ಹರಕೋರ್ಟನು ನೆಲದ ಮೇಲೆ ಬಿದ್ದು ಕಣ್ಣು ಮುಚ್ಚಿ 'ಅಯ್ಯೋ! ಅಯ್ಯೋ! ಅಯ್ಯಯ್ಯೋ!!' ಎಂದೆನ್ನುತ್ತಿದ್ದನು; ಎದ್ದೇಳುವ ಪ್ರಯತ್ನಕ್ಕೆ ತೊಡಗಲಿಲ್ಲ. ಬ್ಲೇಕನು ಅವನ ಬಳಿಯ ಪಿಸ್ತೂಲನ್ನು ವಶಪಡಿಸಿಕೊಂಡು ಜೊತೆಗಾರರೊಡನೆ ಬೇರೆ ಕೋಣೆಗೆ ಹೋದನು. ವಾರ್ನೆ ಮತ್ತು ಜೋಸನರು ಅಲ್ಲಿಯೇ ಇದ್ದರು. ಅವರು ಇವರನ್ನು ಕಂಡ ಕೂಡಲೆ ಮೇಲುಪ್ಪರಿಗೆಯ ಬಳಿಯ ಕೂಡ್ರುವ ಕೋಣೆಯನ್ನು ಹೊಕ್ಕರು. ಅವರು ಅಲ್ಲಿಯ ಕಿಟಕಿಯನ್ನು ತೆರೆದು ಓಡಿಹೋಗಲು ಪ್ರಯತ್ನಿಸುವ ಮೊದಲೇ ಬ್ಲೇಕನು ತಮ್ಮ ಜನರೊಡನೆ ಅವರನ್ನು ಸುತ್ತುಗಟ್ಟಿಕೊಂಡು ನಿಂತನು. ವಾರ್ನೆ-ಜೋಸನರು ಅವರ ಕೈಯಿಂದ ಪಾರಾಗಿ ಹೋಗಲು ಎಷ್ಟು ಪ್ರಯತ್ನಿಸಿದರೂ ಸಫಲವಾಗಲಿಲ್ಲ. ಎರಡು ಮೂರು ನಿಮಿಷಗಳಲ್ಲೇ ಅವರುಗಳ ಕೈ ಕಾಲುಗಳು ಬೇಡಿ-ಸಂಕೋಲೆಗಳಿಂದ ಭೂಷಿತವಾದವು. ಬಳಿಕ ಅವರಿಬ್ಬರ ರಟ್ಟೆಗಳಿಗೂ ನೂಲಿನ ಹಗ್ಗದಿಂದ ಕಟ್ಟಿಸಿ ಬ್ಲೇಕನು ಸ್ಮಿತ್ಥನೊಡನೆ ನೇಭಿಲ ಹರಕೋರ್ಟನ ಬಳಿಗೆ ಬಂದನು; ಹಾಗು ಅವನ ಕೈಕಾಲುಗಳಿಗೂ ಬೇಡಿ ತೊಡಿಸಿದನು. ನೇಭಿಲನು ಬರಿಯ ಆಕ್ರೋಶದಿಂದ ಗರ್ಜಿಸಿ:—"ಪತ್ತೆದಾರನೇ, ನಿನಗಿಂಥ ಸಾಹಸವೇ? ನನ್ನೀ ಕೋಪದ ಫಲವನ್ನು ನೀನು ಆ ಮೇಲೆ ಭೋಗಿಸುವೆ!"

ಬ್ಲೇಕನು ಅವನ ಬೆದರಿಕೆಗೆ ಕಿವಿಗೊಡದೆ ಆ ಮೂವರೂ ಕಳ್ಳರ ದೇಹ ಝಡತಿ ಮಾಡಿದನು; ಆದರೆ ಅವರಾರ ಬಳಿಯಲ್ಲೂ ಏನೂ ದೊರೆಯಲಿಲ್ಲ. ಆಗ ಆತನು ಇನ್ಸಪೆಕ್ಟರನ ಸಹಾಯದಿಂದ ಆ ಕೋಣೆಯೊಳಗಿನ ಡೆಸ್ಕು, ಟೇಬಲ್ಲಿನ ಡ್ರಾ ಮೊದಲಾದವುಗಳನ್ನು ಸಂಶೋಧಿಸಿದನು. ಅಲ್ಲೆಲ್ಲೂ ಕೂಡ ಏನೂ ಸಿಗಲಿಲ್ಲ.

ಆಗ ಇನ್ಸಪೆಕ್ಟರನು:—"ಕಳವಿನ ಮಾಲಂತೂ ಎಲ್ಲಿಯೂ ಪತ್ತೆಯಾಗಲಿಲ್ಲ; ಈಗೇನು ಮಾಡೋಣ?"

ಬ್ಲೇಕ:—"ನೀವು ಇಲ್ಲಿಯೇ ಪಹರೆ ಮಾಡುತ್ತಿರ್ರಿ. ನಾನು ಒಮ್ಮೆ ಉಪರಿಗೆಯನ್ನು ಶೋಧಿಸಿ ಬರುತ್ತೇನೆ."

ಬ್ಲೇಕನು ತನ್ನ ಮಿಂಚಿನ ಹಿಲಾಲನ್ನು ಹಿಡಕೊಂಡು ಲಗುಬಗನೆ ಅಟ್ಟವನ್ನೇರಿ ಹೋದನು. ಅವನು ಅಲ್ಲಿಯ ಆ ಕೋಣೆ ಈ ಕೋಣೆ ನಡುವಿನ ಹಾಲ್‌ಗಳನ್ನೆಲ್ಲ ಹುಡುಕಿ ಕೊನೆಗೊಂದು ಹ್ಯಾಂಡ್‌ಬ್ಯಾಗ ಹಿಡಿದುಕೊಂಡು, ಸುಮಾರು ಹತ್ತು ನಿಮಿಷಗಳ ನಂತರ ಕೆಳಗಿಳಿದು ಬಂದನು. ಅಲ್ಲಿ ಅವನು ಅದನ್ನು ತೆರೆಯಲು, ಅದರೊಳಗೆ ಬಗೆಬಗೆಯ ವಜ್ರ-ವೈಢೂರ್ಯ ಮುತ್ತು-ರತ್ನಗಳ ಅಲಂಕಾರಗಳಿದ್ದವು. ಅವನು ಅವುಗಳನ್ನೆಲ್ಲ ತೆಗೆತೆಗೆದು ಮೇಜಿನ

ಮೇಲಿರಿಸಿದನು. ಮಿಂಚಿನ ದೀಪದ ಬೆಳಕಿನಲ್ಲಿ ಅವುಗಳೆಲ್ಲ ಥಳಥಳನೆ ಹೊಳೆಯುಹತ್ತಿದವು. ಅವುಗಳೆಲ್ಲವೂ ಒಂದಕ್ಕಿಂತೊಂದು ಬಹು ಮೂಲ್ಯವಾದ ಆಭರಣಗಳೇ ಆಗಿದ್ದವು.

ಆಗ ಬ್ಲೇಕನು:—"ಈ ಬ್ಯಾಗ ಇವರು ಮಲಗುವ ಕೋಣೆಯೊಳಗಿನ ಒಲೆಯ ಮೇಲಿನ ಉಲ್ಲಾರದಲ್ಲಿ ಅಡಗಿಸಿಡಲಾಗಿತ್ತು. ಇತ್ತನೋಡಿರಿ, ಇದರಲ್ಲಿ ಲೇಡಿ ಹೆಜೆಲೌಡಳ ಕಳವಾದ ಎರಡು ಅಮೂಲ್ಯ ಆಭರಣಗಳೂ ಇವೆ. ಬೇರೆ ಅಲಂಕಾರಗಳೆಲ್ಲ ಯಾರ್ಯಾರವೆಂಬದು ಈಗ ನಮಗೆ ತಿಳಿಯದಿದ್ದರೂ ಡಾಫನೀ ಬಾರನನ್ನಳ ಕಳವಾದ ಆಭರಣಗಳೂ ಇವುಗಳಲ್ಲೇ ಇವೆಯೆಂದು ತೋರುತ್ತದೆ. ಇಂದು ನಮ್ಮಗಳ ಎಲ್ಲ ಶ್ರಮವೂ ಸಫಲವಾಯಿತು. ವಾರ್ನೆ-ಜೋಸನರಿಗೆ ಲಘುಶಿಕ್ಷೆಯ ಆಮಿಷ ತೋರಿಸಿ ಅವರಿಂದ ನೇಭಿಲನ ವಿರುದ್ಧ ಸಾಕ್ಷಿ ಹೇಳಿಸಬೇಕಾದೀತೆಂದು ನನಗೆ ಈ ಮೊದಲು ಅನಿಸುತ್ತಿತ್ತು; ಆದರೆ ಇಲ್ಲಿ ಹರಕೋರ್ಟನ ಬಗ್ಗೆ ಯಾವ ಎಲ್ಲ ಪ್ರಮಾಣಗಳು ದೊರೆತಿರುವವೋ ಅವೇ ಸಾಕಷ್ಟು ಸಾಕ್ಷ್ಯಗಳಾಗಿವೆ.

ವಾರ್ನೆ-ಜೋಸನರು ಪುರಾತನ ಆರೋಪಿಗಳು. ಕಳವು ದರೋಡೆಗಳೇ ಅವರ ಮುಖ್ಯ ವ್ಯವಸಾಯ; ಹಾಗು ಬೇಡಿಗಳು ಅವರ ದೇಹದ ಅಲಂಕಾರಗಳು! ಅವರು ಈ ಮೊದಲೆಷ್ಟೋ ಸಾರೆ ಜೇಲು ನೋಡಿದ್ದರೂ ಮತ್ತೆ ಅಲ್ಲಿಗೇ ಹೋಗಬೇಕಾದ್ದರಿಂದ ಅವರಿಗೇನೂ ಅಷ್ಟು ವ್ಯಾಕುಲವಾಗಲಿಲ್ಲ; ಆದರೆ ನೇಭಿಲ ಹರಕೋರ್ಟನ ಆಗಿನ ಮಾನಸಿಕ ಅವಸ್ಥೆಯು ಅತ್ಯಂತ ಶೋಚನೀಯವಾಗಿತ್ತು. ಎಲ್ಲಿ ಆತನ ವಿಲಾಸದ ಆಗರವಾದ ಭೇಯಾರ ಸ್ಟ್ರೀಟಿನೊಳಗಿನ ಸುರಮ್ಯನಿವಾಸ, ಸುಕೋಮಲ ಶುಭ್ರಶಯ್ಯೆ, ಲಂಡನ್ನಿನ ಸರ್ವಶ್ರೇಷ್ಠ ಹೋಟಲ್ಲುಗಳಲ್ಲಿಯ ರೆಸ್ಟಾರೆಂಟದಲ್ಲಿನ ಪಾನಾಹಾರಗಳು, ಲಾರ್ಡ-ಲೇಡಿಗಳ ಸಮಾಜದಲ್ಲಿ ಅಬಾಧಿತವಾದ ಚಲನವಲನ, ಸನ್ಮಾನ್ಯ ಕುಲಯುವತಿಯರೊಡನೆ ನೃತ್ಯ, ಗಾಯನ, ನಾಟಕ, ತಮಾಷೆಗಳು ಮತ್ತು ಆಮೋದ-ಪ್ರಮೋದಗಳು ಹಾಗು ಎಲ್ಲಿ ಆ ಕಠೋರ ಕಾರಾಗೃಹದ ತೊಂದರೆ? ಅವನು ಸ್ವರ್ಗಲೋಕದಿಂದ ಒಮ್ಮೆಲೆ ರಸಾತಲಕ್ಕೆ ಜಾರಿ ಬಿದ್ದಂತಾಗಿತ್ತು! ಆದರೆ ಅದರ ಹೊರತು ಯಾವ ಮಾರ್ಗವೂ ಇರಲಿಲ್ಲ. ಅವನ ಅಪರಾಧಗಳ ಸಾಕ್ಷಿಗಾಗಿ ಎಲ್ಲ ಪ್ರಮಾಣಗಳೂ ಸಿದ್ಧವಿದ್ದವು. ಅದರಿಂದ ಅವನು ಭಯ, ಉದ್ವೇಗ ಮುಂತಾದವುಗಳಿಂದ ಬಿರುಗಾಳಿಯಿಂದಲ್ಲಾಡುತ್ತಿರುವ ಮರದೊಳಗಿನ ಹಣ್ಣೆಲೆಯಂತೆ ಥರಥರನೆ ನಡುಗಹತ್ತಿದನು. ಬ್ಲೇಕನು ಆತನನ್ನು ಕುರಿತು:—"ನೇಭಿಲ್, ಅಂದು ರಾತ್ರಿ ನೀನು ನನ್ನ ಎಲ್ಲ ಪ್ರಯತ್ನ

ಗಳನ್ನೂ ಮುಸಿನುಂಗಿಸಿದ್ದೆ. ನೀನು ನಿನ್ನ ಆಶ್ರಿತ ಕಳ್ಳರ ಮೂಲಕ ಕಳವಿನ ಮಾಲನ್ನು ದಾಟಿಸಿ ಕೇವಲ ಸಾಧುವಾಗಿ ಬಿಟ್ಟಿದ್ದೆ; ಆದರೆ ಈಗ? ಇಂದು ಆ ನಿನ್ನ ಮಾನ-ಮನ್ನಣೆಗಳ ಅಟ್ಟಹಾಸವೆಲ್ಲಿದೆ? ನೀನು ನಿನ್ನ ಪಾಪಕ್ಕೆ ಯೋಗ್ಯವಾದ ದಂಡಣೆಯನ್ನು ಹೊಂದುವೆ. ನಿನ್ನ ದುಃಖ-ದುರ್ದೆಸೆಗಳನ್ನು ಕಂಡು ನನ್ನ ಹೃದಯದಲ್ಲಿ ಅಣುಮಾತ್ರವೂ ದಯೆಯು ಸಂಚಾರವಾಗದು. ನಿನ್ನ ಬಂಧುಗಳೆಲ್ಲ ನಿನ್ನ ಮುಸುಡಿ ನೋಡಿ ತಿರಸ್ಕಾರದಿಂದ ಮೋರೆ ತಿರುಗಿಸುವರು! ನಿನ್ನ ಕೀರ್ತಿಯ ಆಖ್ಯಾನವನ್ನು ಕೇಳಿ ನಿನ್ನನ್ನು ತಮ್ಮ ಬಂಧುವೆಂದು ಹೇಳಿಸಿಕೊಳ್ಳಲಿಕ್ಕೆ ಎಲ್ಲರಿಗೂ ನಾಚಿಕೆ ಎನಿಸುವದು. ನಿನ್ನ ಅಸ್ತಿತ್ವದ ನೆನಪು ಕೂಡ ಇನ್ನೆರಡು ದಿನಗಳ ನಂತರ ನಿನ್ನವರೆನಿಸಿಕೊಳ್ಳುವವರಾರಿಗೂ ಉಳಿಯಲಾರದು.

ನೇಭಿಲನು ಬ್ಲೇಕನ ಮಾತಿಗೇನೂ ಉತ್ತರ ಕೊಡದೆ ತಲೆ ತಗ್ಗಿಸಿಕೊಂಡು ನಿಂತುಬಿಟ್ಟಿದ್ದನು. ಅವನ ಎರಡೂ ಕಣ್ಣುಗಳಿಂದ ಅಶ್ರುಗಳು ಧಾರೆಗಟ್ಟಿ ಹರಿಯಹತ್ತಿದವು. ಬಳಿಕ ಬ್ಲೇಕನು ಎರಡು ಗಾಡಿಗಳನ್ನು ತರಿಸಿದನು. ಒಂದರಲ್ಲಿ ಬ್ಲೇಕನು ಸ್ಮಿತ್ಥ, ಇನ್ಸಪೆಕ್ಟರ ಹಾಗು ಹರಕೋರ್ಟ ಇವರೊಡನೆ ಕುಳಿತನು. ಇನ್ನೊಂದರಲ್ಲಿ ಸಾದಾವೇಷದ ಪೋಲೀಸರಿಬ್ಬರೊಡನೆ ವಾರ್ಣಿ-ಜೋಸನರಿಬ್ಬರನ್ನು ಕೂಡಿಸಿದನು. ಟೈಗರವು ಅವೆರಡೂ ಗಾಡಿಗಳ ಹಿಂದಿನಿಂದ ಓಡಹತ್ತಿತು ಆ ಎರಡೂ ಗಾಡಿಗಳು ಅಂದು ರಾತ್ರಿ ಹನ್ನೊಂದು ಗಂಟೆಗೆ ದಕ್ಷಿಣಾಭಿಮುಖವಾಗಿ ಭರದಿಂದ ಓಡಹತ್ತಿದವು.

ಆ ಗಾಡಿಗಳು ಓಡಓಡುತ್ತ ಉಜ್ವಲ ದೀಪಮಾಲೆಗಳಿಂದ ಭೂಷಿತವಾದ ಒಂದು ನಾಟಕ ಗೃಹದೆದುರಿಗೆ ಬಂದು ನಿಂತುಕೊಂಡವು. ಆಗ ನಾಟಕವು ಮುಗಿದಿತ್ತು. ಆದರಿಂದ ಅಸಂಖ್ಯ ಗಾಡಿಗಳಿಂದಲೂ ನಾಟಕದಿಂದ ಹಿಂದಿರುಗಿದ ದರ್ಶಕ ಜನರಿಂದಲೂ ಆ ವಿಶಾಲವಾದ ರಾಜಬೀದಿಯು ಕಟ್ಟಾಗಿಬಿಟ್ಟಿತ್ತು. ದೇವರ ವಿಧಾನವೇ ಹಾಗಿದ್ದುದರಿಂದ ಆ ರಾತ್ರಿಯಲ್ಲಿ ಲಾರ್ಡ ಪೆಸಿಂಡೇಲನು ತನ್ನ ಹೆಂಡತಿ-ಮಗಳೊಂದಿಗೆ ಆ ನಾಟಕ ನೋಡಲಿಕ್ಕೆ ಬಂದಿದ್ದನು. ಅವರೆಲ್ಲರೂ ನಾಟಕ ಗೃಹದಿಂದ ಹೊರಬಿದ್ದು ತಮ್ಮ ಮೊಟರಿಗಾಗಿ ದಾರಿಯಲ್ಲಿ ಕಾದು ನಿಂತಿದ್ದರು. ಯಾವ ಗಾಡಿಯಲ್ಲಿ ನೇಭಿಲ ಹರಕೋರ್ಟನು ಕೈಕಾಲುಗಳ ಬೇಡಿಗಳಿಂದ ಭೂಷಿತನಾಗಿ ಕುಳಿತಿದ್ದನೋ ಆ ಗಾಡಿಯು ಅವರ ಎದುರಿಗೇ ಬಂದು ನಿಂತುಬಿಟ್ಟಿತು. ಪ್ರಚಂಡವಾದ ಬೆಳಕಿನಲ್ಲಿ ನೇಭಿಲ ಹರಕೋರ್ಟನನ್ನು ಗುರ್ತಿಸಲಿಕ್ಕೆ ಯಾವ ಆತಂಕವೂ ಆಗಲಿಲ್ಲ. ದಾರಿಯ ಮಗ್ಗಲಲ್ಲಿ ನಿಂತುಕೊಂಡಿದ್ದ ಡಾಫನಿ ಭಾರನನ್ನಳ ದೃಷ್ಟಿಯು ನೇಭಿ

ಲನ ಮುಖದ ಕಡೆಗೆ ಹೊರಳಿತು. ಅವನ ಕೈಕಾಲುಗಳೊಳಗಿನ ಬೇಡಿಗಳೂ ಅವಳಿಗೆ ಕಾಣಿಸದಿರಲಿಲ್ಲ ಡಾಫನಿಯು ಆತನ ಮೋರೆಯನ್ನು ನೋಡಿ ಬೆರಗಾಗಿ ತನ್ನ ತಂದೆಯನ್ನು ಕುರಿತು:—"ಅಪ್ಪಾ, ಅತ್ತ ನೋಡಿರಿ. ಆ ಗಾಡಿಯಲ್ಲೊಮ್ಮೆ ದಿಟ್ಟಿಸಿ ನೋಡಿರಿ. ಎಂಥ ಆಶ್ಚರ್ಯವಿದೆ ನೋಡಿರಿ."

ಲಾರ್ಡ ಮೆಸಿಂಡೇಲನೊಡನೆ ನೇಭಿಲ್ಲನ ದೃಷ್ಟಿಯು ಏನಿಮಯವಾಗುತ್ತಲೆ ಅವನು ತನ್ನ ಮುಖವನ್ನು ಗಾಡಿಯ ಒಂದು ಮೂಲೆಯ ಕಡೆಗೆ ತಿರುವಿ ಮರೆ ಮಾಡಿದನು. ಆಗ ನೇಭಿಲನ ಮನಸಿಗೆ ಹೇಗೆನಿಸಿದ್ದೀತೆಂಬದನ್ನು ವಾಚಕರೇ ತರ್ಕಿಸಿಕೊಳ್ಳಬಹುದು. ಅಷ್ಟರಲ್ಲಿ ದಾರಿಯು ತೆರವಾಗಲು, ಅವೆರಡೂ ಗಾದಿಗಳು ಮೊದಲಿನಂತೆ ವೇಗದಿಂದ ಸ್ಕಾಟಲಂಡ ಯಾರ್ಡಿನ ಕಡೆಗೆ ಓಡಹತ್ತಿದವು.

ಲಂಡನ್ನಿನೊಳಗಿನ ಶ್ರೇಷ್ಠ ಸಮಾಜದಲ್ಲಿ ಯಾವನ ಖ್ಯಾತಿಯು ಅಸಾಧಾರಣವಾಗಿದ್ದಿತೋ, ಆತನು ಕಳವಿನ ಅಪರಾಧದಿಂದ ಸೆರೆಹಿಡಿಯಲ್ಪಡಲು ಅಲ್ಲಿ ಆಗ ಎಷ್ಟು ಗೊಂದಲವೆಸ್ಸೀತೆಂಬದನ್ನು ಹೇಳಲಾಸಲ್ಲ. ಪೇಟೆಯಲ್ಲಿ, ಬೀದಿಯಲ್ಲಿ, ನಾಟಕ-ಸಿನೇಮಾಗಳಲ್ಲಿ, ಕ್ಲಬ್ಬುಗಳಲ್ಲಿ ಹೀಗೆ ಸರ್ವತ್ರದಲ್ಲೂ ನೇಭಿಲನ ಆಖ್ಯಾನವೇ ಆಖ್ಯಾನ! ಮಾತು-ಕಥೆಗಳಲ್ಲೂ ವೃತ್ತಪತ್ರಗಳಲ್ಲೂ ದೊಡ್ಡ ದೊಡ್ಡ ಜನರಲ್ಲಿ ರಹಸ್ಯಜನಕಗಳಾದ ಕಳವು-ದರೊಡೆಗಳಿಗೂ ನೇಭಿಲ ಹರಕೋರ್ಟನಿಗೂ ಸಂಬಂಧ ಹಚ್ಚಿದ್ದ ಹಲವು ರುಚಿ ರುಚಿಯಾದ ಕಥೆಗಳು ಹೊರಬೀಳಹತ್ತಿದವು. ಎಲ್ಲ ವರ್ಗದ ವಾಚಕರು ಬಹು ಸಂತೋಷದಿಂದ ಆ ಕಾಲಸರ್ಪನ ಆ ಕಥೆಗಳನ್ನು ಓದಿ ಸಂತಸಪಡಹತ್ತಿದರು. ಯಥಾಸಮಯದಲ್ಲಿ ನ್ಯಾಯಾಲಯದೊಳಗೆ ಆ ಮೂವರೂ ಕಳ್ಳರ ವಿಚಾರಣೆಯಾಗಿ ಅವರುಗಳಿಗೆ ಅತ್ಯಂತ ಕಠೋರವಾದ ದೀರ್ಘಕಾಲದ ಕಾರಾಗೃಹದ ಶಿಕ್ಷೆಗಳಾದವು. ಲೇಡೀ ಹೆಜೆಲೌಡಳು ತನ್ನ ಕಳವಾದ ಆಭರಣಗಳನ್ನು ಗುರ್ತಿಸಿಕೊಂಡಳು. ಗರಮ್ಲಿ ಸ್ಟ್ರೀಟಿನೊಳಗಿನ ಕಳ್ಳರ ನಿವಾಸದಲ್ಲೂ ಭೀಯಾರ ಸ್ಟ್ರೀಟಿನೊಳಗಿನ ಹರಕೋರ್ಟನ ಮನೆಯಲ್ಲೂ ಝಡತಿ ಮಾಡಲಾಗಿ ಹಲವು ಗುಪ್ತ ಕಾಗದ-ಪತ್ರಗಳು ಸಿಕ್ಕವು. ಅವುಗಳ ಮೂಲಕ ಸ್ಪಷ್ಟವಾಗಿ ತಿಳಿಯಿತೇನಂದರೆ, ನೇಭಿಲ ಹರಕೋರ್ಟನ ಉಪದೇಶದಿಂದಲೂ ಸಂಧಾನದಿಂದಲೂ ವಾರ್ಣೆ-ಜೋಸನರು ದೊಡ್ಡ ದೊಡ್ಡ ಲಾರ್ಡರ ಮನೆಗಳಲ್ಲಿ ಎಷ್ಟೋ ದಿನಗಳಿಂದ ಕಳವು-ದರವಡೆ ಮಾಡುತ್ತಿದ್ದರು; ಹಾಗು ಇನ್ನೂ ಅನೇಕ ಅಂಥ ಸಂದರ್ಭಗಳು ಅವರಿಂದ ಆಗತಕ್ಕವಿದ್ದವು.

ಈ ರೀತಿಯಾಗಿ ಲಂಡನ್ನಿನ ಸನ್ಮಾನ್ಯ ಸುಖೀ ಸಮಾಜದ ಅಭಿಜಾತ

ಗೌರವಕ್ಕೆ ಕಲಂಕಪ್ರಾಯನೂ ಕೀಳ ಕಳ್ಳನೂ ಕಪಟಿ, ಕುಚಕ್ರಿ, ಖಲನೂ ಆದ ನೇಭಿಲ ಹರಕೋರ್ಟನ ಪಾಪಮಯವೂ, ತಿರಸ್ಕರಣೀಯವೂ, ಉಪೇಕ್ಷಿತವೂ, ಉಪಹಾಸ್ಯಕರವೂ ಆದ ಶೋಚನೀಯ ಜೀವನ ನಾಟಕದ ಕೊನೆಯ ಅಂಕಿನ ಮಧ್ಯದಲ್ಲೇ ಕಟ್ಟಕಡೆಯ ಪರವೆಯು ಬಿದ್ದಿತು. ಒಂದು ಸಮಯದಲ್ಲಿ ಯಾರು ಅವನ ಪರಮ ಬಂಧುಗಳಾಗಿದ್ದರೋ ಈಗ ಅವರೇ ಅವನ ಸಂಬಂಧದ ಏನಾವರೂ ಪ್ರಸಂಗ ಹೊರಟರೆ, ತಿರಸ್ಕಾರದಿಂದ ಹೆಚ್ಚಾಗಿ ಮೂಗನ್ನೇರಿಸಹತ್ತುತ್ತಾರೆ. ಅವನ ಹೆಸರು ಎತ್ತುವದು ಕೂಡ ಅವಮಾನಕರವೆಂದು ಹಲವರು ತಿಳಿಯುಹತ್ತಿದರು. ಯಾವ ನರಾಧಮು ಕಾಲಸರ್ಪನು ಬ್ರಾವುನ್ ಕಿಲ್ಡೀಯರಾರನ ಸರ್ವನಾಶಕ್ಕೆಂದು ಟೊಂಕ ಕಟ್ಟಿದ್ದನೋ ಹಿತೈಷಿ ಬಂಧುವೆಂದಾಗಿ ನಾನಾ ಪ್ರಲೋಭನಗಳಿಂದ ಮೋಸಗೊಳಿಸಿ ಆತನನ್ನು ಅಧಃಪತನದ ರಸಾತಲಕ್ಕೆ ಮುಟ್ಟಿಸಿರುವನೋ, ಅವನ ಜೀವನದ ಎಲ್ಲ ಸುಖ, ಎಲ್ಲ ಆಶೆಗಳನ್ನು ಪುಡಿಪುಡಿ ಮಾಡಿ, ಸಾಮಾನ್ಯ ಕೀಟಕದಂತೆ ಆತನನ್ನು ಕಾಲ ಕೆಳಗೆ ಚೆಲ್ಲಿ ಕೊಟ್ಟು, ಸ್ವಂತದ ಜೀವನ, ಧನ, ಮಾನ-ಮನ್ನಣೆ, ಸುಖ-ಸಂಪತ್ತು ಹಾಗು ಸಾಫಲ್ಯ-ಗೌರವಗಳನ್ನು ಸ್ಥಾಪಿಸಿಕೊಳ್ಳಲಿಕ್ಕೆ ದೃಢಸಂಕಲ್ಪಿಯಾಗಿದ್ದನು. ಸರ್ವದರ್ಶಿಯಾದ ವಿಧಾತನ ನಿರಪೇಕ್ಷ ಮತ್ತು ಅಮೋಘವಾದ ವಿಧಾನದಿಂದ ಈಗತಾನೇ ದುರುಳತನದ ಕಲಂಕಧ್ವಜವನ್ನು ಹೆಗಲ ಮೇಲೆ ಹೊತ್ತುಕೊಂಡು ಚಿರವಿಸ್ಮೃತಿಯ, ದುರುಳತನದ ಕಾರ್ಗತ್ತಲೆಯ ಗಹ್ವರದಲ್ಲಿ ಪ್ರವೇಶಮಾಡಬೇಕಾಯಿತು! ಅದಾರು ಅನ್ನುವರು, ಅಧರ್ಮವೇ ಭೂಮಿಯ ಮೇಲೆ ಬಹು ದಿನ ವಿಜಯಿಯಾಗುವದೆಂತು?

ಅತ್ತ ಡಾಫನಿ ಭಾರನನ್ನಳು ಅತ್ಯಂತ ರೋಗಪೀಡಿತಳಾಗಲು, ಪ್ರಸಿದ್ಧ ಡಾಕ್ಟರರ ಅಭಿಪ್ರಾಯದ ಮೇರೆಗೆ ಲಾರ್ಡ ಮೆಸಿಂಡೇಲನು ಅವಳನ್ನು ಕರೆದುಕೊಂಡು ಹವೆ ಬದಲಿಸಲಿಕ್ಕೆಂದು ಒಳ್ಳೇ ಹವೆಯ ಪ್ರದೇಶಗಳಿಗೆ ಪ್ರಯಾಣ ಬೆಳೆಸಿದನು. ಸಮಾಜದಿಂದ ಬೇರೆಯಾದ, ಪತ್ತೆಯಿಲ್ಲದ ಹತಭಾಗ್ಯ ಬ್ರಾವುನ್ ಕಿಲ್ಡೀಯರಾರನು ಜೀವನದ ಎಲ್ಲ ಅವಲಂಬನಗಳನ್ನು ಕಳೆದುಕೊಂಡು, ಎಲ್ಲ ಆಶೆಗಳಿಗೆ ನೀರೆರಚಿ, ಹತಾಶ ಹೃದಯದಿಂದ ಎಲ್ಲಿಯೋ ಕಾಣದಾದನು. ಅವನನ್ನು ನೋಡಬೇಕೆಂದು ಆದಾರಿಗೂ ಮರುಕವಿರಲಿಲ್ಲ! ಹೀಗಿದ್ದರೂ ಆತನ ಆ ದುರವಸ್ಥೆಯಲ್ಲೂ ಯಾವ ಆತನ ಸ್ವಲ್ಪ ಹಿತೈಷಿಬಂಧುಗಳು ಅವನ ಸಂಗತಿಯನ್ನು ಮರೆಯದಿದ್ದರೋ ಆವರಿಗೂ ಅವನ ಇರವಿನ ಬಗ್ಗೆ ಯಾವ ಪತ್ತೆಯೂ ಹತ್ತಿರಲಿಲ್ಲ.

——

## ಇಂಗ್ಲಂಡು ಜರ್ಮನಿಯ ವಿರುದ್ಧ ಯುದ್ಧ ಸಾರಿದೆ.

ಕಳವು-ದರವಡೆಗಳ ಬೇತುಗಾರನೆಂಬ ಅಪರಾಧಕ್ಕಾಗಿ ನೇಭಿಲ್ಲ ಹರ ಕೋರ್ಟನಿಗೆ ದೀರ್ಘ ಅವಧಿಯ ಸಶ್ರಮ ಕಾರಾಗೃಹದ ಶಿಕ್ಷೆಯು ವಿಧಿಸಲ್ಪಟ್ಟ ಬಳಿಕ ಲಂಡನ್ನಿನ ಸನ್ಮಾನ್ಯ ಸಮಾಜದೊಳಗೆ ಆತನ ಹೆಸರು ಮರೆಯಾಗಿ ಬಿಟ್ಟಿತು. ಲಾರ್ಡ ಮೆಸಿಂಡೇಲನು ಸ್ತ್ರೀ-ಕನ್ಯೆಯರೊಡನೆ ಸುಖ ಪ್ರವಾಸದಿಂದ ದೇಹಸ್ವಾಸ್ಥ್ಯಗಳನ್ನು ಹೊಂದಿ ಎಷ್ಟೋ ತಿಂಗಳುಗಳ ನಂತರ ಲಂಡನ್ನ ಪಟ್ಟಣಕ್ಕೆ ಹಿಂದಿರುಗಿದನು. ಆತನು ಬಂದ ಮೇಲೆ ಪ್ರತಿಯೊಂದು ಸಾಮಾ ಜಿಕ ಉತ್ಸವಗಳಲ್ಲಿ ಆತನ ಅಂಗವು ಇದ್ದೇ ಇರುತ್ತಿತ್ತು; ಆದರೆ ಡಾಫನಿ ಭಾರ ನನ್ನಳ ಸ್ಥಿತಿಯು ಮಾತ್ರ ಈಗ ತೀರ ವಿಪರೀತವಾಗಿತ್ತು. ಅವಳ ಆಗಿನ ಸದಾನಂದಮಯ ಪ್ರಫುಲ್ಲ ಭಾವವು ಈಗಿರಲಿಲ್ಲ. ಅವಳ ಆಗಿನ ಮಧುರ ಹಾಸ್ಯವು ಲೋಪವಾಗಿತ್ತು. ಆಗಲೆ ಅರಳಿದ ಕಮಲದಂತಹ ಅವಳ ಅಪರೂಪ ರೂಪ-ಲಾವಣ್ಯಗಳು ಎತ್ತಲೋ ಮಾಯವಾಗಿ ಬಿಟ್ಟಿದ್ದವು; ಅಲ್ಲದೆ ಅಸ್ವಾಭಾವಿಕ ಗಾಂಭೀರ್ಯವು ಅವಳ ಆ ಬಾಲಿಕಾಸುಲಭವಾದ ಚಪಲ ಭಾವಕ್ಕೆ ಆದೇಶವಾಗಿತ್ತು. ಯೌವನ ಭರದಿಂದ ಮುಸುಗುಟ್ಟುತ್ತಿದ್ದ ಅವಳ ದೇಹವು ಕ್ಷೀಣವಾಗಿತ್ತು; ಮನಸ್ಸು ಚಿಂತಾಕ್ರಾಂತವಾಗಿತ್ತು. ಉಜ್ವಲ ಮೈ ಕಾಂತಿಯು ಮಂದರೂಪಹೊಂದಿತ್ತು.

ಅತ್ತ ಕಿಲ್ಡೇರಿಯಾರನ ಕಠೋರ ಹೃದಯದ ಸೋದರತ್ತೆಯಾದ ಮಿಸೆಸ್ ಓರಾಯನ್ ಡೀನಳು ಈ ಕೆಲ ತಿಂಗಳುಗಳಲ್ಲೇ ಮುಪ್ಪಿನಿಂದ ಜೀರ್ಣಳಾಗಿ, ಕಠಿಣ ರೋಗದಿಂದ ಅಶಕ್ತಳಾಗಿ, ಎದ್ದೇಳಲೂ ಕೂಡ ಬಾರದೆ ಸರೇ ಜಿಲ್ಹೆ ಯೊಳಗಿನ ತನ್ನ ಮನೆಯಲ್ಲಿ ಬಿದ್ದುಕೊಂಡಿದ್ದಳು.

ನೋಡ-ನೋಡುತ್ತಿರಲು ಗ್ರೀಷ್ಮ ಋತುವು ಹಿಂದಾಯಿತು. ಆಕಸ್ಮಿಕ ವಾಗಿ ಯುರೋಪದ ಎಲ್ಲ ದೇಶಗಳಲ್ಲಿಯ ಸಶಸ್ತ್ರ ಶಾಂತಿಯ ಮೋಹ ಮಡಗಿದ್ದರಿಂದ ಇಂಗ್ಲಂಡದ ಆಕಾಶದಲ್ಲೂ ಕಾಳರಾತ್ರಿಯ ಅಂಧಕಾರವು ಒಟ್ಟು ಗೂಡತೊಡಗಿತು. ಬಹು ದೂರದಿಂದ ರಣಕ್ಷೇತ್ರದ ಒಳ್ಳೇ ಗಂಭೀರವಾದ್ವ ತೋಫಿನ ಸಪ್ಪಳ ಹಾಗು ಶಸ್ತ್ರಾಸ್ತ್ರಗಳ ಠಣತ್ಕಾರವು ಇಂಗ್ಲಂಡ ನಿವಾಸಿಗಳ ಕಿವಿ ಗಳಲ್ಲಿ ಪ್ರವೇಶವಾಗಹತ್ತಿದ್ದವು. ಇಂಗ್ಲಂಡದ ಸ್ತ್ರೀಪುರುಷರುಗಳು ಇದರ ಪರಿ ಣಾಮ ಏನಾಗುವದೋ ಎಂದು ಭಾವಿಸತೊಡಗಿದರು. ಆ ರಣ ದುಂದುಭಿ ಯ ಧ್ವನಿಯು ಸಮುದ್ರದಾಚೆಯಲ್ಲಿ ಕೇಳಿಸಲಾರದೇ? ಆಗ ಎಲ್ಲರ ಬಾಯ ಲ್ಲೂ ಜರ್ಮನಿಯು ಬೆಲ್ಜಿಯಮ್ಮದ ಮೇಲೆ ದಂಡೆತ್ತಿ ಬರುತ್ತಿರುವ ಸುದ್ದಿ.

ಇಂಥ ಘೋರ ಸಮಯದ ಒಂದು ರಾತ್ರಿಯಲ್ಲಿ ಒಬ್ಬ ಯುವತಿಯು

ಲಂಡನ್ನಿನ ಈಸ್ಟ ಎಂಡದ ಒಂದು ಜನದಟ್ಟಣೆಯ ದಾರಿಯಲ್ಲಿ ಒಬ್ಬೊಂಟಿಗ ಳಾಗಿ ಅಡ್ಡಾಡುತ್ತಿದ್ದಳು. ಒಂದು ಅರಿವೆಯಿಂದ ಅವಳು ತನ್ನ ಮುಖ ಕಮಲವನ್ನು ಮುಚ್ಚಿಕೊಂಡಿದ್ದಳು. ಅವಳ ಬಂಗಾರದ ಬಣ್ಣದ ತಲೆಗೂದ ಲುಗಳು ಒಂದು ಸಾಮಾನ್ಯ ಬೆಲೆಯ ಟೊಪ್ಪಿಗೆಯ ಕೆಳಗೆ ಮುಚ್ಚಲ್ಪಟ್ಟಿದ್ದವು. ಕೀರ ಸಾದಾ ತರಹದ ಉಡುಪು-ತೊಡವುಗಳಿಂದ ಅವಳ ದೇಹವು ಕುತ್ತಿಗೆ ಯಿಂದ ಪಾದಗಳ ವರೆಗೂ ಮುಚ್ಚಲ್ಪಟ್ಟಿತು. ಅವಳ ಆ ಉಡುಪಿನಿಂದ ಅವ ಳನ್ನು ಸರ್ವಸಾಧಾರಣ ಮನೆಯ ಕನ್ಯೆಯೆಂದು ತಿಳಿಯಬಹುದಾಗಿತ್ತು; ಆದರೆ ಅವಳಂತಹ ಉಚ್ಚವಂಶೀಯ ಯುವತಿಯು ಲಂಡನ್ನಿನ ಈ ಹೊಲಸು ಮಯ, ದಾರಿದ್ರ್ಯಪೂರ್ಣರ ನಿವಾಸದ ಗ್ರಾಮದಲ್ಲಿ ಎಂದಾದರೂ ಕಾಲಿಟ್ಟಿ ದ್ದಳೋ ಇಲ್ಲವೋ ಅನುಮಾನವೇ ಸರಿ. ಅವಳ ಬಾಹ್ಯಾವರಣದ ಕೆಳಗೆ ಯಾವ ಬಹುಮೂಲ್ಯದ ಉಡುಪು ಅಡಗಿದ್ದಿತೋ ಅದನ್ನು ನೋಡಿದರೆ ಧನಾಢ್ಯ ತರುಣರ ವಿಸ್ಮಯಕ್ಕೂ ಮೇರೆ ಉಳಿಯುತ್ತಿರಲಿಲ್ಲ. ಬಂಡ ಸ್ಟ್ರೀಟಿನ ವಿಪುಲ ವಿಲಾಸತೆಯೂ ಫ್ಯಾಶನ್ನುಗಳ ಆಗರವೂ ಆ ಉಡುಪಿನಲ್ಲಿ ಕಂಡು ಬರುತ್ತಿತ್ತು.

ಆ ಯುವತಿಯು ದಾರಿ ನಡೆಯುತ್ತಿರುವಾಗ ಅಸ್ಫುಟವಾಗಿ:--"ಹಾಯು! ಒಮ್ಮೆಯಾದರೂ ಆತನ ದರ್ಶನವಾದರೆ ಅವನ ಕಾಲಿಗೆ ಬಿದ್ದು ಅವನಲ್ಲಿ ಕ್ಷಮೆಯ ಭಿಕ್ಷೆಯನ್ನು ಬೇಡೇನು."

ಅವಳು ಇಂದೇ ಅಲ್ಲಿಗೆ ಬಂದಿದ್ದಳೆಂತಲ್ಲ; ಆ ತರುಣಿಯು ಪುಂಡ ಜನರ ಕಣ್ಣಿಗೆ ಬೀಳದಂತೆ ಎಷ್ಟೋ ದಿನಗಳಿಂದ ತನ್ನ ಟ್ಯಾಕ್ಸಿಯಲ್ಲಿ ಲಂಡನ್ನಿ ನಿಂದ ಆ ದರಿದ್ರರ ಹಳ್ಳಿಗೆ ಬಂದು ರಾತ್ರಿಯ ಹೊತ್ತಿನಲ್ಲಿ ಇದೇ ರೀತಿಯಿಂದ ಯಾರನ್ನೋ ಶೋಧಿಸುತ್ತಿದ್ದಳು; ಆದರೆ ಅವಳು ಇದುವರೆಗೂ ಕೃತಕಾರ್ಯ ಳಾಗಿರಲಿಲ್ಲ. ತನ್ನ ಟ್ಯಾಕ್ಸಿಯನ್ನು ದೂರದಲ್ಲಿ ನಿಲ್ಲಿಸಿ, ಅವಳು ಬೇರೆ ಬೇರೆ ದಾರಿಗಳಲ್ಲಿ ಕಾಲು ನಡಿಗೆಯಿಂದಲೇ ಅಡ್ಡಾಡುತ್ತಿದ್ದಳು; ಆದರೆ ಯಾವನ ಸಲುವಾಗಿ ಅವಳ ಜೀವವು ಹಗಲಿರುಳೂ ಹಾಹಾಕಾರ ಮಾಡುತ್ತಿದ್ದಿತೋ ಆತ ನೆಲ್ಲಿ? ಅವಳು ಯಾವ ನರರತ್ನವನ್ನು ಕಳೆಕೊಂಡಿದ್ದಳೋ ಆ ವಿಸ್ತೀರ್ಣವಾದ ಜನಸಮುದಾಯದಲ್ಲಿ ಅವನನ್ನೆಲ್ಲಿ ಹುಡುಕಿಕೊಳ್ಳಬೇಕು? ಅವಳು ಹೃದ್ರೋ ಗದಿಂದ ಕುರುಡಳಾದಂತಾಗಿ ಅಲ್ಲಿ ಮತ್ತೆ ಮತ್ತೆ ಸುತ್ತುತ್ತಿದ್ದಳು. ಅವಳ ಸುತ್ತ ಮುತ್ತು ದಾರಿದ್ರ್ಯವೆಂಬ ರಕ್ಕಸಿಯ ಅಟ್ಟಹಾಸ್ಯ! ಧೂಳ ಮುಣುಗಿದ, ಹರಕ ಹೊಲಸಾದ ಉಡುಪು ಧರಿಸಿದ, ಹೊಟ್ಟೆಗಿಲ್ಲದೆ ಬಳಲುವ, ನಿವಾರಿಸಲಾರದ ಅಭಾವದ ಲೋಹಚಕ್ರದಲ್ಲಿ ನಿತ್ಯವೂ ಹಿಂಡಿ ಹಿಚುಕಲ್ಪಡುತ್ತಿರುವ ಸ್ತ್ರೀಪುರು

ಷರ ರಾಗ-ಶೋಕ, ಪಾಪ-ತಾಪಗಳ ಪ್ರ ಚ ಂ ಡ ಪ್ರ ವಾ ಹ ದ ಮಧ್ಯೆ ದಲ್ಲಿ ಈ ಬುರುಕೆ ಧರಿಸಿದ ಸುಂದರ ನಾರೀಮೂರ್ತಿಯು! ಅವಳು ಬುರುಕೆ ಯೊಳಗಿಂದ ಸತೃಷ್ಣದೃಷ್ಟಿಯಿಂದ ಪ್ರತಿಯೊಬ್ಬ ಪಥಿಕನ ಮುಖವನ್ನು ನಿರೀಕ್ಷಿ ಸುತ್ತಿದ್ದಳು. ಹುಟ್ಟು ಬಡವ, ಪಾಪಪಂಕದಲ್ಲಿ ಮುಳುಗಿದ್ದ, ಕೀಳುಜಾತಿಯ ಆ ಹಳ್ಳಿಗರ ಮನೆಮನೆಗೂ ಹೋಗಿ ತನ್ನ ಪರಿಚಯದ ಮುಖವೇನಾದರೂ ಕಾಣುವುದೇನೆಂದು ನಿರೀಕ್ಷಿಸುತ್ತಿದ್ದಳು. ಅವಳಲ್ಲಿಯ ಅಹಂಕಾರ, ದರ್ಪ ಮುಂತಾದವುಗಳೆಲ್ಲ ಮಣ್ಣುಗೂಡಿಬಿಟ್ಟಿದ್ದವು. ಆತನ ವಿರಹದಿಂದ ಬಳಲಿದ, ವೇದನೆಗಳಿಂದ ನಡುಗುವ, ಸುಖಶಾಂತಿ ವಿಹೀನವಾದ ಹತಾಶ ಹೃದಯವನ್ನು ಭೇದಿಸಿ ಕಬೀರದಾಸನಂತೆ:-"ಮರಣರೇ ತುಹೂ ಮಮ ಶಾಮ ಸಮಾನ!" ಎಂಬನೇ ಆ ವ್ಯಾಕುಲಧ್ವನಿಯು ಹೊರಹೊರಡುತ್ತಿತ್ತು; ಆದರೆ ಆತನನ್ನು ಒಮ್ಮೆಯಾದರೂ ಕಾಣದೆ ಸಾಯಲಿಕ್ಕೂ ಇಚ್ಛೆಯುಂಟಾಗುತ್ತಿರಲಿಲ್ಲ. ಧನ್ಯ! ನಾರಿಯ ಪ್ರೇಮವೇ ಧನ್ಯ! ಪೌರ್ವಾತ್ಯರಲ್ಲೇ ಆಗಲಿ, ಪಾಶ್ಚಿಮಾತ್ಯರಲ್ಲೇ ಆಗಲಿ ನಾರೀ ಪ್ರೇಮಕ್ಕೆ ಭೇದವಿಲ್ಲ.

ಆ ಯುವತಿಯು ಹೋಗಹೋಗುತ್ತ ಒಂದು ಸಂದಿಯ ಓಣಿಯಲ್ಲಿ ಹೊಕ್ಕಳು. ಅವಳ ಕೈಯಲ್ಲೊಂದು ಬ್ಯಾಗ್ ಇದ್ದಿತು. ಒಬ್ಬ ಕಳ್ಳನು ಅವಳ ಕೈಯೊಳಗಿನ ಆ ಬ್ಯಾಗನ್ನು ಕಸಕೊಂಡು ಓಡಹತ್ತಿದನು. ಆ ಯುವತಿಯು ಆ ಆಕಸ್ಮಿಕ ವಿಪತ್ತಿನಿಂದ ಅಂಜಿ ತತ್ತರಿಸುತ್ತಿದಳು. ಕೂಗಿ ಯಾರನ್ನಾದರೂ ಸಹಾಯಕ್ಕೆ ಕರೆಯುವ ಶಕ್ತಿಯು ಕೂಡ ಅವಳಲ್ಲುಳಿಯಲಿಲ್ಲ; ಆದರೆ ಒಬ್ಬ ಪಥಿಕನು ಸಮೀಪದಿಂದಲೇ ಆ ದಾರೀ ಒಡೆಯುವವನನ್ನು ಕಂಡು ಕೂಗಿ ಅನ್ನು ತ್ತಾನೆ:-"ಕಳ್ಳ! ಕಳ್ಳ!! ಅವನನ್ನು ಹಿಡಿಯಿರಿ!"

ಆ ದಾರಿಕಾರನ ಆ ಕೂಗಾಟದಿಂದ ಗದ್ದಲವೇ ಗದ್ದಲವಾಗಿ ಹೋಯಿತು. ನಾಲ್ಕೂ ಕಡೆಗಳಿಂದ ಎಷ್ಟೋ ಜನರು ಓಡಿಬರಹತ್ತಿದರು. ಅವರೆಲ್ಲರೂ ಆ ತರುಣಿಯನ್ನು ನಾಲ್ಕೂ ಕಡೆಯಿಂದ ಸುತ್ತುವರೆದು ನಿಂತುಕೊಂಡರು. ಹಲವು ಜನರ ಸಂದಣಿಯಿಂದ ಅವಳಿಗೆ ಶ್ವಾಸನಿರೋಧವಾಗಹತ್ತಿತು; ಹಾಗು ಅವಳು ನಿಮಿಷಾರ್ಧದಲ್ಲಿ ಅಲ್ಲೇ ಮೂರ್ಛೆಹೊಂದಿಬಿದ್ದಳು. ಆ ಅವಸ್ಥೆಯಲ್ಲಿ ಅವಳು ಬಹುಶಃ ಜನರ ತುಳಿದಾಟಕ್ಕೆ ಬಲಿಯಾಗುವವಳೇ; ಆದರೆ ಅವಳು ಆ ಪರಿ ವಿಪತ್ತಿಗೀಡಾದುದನ್ನು ಕಂಡು ಒಬ್ಬ ಪೋಲೀಸನು ಅಲ್ಲಿಗೆ ಬಂದು ಅವಳನ್ನು ಹಿಡಿದೆತ್ತಿ ಆ ಜನಸಮ್ಮರ್ದದ ಆಚೆಗೆ ತಕ್ಕೊಂಡು ಹೋದನು.

ಅಷ್ಟರಲ್ಲಿ ಅವಳ ಬ್ಯಾಗ್ ತಕ್ಕೊಂಡು ಹೋಗಿದ್ದ ಕಳ್ಳನು ಕಾಣದಾದನು. ಆಗ ಆ ಯುವತಿಯ ಅವಸ್ಥೆಯು ಕಡು ಶೋಚನೀಯವಾಯಿತು. ಒಬ್ಬ

ಉದಾರಚರಿತ, ಪರೋಪಕಾರಿ ಡಾಕ್ಟರನು ಆ ದರಿದ್ರರ ಹಳ್ಳಿಗೆ ರೋಗದಿಂದ ಪೀಡಿತ ದರಿದ್ರ ಜನರಿಗೆ ಚಿಕಿತ್ಸೆಮಾಡಲೋಸುಗ ಆಗ ಅಲ್ಲಿಗೆ ಬಂದಿದ್ದನು. ಆತನ ಬಳಿಯಲ್ಲಿ ಔಷಧದ ಪೆಟ್ಟಿಗೆಯಿದ್ದಿತು. ಅತನು ಆ ಸ್ಮೃತಿದಪ್ಪಿ ಬಿದ್ದಿದ್ದ ತರುಣಿಯ ಪಕ್ಕದಲ್ಲಿ ಕುಳಿತು ಅವಳ ಬುರುಕೆಯನ್ನು ಬದಿಗೆ ಸರಿಸಿ ಅವಳ ಬಾಯಲ್ಲಿ ತುಸ ಬ್ರ್ಯಾಂಡಿಯನ್ನು ಸುರುವಿದನು. ಒಬ್ಬ ತರುಣನು ಅದೇ ಕಾಲಕ್ಕೆ ಅಲ್ಲಿಗೆ ಬಂದು ನಿಂತುಕೊಂಡನು. ಅವನ ಉಡುಪು ಮಲಿನ ವೂ ಮೋರೆಯ ಮೇಲೆ ದಟ್ಟವಾಗಿ ಬೆಳೆದ ಗಡ್ಡ-ಮೀಸೆಗಳೂ ಇದ್ದವು. ಬೀದಿಯ ಬೆಳಕಿನಲ್ಲಿ ಅವನು ಆ ತರುಣಿಯ ಮುಖವನ್ನು ನೋಡುತ್ತಲೇ ಬೆಚ್ಚಿಬಿದ್ದನು. ಒಂದು ನಿಮಿಷ ಮಾತ್ರವೇ ಆತನ ಹೃದಯದ ವ್ಯಾಪಾರವು ಕಟ್ಟಾಯಿತು! ಅವನು ನಿಟ್ಟುಸಿರುಗರೆದು ವಿಸ್ಮಯಭರದಿಂದ:—"ನನಗೇನು ಕನಸು ಬಿದ್ದಿದೆಯೋ? ಡಾಫನಿಯು ಇಲ್ಲಿಗೇಕೆ?" ಎಂದಂದನು.

ಆತನು ತುಸ ದೂರದಲ್ಲಿಯೇ ನಿಂತುಕೊಂಡು ಯೋಚಿಸಹತ್ತಿದನು: "ಈ ರಾತ್ರಿಯ ಕಾಲದಲ್ಲಿ ಪೊರಾಯಿಟ್ ಚ್ಯಾಂಪೇಲದಂತಹ ಹೊಲಸು ಗಲ್ಲಿ ಯಲ್ಲಿ ಡಾಫನಿ ಭಾರನನ್ನಳು ಕಾಲು ನಡಿಗೆಯಿಂದ ಅಡ್ಡಾಡುತ್ತಿರುವಳಲ್ಲ! ಇದೇನುನನ್ನಕಣ್ಣಿನ ವಿಭ್ರಮವೋ ಅಥವಾ ಇವಳು ಇಲ್ಲಿ ನನ್ನನ್ನೇ ಹುಡುಕಿ ಕೊಂಡು ಬಂದಿರುವಳೋ? ದಾರಿಯಲ್ಲೇ ಇವಳು ಹೀಗೆ ಮೂರ್ಛೆ ಹೊಂದಿ ದ್ದೇಕೆ?"

ಅದಕ್ಕೆ ಡಾಕ್ಟರ:—"ಏನೂ ಭಯವಿಲ್ಲ. ಇವಳು ಇಷ್ಟರಲ್ಲೇ ಎಚ್ಚರಿ ಯುವಳು."

ಯಾವ ಪೋಲೀಸನು ಅವಳನ್ನು ಜನಸಂದಣಿಯೊಳಗಿಂದ ಎತ್ತಿತಂದಿ ದ್ದನೋ ಅವನು:—"ಈ ಹುಡುಗಿ ಯಾರು? ಎಂಥ ರೂಪವಿದು? ಈ ಯುವ ತಿಯು ಖಂಡಿತವಾಗಿಯೂ ಯಾವನೊಬ್ಬ ಸನ್ಮಾನ್ಯನ ಮಗಳು. ಇವಳು ಇಲ್ಲಿಗೇಕೆ ಬಂದಿದ್ದಾಳು?"

ಆ ತರುಣನು:—"ನಾನು ಇವಳನ್ನು ಗುರ್ತಿಸುತ್ತೇನೆ. ಈ ಹಳ್ಳಿಯಲ್ಲಿ ಇವಳ ಮನೆಯಿಲ್ಲ. ಈ ಹಳ್ಳಿಯು ಇವಳ ಪಾದಸ್ಪರ್ಶಕ್ಕೂ ಯೋಗ್ಯವಲ್ಲ. ಈ ಯುವತಿಯು ಬಹುಶಃ ಇಲ್ಲಿಯ ದೀನದರಿದ್ರರಿಗೆ ಸಹಾಯ ನೀಡಲಿಕ್ಕೆಂದು ಬಂದಿರಬಹುದಾಗಿದೆ. ಒಂದು ಗಾಡಿಯೆಲ್ಲಾದರೂ ದೊರೆತೀತೆ?"

ಆ ಅದೇ ದಾರಿಯಲ್ಲೊಂದು ಬರೀ ಗಾಡಿಯು ಹೋಗುತ್ತಿತ್ತು. ಆ ತರು ಣನ ಇಂಗಿತದಿಂದ ಕೋಚಮನ್ನನು ಆ ಗಾಡಿಯನ್ನು ನಿಲ್ಲಿಸಿ, "ಪ್ರಸಂಗ ವೇನು?" ಎಂದು ಕೇಳಿದನು.

ತರುಣ:—"ಈ ತರುಣಿಗೆ ಒಮ್ಮೆಲೆ ಮೂರ್ಛೆ ಬಂದಿದೆ. ನೀನು ಇವಳನ್ನು ಇವಳ ಮನೆಗೊಯ್ದು ಬಿಡು. ಇವಳ ಮನೆ ನಂಬರು 81 A ಅಪ್ಪರ ಕ್ರ್ರಿಕ್ ಸ್ಟ್ರೀಟಿನಲ್ಲಿದೆ. ಈ ತರುಣಿಯು ಲಾರ್ಡ ಮೆಸಿಂಡೇಲರ ಮಗಳು."

ಕೋಚಮನ್ನನು ಅಪನಂಬಿಗೆಯಿಂದ ಗೋಣನಲ್ಲಾಡಿಸುತ್ತ:—"ಆ ಹೆಸರು ಹೇಳದೆ ಬ್ಯಾಕಿಂಗಹ್ಯಾಮ್ ಅರಮನೆಯಿಂದ ರಾಜಕನ್ಯೆಯೇ ಬಂದಿರುವಳೆಂದು ಏಕೆ ಹೇಳಲಿಲ್ಲ? ಈ ಯುವತಿಯ ಬಳಿಯಲ್ಲಿ ಬಾಡಿಗೆಯ ಹಣ ವೇನಾದರೂ ಇದೆಯೋ?"

ಆ ತರುಣನು:—"ನಾನು ನಿಜವಿದ್ದುದನ್ನೇ ಹೇಳಿರುವೆನು; ಆದರೆ ಇವಳ ಹತ್ತರ ಹಣವೇನೂ ಇದ್ದಂತಿಲ್ಲ. ಕಳ್ಳನು ಇವಳ ಬ್ಯಾಗ್ ಹಾರಿಸಿಕೊಂಡು ಪಲಾಯನ ಮಾಡಿರುವನೆಂಬದನ್ನು ಎಲ್ಲರೂ ಬಲ್ಲರು. ಏನೇ ಇರಲಿ, ನಾನು ನಿನ್ನ ಬಾಡಿಗೆಯ ಹಣವನ್ನು ಮುಂಗಡವಾಗಿಯೇ ಕೊಡುತ್ತೇನೆ. ನೀನು ಇವಳನ್ನು ಇವಳ ಮನೆಗೊಯ್ದು ತಲುಪಿಸು."

ಹೀಗೆಂದು ಹೇಳಿ ಆ ತರುಣನು ತನ್ನ ಜೇಬಿನೊಳಗಿಂದ ಬಾಡಿಗೆಯ ಹಣವನ್ನು ತೆಗೆದು ಕೋಚಮನ್ನನ ಕೈಗಿತ್ತನು. ಆ ಮೇಲೆ ಆತನು ಸಮೀಪದಲ್ಲಿಯೇ ಕೂಡಿದ್ದ ಜನಸಂದಣಿಯಲ್ಲಿ ಸೇರಿ ಅದೃಶ್ಯನಾದನು.

ಆ ಯುವತಿಗೆ ಆಗಲೆ ಚೇತನೆಯುಂಟಾಗಿದ್ದಿತು. ಆಕೆ ಮೆಲ್ಲ ಮೆಲ್ಲನೆ ಎದ್ದು ನಿಂತಳೇನೋ ಸರಿಯೇ; ಆದರೆ ಆಗಲೂ ಅವಳು ಸಂಪೂರ್ಣ ದೇಹ ಭಾನವುಳ್ಳವಳಾಗಿರಲಿಲ್ಲ. ಅವಳು ಯಾವ ಮಾತನ್ನೂ ಆಡದಾದಳು. ಆದರೂ ಕೋಚಮನ್ನನು ತನ್ನನ್ನು ಆ ಗಾಡಿಯಲ್ಲೊಯ್ದು ಮನೆಗೆ ತಲುಪಿಸುವನೆಂಬದನ್ನು ಕೇಳಿ ಅವಳು ಖುಹುಮುಟ್ಟಿಗೆ ಅಸ್ವಸ್ಥಳಾದಳು. ಆ ಪ್ರಣಯಿ ಯುಗ್ಮದ ಪರಸ್ಪರರ ನಾಲ್ಕು ಕಣ್ಣುಗಳ ಮಿಲನವಾದುದೇನೋ ನಿಜ; ಆದರೆ ಅವರುಗಳಲ್ಲಿ ಯಾವ ಸಂಭಾಷಣವೂ ಆಗಲಿಲ್ಲ. ಡಾಫನಿ ಭಾರನನ್ನಳು ಬ್ರಾವುನ್ ಕಿಲ್ಡೇಯಾರನನ್ನು ಗುರ್ತಿಸಿದಳೋ ಇಲ್ಲವೋ ಅವಳದವಳಿಗೇ ಗೊತ್ತು. ಯಾವಾತನನ್ನು ಶೋಧಿಸಲಿಕ್ಕೆಂದು ಬಂದು ಅವಳು ಈ ಬಗೆಯ ಸಂಕಟಕ್ಕೀಡಾಗಿದ್ದಳೋ ಆತನನ್ನು ಎದುರಿಗೆ ಕಂಡರೂ ಕೂಡ ಅವಳು ಏನೂ ಮಾತಾಡದ್ದರಿಂದ ಆಗ ಅವಳ ವಾಣಿಯೇ ಕುಂಠಿತವಾಗಿರಬಹುದು. ವಿರಹವೇದನೆಯಿಂದ ಕ್ಲೇಶಗೊಂಡ ಆ ತೃಷಿತ ಹೃದಯಿಗಳು ಹಗಲಿನಲ್ಲಿ ಪರಸ್ಪರರಿಗೆ ಭೆಟ್ಟಿಯಾದ ಚಕ್ರವಾಕ ದಂಪತಿಗಳಂತೆ ಪರಸ್ಪರರಿಂದ ದೂರಾದರು. ಕಿಲ್ಡೇಯಾರನ ಹಸಿದ-ನೀರಡಿಸಿದ-ತಪ್ತ ಚಿತ್ತದೆದುರಿಗೆ ಸುಧಾ ಪಾತ್ರವು ಆಯತವಾಗಿ ಬಂದಿದ್ದರೂ ಅವನು ಅದನ್ನು ತುಟಿಗಳಿಂದ ಸ್ಪರ್ಶಿಸ

ಸುವ ಮೊದಲೇ ಅದು ನೆಲಕ್ಕೆ ಬಿದ್ದು ಚೂರುಚೂರಾಯಿತು! ಅವನು ನಿಟ್ಟು ಸಿರುಗರೆದು ತನ್ನ ಮನಸ್ಸಿನಲ್ಲೇ:—"ಒಂದಿಷ್ಟು ತಡೆದು ನಾನು ಅವಳೊಡನೆ ನಾಲ್ಕು ಮಾತುಗಳನ್ನಾದರೂ ಆಡಿದ್ದರೆ ಅದರಿಂದ ಯಾವ ಕೇಡೂ ಉಂಟಾ ಗುತ್ತಿರಲಿಲ್ಲ; ಆದರೆ ಆ ಸುಯೋಗವನ್ನು ನಾನು ನನ್ನ ಅಸಡ್ಡೆಯಿಂದ ಕಳೆದು ಕೊಂಡೆನು. ಇನ್ನು ಅವಳ ಪುನರ್ದರ್ಶನದ ಆಶೆಯೇ ಇಲ್ಲ."

ನಿಜವಾಗಿಯೂ ಅವಳ ಪುನರ್ದರ್ಶನದ ಆಶೆಯು ಆತನಿಗಿರಲಿಲ್ಲ. ಗಾಡಿ ಯವನಿಗೆ ಸಿಗತಕ್ಕಷ್ಟು ಬಾಡಿಗೆಗಿಂತ ಹೆಚ್ಚು ಬಾಡಿಗೆಯು ಮುಂಗಡವಾಗಿ ಯೇ ದೊರೆತುದರಿಂದ ಡಾಫನಿಯು ಅವನ ಗಾಡಿಯನ್ನಾರೋಹಿಸಿದ ಕೂಡಲೆ ಅವನು ಅದನ್ನು ಭರದಿಂದ ಬಿಟ್ಟನು. ನೋಡನೋಡುತ್ತಿರುವಷ್ಟರಲ್ಲಿ ಆ ಗಾಡಿಯು ಕಣ್ಮರೆಯಾಗಿ ಹೋಯಿತು. ಎಷ್ಟು ಹೊತ್ತು ಅದು ಕಾಣಿಸು ತ್ತಿತ್ತೋ, ಅಷ್ಟು ಹೊತ್ತಿನ ವರೆಗೂ ಹ ತ ಭಾ ಗ್ಯ ಕಿಲ್ಡೇಯಾರನು ಆ ಗಾಡಿಯ ಕಡೆಗೆ ದುರುದುರನೆ ನೋಡುತ್ತ ನಿಂತಿದ್ದನು.

ಟ್ರಿಫಾಲಗಾರ ಸ್ಕ್ವೇಅರು ಬರಲು ಅಲ್ಲಿಯ ರಾಜಬೀದಿಯೊಳಗಿನ ಜನ ಸಂದಣಿಯ ಮೂಲಕ ಆ ಗಾಡಿಯ ಗತಿಗೆ ತಡೆಯುಂಟಾಯಿತು. ಒಮ್ಮೆಲೆ ಸಾವಿರಾರು ಜನರ ಬಾಯಿಂದ ಬಹು ದೊಡ್ಡ ಧ್ವನಿಯುಂಟಾಗಿ ವಾಯುತರಂಗ ಗಳಲ್ಲಿ ಬೆರೆತು ಬಿಟ್ಟಿತು. ಅವೇನು ಗೊಂದಲವೆಂಬದನ್ನು ತಿಳಿಯಲಾರದೆ ಡಾಫನಿಯು ಗಾಡಿಯೊಳಗಿಂದಲೇ ಮೋರೆ ಹೊರಹೊರಡಿಸಿ ಅತ್ತಿತ್ತ ನೋಡಿದ ಕೂಡಲೆ ಒಂದು ಉಪ್ಪರಿಗೆಯ ಎತ್ತರವಾದ ಗೋಡೆಗೆ ಅಂಟಿಸಲ್ಪಟ್ಟಿದ್ದ ಪ್ರಕ ಟನೆಯು ಅವಳ ನೋಟವನ್ನು ಆಕರ್ಷಿಸಿತು. ಅದರಲ್ಲಿ:—"ಇಂಗ್ಲಂಡು ಜರ್ಮನಿಯ ವಿರುದ್ಧ ಯುದ್ಧ ಸಾರಿದೆ" ಎಂದಿತ್ತು.

---

## ಕಿಲ್ಡೇಯಾರನನ್ನು ನಾನೇ ಶೋಧಿಸುವೆನು.

ಸಪ್ಟಂಬರ ತಿಂಗಳು ಉದಯಿಸಿತು. ಯುದ್ಧವು ಭರದಿಂದ ನಡೆದಿತ್ತು. ಒಂದು ತಿ ಂ ಗ ಳ ಮುಂಚೆ ಇಡೀ ಯುರೋಪಖಂಡದಲ್ಲೇ ಧ್ವಂಸಕಾರಿ ಯಾದ ಆ ಭೀಷಣ ಯುದ್ಧದ ಸಂಭವವು ಕೂಡ ಇಂಗ್ಲಂಡ ನಿವಾಸಿಗಳಾದ ಯಾವ ಸ್ತ್ರೀ-ಪುರುಷರ ಮನಸ್ಸಿನಲ್ಲಿಯೂ ಹುಟ್ಟಿರಲಿಲ್ಲ; ಆದರೆ ಅದೊಂದೇ ತಿಂಗಳಲ್ಲಿ ಸ್ವದೇಶಪ್ರೇಮಿಗಳಾದ ಇಂಗ್ಲಿಷ ಸ್ತ್ರೀ-ಪುರುಷರ ಬಾಯಲ್ಲಿ ಆ ಯುದ್ಧದ ಹೊರತು ಬೇರೆ ಮಾತೇ ಇರಲಿಲ್ಲ. ವೃತ್ತಪತ್ರಗಳಲ್ಲಿ ಆ ಯುದ್ಧ ವಾರ್ತೆಯ ಹೊರತು ಬೇರೆ ಸುದ್ದಿಗಳೇ ಬರುತ್ತಿರಲಿಲ್ಲ. ಫ್ರಾನ್ಸ ಮತ್ತು ಬೆಲ್ಜ ಮ್ಮ ದೇಶಗಳು ಆಗ ಮಾನುಷ ರಕ್ತದಿಂದ ಅಭಿಷೇಕಗೊಳ್ಳುತ್ತಿದ್ದವು.

ಸ್ವದೇಶಪ್ರೇಮಿಗಳಾದ ಸಾಹಸೀ ವೀರರ ಕಾದ ರಕ್ತವನ್ನು ಕುಡಿದು ಅಂತಕ-ಕೃತಾಂತರು ರಣಭೂಮಿಯಲ್ಲಿ ಉದ್ದಾಮ ನೃತ್ಯವನ್ನಾರಂಭಿಸಿದ್ದರು. ಜಲ, ಸ್ಥಳ, ಅಂತರಿಕ್ಷ ಮುಂತಾದ ಕಡೆಗೆಲ್ಲ ಭಯ ಮತ್ತು ಉದ್ವೇಗದ ಚಿಹ್ನವು ಸ್ಪಷ್ಟವಾಗಿ ತೋರುತ್ತಿತ್ತು.

ದೇಶದಲ್ಲಿ ಈ ಬಗೆಯ ಕಠಿಣಾವಸ್ಥೆ ಪ್ರಾಪ್ತವಾಗಿರುವಾಗ ಒಂದು ಬೆಳಗಿನಲ್ಲಿಒಬ್ಬ ಸದ್ಗೃಹಸ್ಥನು ಕೆಲ ಕೆಲಸಕ್ಕೆಂದು ಬ್ಲೇಕನನ್ನು ಕಾಣಲಿಕ್ಕೆ ಬಂದನು. ಆತನ ಹೆಸರು ಉಯಿಲ್ಯಮ್ ಪಾರ್ಚಮೆಂಟ. ಅವನು ಕಿಲ್ಡೇಯಾರನ ಸೋದರತ್ತೆಯಾದ ಮಿಸೆಸ್ ಓರಾಯನ್ ಡೇನಳ ಎಟರ್ನಿ ಎಂಬುದನ್ನು ನಮ್ಮ ವಾಚಕರಿಗೆ ಮತ್ತೆ ತಿಳಿಸುವ ಕಾರಣವಿಲ್ಲ.

ಪಾರ್ಚಮೆಂಟನು ಅಲ್ಲಿಗೆ ಬಂದು ಬ್ಲೇಕನ ಎದುರುಗಡೆಯ ಕುರ್ಚಿಯಲ್ಲಿ ಕುಳಿತನು. ನಂತರ ತನ್ನ ಪಾಕೇಟಿನೊಳಗಿಂದ ನಸ್ಯದ ಡಬ್ಬಿಯನ್ನು ತೆಗೆದನು; ಹಾಗು ಮೂಗಿನ ಹೊರಳೆಗಳಲ್ಲಿ ನಸ್ಯವನ್ನು ಚೆನ್ನಾಗಿ ತುಂಬಿಕೊಂಡನು. ಆ ನಸ್ಯದ ಘಾಟದಿಂದ ಆತನ ಕಣ್ಣುಗಳು ನೀರಿನಿಂದ ತುಂಬಿದ್ದವು; ಮತ್ತು ಕಂಠವು ಭಾರವಾಯಿತು. ಆತನು ಆ ಆವೇಗವನ್ನು ಸಹಿಸಿಕೊಂಡು ಬ್ಲೇಕನನ್ನು ಕುರಿತು:—"ಬ್ಲೇಕರೇ, ಬಹು ಅದ್ಭುತವಾದ ವ್ಯಾಪಾರವು ಘಟಿಸಿದೆ. ಅದು ಎಷ್ಟು ವಿಸ್ಮಯಕರವಾಗಿವೆಯೋ ಅಷ್ಟೇ ಅಪ್ರಿಯಕರವಾಗಿರುತ್ತದೆ!"

ಬ್ಲೇಕನು ಆಗಂತುಕನ ಆಗಮನದ ಉದ್ದೇಶವನ್ನು ಕೊಂಚವೂ ತಿಳಕೊಳ್ಳಲಾರದೆ:—"ಹಾಗೆಯೋ?" ಎಂದಂದನು.

ಪಾರ್ಚಮೆಂಟನು ನಸ್ಯದ ಡಬ್ಬಿಯನ್ನು ಜೇಬಿನಲ್ಲಿರಿಸಿ ಗಂಭೀರಭಾವದಿಂದ:—"ಅಹುದು. ಅದು ಎಷ್ಟು ಅಪ್ರಿಯಕರವಿದೆಯೋ ಅಷ್ಟೇ ಅಚಿಂತ್ಯಪೂರ್ವಕವಾಗಿದೆ. ಆ ಘಟನೆಯು ಬ್ರಾವುನ್ ಕಿಲ್ಡೇಯಾರನಿಗೆ ಸಂಬಂಧಿಸಿದ್ದಿದೆ. ತಾವು ಆ ದುರ್ಬುದ್ಧಿಯ ಅಧಃಪತಿತ ತರುಣನ ಪಾಲಕರೆಂದು ತಿಳಿದು ತಮ್ಮನ್ನು ಕಾಣಬಂದಿರುತ್ತೇನೆ."

ಬ್ಲೇಕನು ಹುಬ್ಬು ಮೇಲಕ್ಕೇರಿಸುತ್ತ:—"ವಿಹಿತವೆಸಗಿದಿರಿ. ಇನ್ನು ತಾವು ಆ ಅಪ್ರೀತಿಕರ ಮತ್ತು ಅಚಿಂತ್ಯಪೂರ್ವವಾದ ಘಟನೆಯನ್ನು ವಿವರಿಸಿ ನನ್ನನ್ನು ನಿಶ್ಚಿಂತನನ್ನಾಗ ಮಾಡಬಹುದು."

ಪಾರ್ಚಮೆಂಟ:—"ಅದನ್ನಿನ್ನು ಪ್ರಾರಂಭದಿಂದಲೇ ನಿಮಗೆ ತಿಳಿಸುತ್ತೇನೆ. ನನ್ನ ಮಾತನ್ನು ಪೂರ್ಣವಾಗಿ ಕೇಳಿಕೊಂಡ ನಂತರ ಅದು ಅಪ್ರಿಯಕರವೂ ಅಚಿಂತ್ಯಪೂರ್ವವೂ ಹೇಗೆಂಬದು ನಿಮಗೆ ತಾನೆ ತಿಳಿಯುವುದು.

ನಮ್ಮ ಧನಾಢ್ಯ ಪಕ್ಷಗಾರಳಾದ ಮಿಸೆಸ್ ಓರಾಯನ್ ಡೇನಳು ಕೆಲ ದಿನಗಳ ಮುಂಚೆ ತೀರಿಕೊಂಡಳೆಂಬ ಸಂಗತಿಯನ್ನು ನೀವು ಕೇಳಿಕೊಂಡಿರಬಹುದು."

ಬ್ಲೇಕ:—"ಅಹುದು; ವೃತ್ತಪತ್ರಿಕೆಗಳಲ್ಲಿ ಆ ವೃತ್ತವು ಪ್ರಕಟವಾಗಿತ್ತು."

ಪಾರ್ಚಮೆಂಟ:—"ಓರಾಯನ್ ಡೇನಳು ತನ್ನ ಸೊದರಳಿಯನಾದ ಕಿಲ್ಡೇಯಾರನೇ ತನ್ನ ಎಲ್ಲ ಧನಸಂಪತ್ತುಗಳಿಗೆ ಉತ್ತರಾಧಿಕಾರಿಯೆಂದು ಒಂದು ಮೃತ್ಯುಪತ್ರವನ್ನು ಮಾಡಿಟ್ಟಿದ್ದಳು; ಆದರೆ ಕಿಲ್ಡೇಯಾರನು ದುಃ-ಸಂಗತಿಯಿಂದ ಅಧಃಪತಿತನಾಗಲು, ನಮ್ಮ ಪಕ್ಷಗಾರಳು ಒಂದು ದಿನ ಲಂಡನ್ನಿಗೆ ನನ್ನ ಆಫೀಸಿಗೆ ಬಂದು ಆ ಮೃತ್ಯುಪತ್ರವನ್ನು ರದ್ದುಪಡಿಸಲಿಕ್ಕೂ ಮತ್ತೊಂದು ಹೊಸ ಮೃತ್ಯುಪತ್ರ ಸಿದ್ಧಪಡಿಸಲಿಕ್ಕೂ ನನಗೆ ಹೇಳಿದಳು. ನಾನು ಅವಳ ಆದೇಶದ ಮೇರೆಗೆ ಹೊಸ ಮೃತ್ಯುಪತ್ರವನ್ನು ಬರೆದೆನು. ಆ ಹೊಸ ಮೃತ್ಯುಪತ್ರ ಮೂಲಕ ಅವಳು ತನ್ನ ಸೋದರಳಿಯನ ಹೆಸರಿಗೆ ಮುಂಚೆ ಬರೆದಿದ್ದ ತನ್ನ ಆಸ್ತಿಯ ಉತ್ತರಾಧಿಕಾರತ್ವವನ್ನು ರದ್ದು ಮಾಡಿಸಿ ತನ್ನ ಸ್ಥಿರ-ಚರ ಆಸ್ತಿಗಳನ್ನೆಲ್ಲ ದೇಶಹಿತದ ಕಾರ್ಯಗಳಿಗೆ ದಾನ ಮಾಡಿದ್ದಳು. ಆ ವಿಪುಲ ಸಂಪತ್ತಿಯು ದೇಶಹಿತಕ್ಕೆ ನಿಯೋಜಿತವಾಗಿದ್ದರೆ ದೇಶಕ್ಕೆಷ್ಟು ಉಪಕಾರವಾಗುತ್ತಿತ್ತೆಂಬದನ್ನು ಹೇಳಲಸಾಧ್ಯವು! ಓರಾಯನ್ ಡೇನಳು ವಾತರೋಗದಿಂದ ಪೀಡಿತಳಾಗಿದ್ದ ಸ್ತ್ರೀಯು. ಅವಳಿಗೆ ಯಾವಾಗ ಏನು ಅನಿಸುತ್ತಿತ್ತೋ ಅದನ್ನಾರೂ ತಿಳಿಯುವಂತಿರಲಿಲ್ಲ. ತನಗೆ ಸ್ವಂತಕ್ಕೆ ಯಾವುದು ವಿಹಿತವೆಂದೆನಿಸುತ್ತಿತ್ತೋ ಅದನ್ನೇ ಅವಳು ಮಾಡುತ್ತಿದ್ದಳು. ಆ ಪಿಸಿ ಸ್ವಭಾವದ ಹೆಣ್ಣುಮಗಳು ಯಾರ ಭಿಡೆ-ಮುರವತ್ತುಗಳಿಗೂ ಬಲಿಬೀಳುತ್ತಿರಲಿಲ್ಲ. ಅವಳು ಈ ಮೊದಲು ಯಾವ ಮೃತ್ಯುಪತ್ರವನ್ನು ಮಾಡಿಟ್ಟಿದ್ದಳೋ ಅದು ಅವಳ ಮನೆಯಲ್ಲೇ ಇತ್ತು. ಅದನ್ನು ಅವಳು ನನ್ನ ಕಡೆಗೆ ಕೊಟ್ಟಿದ್ದಿಲ್ಲ. ನಾನು ಅವಳಿಗೆ ಯಾವ ಹೊಸ ಮೃತ್ಯುಪತ್ರವನ್ನು ಬರೆದು ಕೊಟ್ಟಿದ್ದೆನೋ ಅವಳು ಅದನ್ನೂ ತನ್ನ ಸಂಗಡವೇ ಒಯ್ದಿದ್ದಳು; ನನ್ನ ಬಳಿಯಲ್ಲಿರಿಸಿರಲಿಲ್ಲ. ಪಕ್ಷಕಾರರು ತಮ್ಮ ಹಟವನ್ನೇ ನಡೆಸಹತ್ತಿದರೆ ನಾನೇನು ಮಾಡಲಿಕ್ಕಾಗುತ್ತದೆ? ಅವಳು ಮನೆಗೆ ತೆರಳುವಾಗ ನನಗೆ ಹೇಳಿದ್ದಳೇನಂದರೆ, ತಾನು ಈ ಮೊದಲು ತನ್ನ ಸೋದರಳಿಯನಿಗಾಗಿ ಬರೆದಿಟ್ಟ ಮೃತ್ಯುಪತ್ರವನ್ನು ಮನೆಗೆ ಹೋದ ಕೂಡಲೆ ಹರಿದು ಹಾಕುತ್ತೇನೆಂದು. ಆ ಮೇಲೆ ಅವಳು ನನಗೊಮ್ಮೆ ಭೇಟಿಯಾದಾಗ ತಾನು ಆ ಪತ್ರವನ್ನು ಹರಿದು ಹಾಕಿರುತ್ತೇನೆಂದೂ ತಿಳಿಸಿದ್ದಳು; ಆದರೆ ನಿನ್ನೆ ರಾತ್ರಿಯಲ್ಲಿ ನಾನು ಸರೇ ಜಿಲ್ಹೆಯೊಳಗಿನ ಆಕೆಯ ಮನೆಗೆ ಹೋಗಿ ನೋಡುತ್ತೇನೆ, ಅವಳು ಭದ್ರವಾದ

ತಿಜೋರಿಯಲ್ಲೊಂದು ಮೃತ್ಯುಪತ್ರವಿದೆ; ಆದರೆ ಅದು ಅವಳು ನನ್ನ ಆಫೀಸಿಗೆ ಬಂದು ಅದೇ ಕೊನೆಯದೆಂದು ಬರೆಯಿಸಿದ್ದ ಅವಳ ಹೊಸ ಮೃತ್ಯುಪತ್ರವಲ್ಲ; ಯಾವ ಮೃತ್ಯುಪತ್ರ ಬರೆದು ಅವಳು ತನ್ನ ಎಲ್ಲ ಆಸ್ತಿಯನ್ನು ತನ್ನ ಸೋದರಳಿಯನಿಗೆ ಕೊಟ್ಟು ಅವನನ್ನು ತನ್ನ ಏಕಮಾತ್ರ ಉತ್ತರಾಧಿಕಾರಿಯೆಂದು ಸ್ವೀಕರಿಸಿದ್ದಳೋ ಅದೇ ಆ ಮೃತ್ಯುಪತ್ರವು!"

ಬ್ಲೇಕನು ವಿಸ್ಮಯಭರದಿಂದ:-"ಹಾಗೆಯೋ? ಇದಂತೂ ಬಹು ಅದ್ಭುತ ಘಟನೆಯೇ ಸರಿ! ಅವಳು ಕಟ್ಟಕಡೆಯದೆಂದು ಯಾವ ಮೃತ್ಯುಪತ್ರ ಮಾಡಿಸಿದ್ದಳೋ ಅದು ಇಲ್ಲವೇ ಇಲ್ಲವೆಂದು ಖಾತ್ರಿ ಮಾಡಿಕೊಂಡಿರಾ?"

ಪಾರ್ಚ:—ಅಹುದು; ಈ ಮೃತ್ಯುಪತ್ರದ ಹೊರತು ಬೇರೆ ಯಾವ ಮೃತ್ಯುಪತ್ರವೂ ಅಲ್ಲಿರುವದಿಲ್ಲ. ಎಷ್ಟು ಸೂಕ್ಷ್ಮವಾಗಿ ಹುಡುಕಿದರೂ ಬೇರೆ ಪತ್ರವು ಸಿಗಲಿಲ್ಲ.

ಬ್ಲೇಕ:—ಹಾಗಾದರೆ ಕೊನೆಗೆ ಓರಾಯನ್‌ಡೇನ ಮುದುಕೆಯ ಸಂಕಲ್ಪವು ಬದಲಿಸಿತೇ?

ಪಾರ್ಚಮೆಂಟನು ನಾಲಿಗೆ ಬಿಗಿಹಿಡಿದು:-ಖಂಡಿತವಾಗಿಯೂ ಹಾಗಿಲ್ಲ. ಅವಳ ಉದ್ದೇಶವು ಹಾ ಗೆ ಯೇ ಇದ್ದರೆ ಅವಳು ನನಗದನ್ನು ಖಂಡಿತವಾಗಿಯೂ ತಿಳಿಸುತ್ತಿದ್ದಳು. ಅವಳ ಭ್ರಮದಿಂದಲೇ ಈ ಅನರ್ಥವೊದಗಿದೆ. ಅವಳು ಅದನ್ನು ಎಲ್ಲಿಟ್ಟದ್ದೆನೆಂದು ತಿಳಿದಿದ್ದಳೋ ಭ್ರಮವಶದಿಂದ ಅದನ್ನೇ ಹರಿದೊಗೆದಿರುತ್ತಾಳೆ! ಸಾಯುವ ಕಾಲಕ್ಕೂ ಅವಳಿಗೆ ತನ್ನ ಭ್ರಮವು ತಿಳಿಯಲಿಲ್ಲ. ಅಯ್ಯೋ! ಇದೆಂಥ ಪರಿತಾಪದ ವಿಷಯವಾಗಿಬಿಟ್ಟಿತಲ್ಲ!"

ಬ್ಲೇಕನು ಮುದಿತನಾಗಿ:—ಹಾಗಾದರೆ ಇನ್ನು ನಮ್ಮ ಕಿಲ್ಡೇಯಾರನೇ ಅವಳ ಆ ಎಲ್ಲ ಚರ-ಸ್ಥಿರ ಆಸ್ತಿಗೆ ಉತ್ತರಾಧಿಕಾರಿಯಲ್ಲವೇ?

ಪಾರ್ಚಮೆಂಟನು ಹತಾಶಭಾವದಿಂದ:—ಅಗತ್ಯವಾಗಿಯೂ ಹಾಗೆಯೇ. ಮೃತ್ಯುಪತ್ರದ ಪ್ರೊಬೇಟ ದೊರಕಿಸುವಾಗ ಅಡ್ಡಿಯನ್ನುಂಟು ಮಾಡುವ ಬೇರೆ ಯಾರೂ ಇಲ್ಲ. ಆದುದರಿಂದಲೇ ಆ ಮೃತ್ಯುಪತ್ರಕ್ಕನುಸರಿಸಿ ಕಿಲ್ಡೇಯಾರನೇ ಅವಳ ರಾಜಪ್ರಾಸಾದದಂತಹ ವಿಸ್ತೀರ್ಣವಾದ ಮನೆ-ಮಠಗಳಿಗೂ ವರ್ಷಕ್ಕೆ ತೀರ ಕಡಿಮೆಯೆಂದರೂ ಹದಿನೈದು-ಇಪ್ಪತ್ತು ಸಾವಿರ ಪೌಂಡುಗಳ ಉತ್ಪತ್ತಿಯ ಭೂಮಿ-ಕಾಣಿಗಳಿಗೂ ಏಕಮಾತ್ರ ಉತ್ತರಾಧಿಕಾರಿಯಾದನು. ಇವುಗಳಲ್ಲದೆ ಬೇರೆ ಬೇರೆ ಬ್ಯಾಂಕುಗಳಲ್ಲಿ ಅವಳ ಹಣವು ಅಗಣಿತವಿರುತ್ತದೆ. ಅದೆಲ್ಲವೂ ಕಿಲ್ಡೇಯಾರನದೇ. ದಾರಿಯ ತಿರುಕನು ರಾಜನ ಐಶ್ವರ್ಯ ಪಡೆದಂತಾಯಿತು! ಎಂಥ ಸುದೈವವಾತನದು! ಎಂಥ ಆಕ್ಷೇಪದ ವಿಷಯವಿದು!

ಪಾರ್ಲಮೆಂಟನು ಕ್ಷುಬ್ಧನಾದುದನ್ನು ಕಂಡು ಬ್ಲೇಕನು:—"ಆಕ್ಷೇಪದ ವಿಷಯವೆಂತು? ಸೋದರತ್ತೆಯ ಸಂಪತ್ತಿಗೆ ಸೋದರಳಿಯು ಮಾಲಕನಾದ. ಇದರಲ್ಲಿ ಎಟರ್ನಿಯ ಮನಸ್ಸಿಗೆ ಕ್ಷೋಭೆಯುಂಟಾಗತಕ್ಕ ಕಾರಣವಾವುದೆಂಬದು ಕಾಣೆನಲ್ಲ?"

ಪಾರ್ಲಮೆಂಟನು ಗೋಣನ್ನಲ್ಲಾಡಿಸಿ:—ಕ್ಷೋಭವಿಲ್ಲವೆ? ಮಹಾಶಯರೇ, ಕ್ಷೋಭವೇನೂ ಇಲ್ಲವೇ? ದೇಶಹಿತದ ಕಾರ್ಯಗಳಿಗೆ ಯಾವ ವಿಪುಲ ಹಣವನ್ನು ಖರ್ಚುಮಾಡಬಹುದಿತ್ತೋ, ಯಾರ ಧನ ಸಹಾಯದಿಂದ ಇಡೀ ದೇಶವೇ ಉಪಕೃತವಾಗುತ್ತಿತ್ತೋ ಅದು ಒಂದಿಷ್ಟು ಭ್ರಮದ ಮೂಲಕ ಒಬ್ಬ ಅವ್ಯವಸ್ಥಿತಚಿತ್ತನೂ ಅಮಿತವ್ಯಯಿಯೂ ಆಗಿರುವ ತರುಣನ ಕೈಗೆ ಆಕಸ್ಮಿಕವಾಗಿ ಹೋಯಿತು! ಆತನು ಆ ಎಲ್ಲ ಹಣವನ್ನು ಮೂರೇ ದಿನಗಳಲ್ಲಿ ಜೂಜಾಡಿ, ಸೆರೆಕುಡಿದು ಹಾಗು ಕ್ಯಾಪ್ಟನ್ನನಾಗಿ ಹಾಳು ಮಾಡಿ ಬಿಡುವನು. ಇದಕ್ಕೆ ಯಾವ ಸ್ವದೇಶಹಿತೈಷಿಯು ಆಕ್ಷೇಪಿಸಲಿಕ್ಕಿಲ್ಲವೆಂಬದನ್ನು ನೀವೇ ಹೇಳಿರಿ ನೋಡೋಣ? ದೇಶಹಿತದ ಸ್ವಾರ್ಥಕ್ಕೆಂದೇ ನಾನು ಆಕ್ಷೇಪಿಸುತ್ತಿರುವದು."

ಬ್ಲೇಕ:—ದೇಶಕ್ಕಾಗಿ ಎಟರ್ನಿಗಳ ಜೀವವೂ ತಳಮಳಿಸುತ್ತಿರುವದೆಂಬದು ಸಂತೋಷದ ಸಂಗತಿಯೇ ಸರಿ; ಆದರೆ ಯಾರನ್ನಾದರೂ ನ್ಯಾಯವಾದ ಅಧಿಕಾರದಿಂದ ವಂಚಿಸಿ, ಅವರಿಗೆ ಲಭಿಸತಕ್ಕ ಹಣವನ್ನು ದೇಶಹಿತದ ಕೆಲಸಕ್ಕೆ ದಾನಮಾಡಲಾಗಲಿಲ್ಲೆಂದು ಕ್ಷೋಭೆಗೊಳ್ಳುವದು ಯೋಗ್ಯವೇ? ಕಿಲ್ಡೇಯಾರನು ಘಟನಾಚಕ್ರದಲ್ಲಿ ಸಿಕ್ಕು ಸಂಕಟಕ್ಕೀಡಾಗಿರುತ್ತಾನೆ. ಅವನು ತನ್ನ ಕುಕರ್ಮದ ಫಲವನ್ನು ಭೋಗಿಸಿರುತ್ತಾನೆ. ಅವನಿಗೆ ಸಾಕಷ್ಟು ಶಿಕ್ಷೆಯಾಗಿದೆ. ಅತನು ತನ್ನ ಸೋದರತ್ತೆಯ ಆಸ್ತಿಗೆ ಉತ್ತರಾಧಿಕಾರಿಯಾದರೆ ಇನ್ನು ಆ ಹಣವನ್ನು ಹಾಳುಮಾಡಲಾರನು; ಇಷ್ಟೇ ಅಲ್ಲ, ಅವನು ಅದನ್ನು ಸದ್ವಿನಿಯೋಗ ಮಾಡುವನೆಂದೇ ನನ್ನ ನಂಬಿಗೆಯಿದೆ.

ಪಾರ್ಲ:—ನಿಮ್ಮ ಮಾತು ನಿಜವಾದರೆ ಸಂತೋಷವೇ ಆದೀತು. ಆದರೂ ಹಾಗೆ ಆಗುವದೋ ಇಲ್ಲವೋ ಎಂಬದು ಅನುಮಾನವೇ. ಏನೇ ಆಗಲಿ. ಕಿಲ್ಡೇಯಾರನಂತೂ ಈಗ ಫರಾರಿಯಾಗಿರುವನು! ಅವನ ಸಂಪತ್ತಿಯನ್ನು ವಶಪಡಿಸಿಕೊಳ್ಳುವವರಾರು? ಅವನನ್ನು ಬೇಗನೆ ಶೋಧ ಹಚ್ಚುವದು ಅವಶ್ಯವು. ಅವನ ಪತ್ತೆಹಚ್ಚಲೋಸುಗ ಬೇರೆ ಬೇರೆ ವೃತ್ತಪತ್ರಗಳಲ್ಲಿ ನಾಳೆಯೇ ಪ್ರಕಟನೆ ಪ್ರಕಟಿಸಬೇಕೆಂದು ನಾನು ಯೋಚಿಸಿರುತ್ತೇನೆ.

ಬ್ಲೇಕ:—"ಬೇಡ; ಇಷ್ಟು ಅವಸರದಿಂದ ಪ್ರಕಟನೆ ಪ್ರಕಟಿಸುವ ಕಾರಣ ವಿಲ್ಲ. ನಾನು ಸ್ವತಃ ಅವನನ್ನು ಶೋಧಿಸುತ್ತೇನೆ. ನನ್ನ ಪ್ರಯತ್ನಗಳಿಗೆ

ತೀವ್ರವೇ ಯಶ ದೊರೆಯಬಹುದು. ಆತನು ಸುಮಾರು ಒಂದು ವರ್ಷದಿಂದ ಕಾಣದಾಗಿದ್ದರೂ ನನ್ನ ನಂಬಿಗೆ...."

ಬ್ಲೇಕನ ವಾಕ್ಯವು ಮುಗಿಯುವ ಮೊದಲೇ ಮಿಸೆಸ್ ವಾರ್ಡೇಲಳು ಕೈಯಲ್ಲೊಂದು ಕಾಗದ ಹಿಡಿದುಕೊಂಡು ಅಲ್ಲಿಗೆ ಬಂದಳು. ಆಕೆ ಆ ಕಾಗದವನ್ನು ಬ್ಲೇಕನ ಕೈಗಿತ್ತು:—"ಒಬ್ಬ ಗೃಹಸ್ಥನು ಒಂದು ಬಹು ದೊಡ್ಡ ಮೊಟರಿನಲ್ಲಿ ಬಂದು ಇದನ್ನು ನಿಮಗೆ ತಲುಪಿಸಲೆಂದು ನನ್ನ ಕೈಗಿತ್ತನು; ಆದರೆ ಆ ಮೊಟರು ಎಷ್ಟು ಚೆನ್ನಾಗಿದ್ದಿತಪ್ಪಾ! ಅದಕ್ಕೆ ಕೆಂಪು-ಹಸರು-ನೀಲಿ ಬಣ್ಣದ ಗಾಜುಗಳ ಕಿಡಿಕೆಗಳಿದ್ದು, ಒಳಗಡೆಗೆಲ್ಲ ಗಾದಿಗಳು. ಅವು ಬರೀ ಗಾದಿಗಳಾಗಿರಲಿಲ್ಲ; ರಾಜಸಿಂಹಾಸನದಂತಿದ್ದವು. ಆ ಗೃಹಸ್ಥನಾದರೂ ಭಾರೀ ಮನುಷ್ಯನು. ಅವನ ಉಡಿಗೆ-ತೊಡಿಗೆಗಳು ಅರಮನೆಯೊಳಗಿನ ಚೋಪದಾರ-ದರಕದಾರನಂತಿದ್ದವು."

ಬ್ಲೇಕ:—"ಆತನು ಉತ್ತರಕ್ಕಾಗಿ ಕಾದಿರುತ್ತಾನೇನು?"

ವಾರ್ಡೇಲ:—"ಇಲ್ಲರೀ. ಅವನು ಈ ಕಾಗದವನ್ನು ನಿಮಗೆ ಕೊಡಹೇಳಿದವನೇ ಬಿರುಗಾಳಿಯಂತೆ ಮೊಟರು ಬಿಟ್ಟುಕೊಂಡು ನಡೆದೇ ಬಿಟ್ಟ."

ಬ್ಲೇಕ:—"ಒಳ್ಳೇದು. ನೀನಿನ್ನು ತೆರಳು" ಎಂದು ಹೇಳಿ, ಅವನು ಆ ಕಾಗದವನ್ನೊಡೆದು ಓದಿದನು. ಅದನ್ನು ಎರಡೆರಡು ಸಾರೆ ಶ್ರೀಕಾರದಿಂದ ಕೊನೆಯವರೆಗೂ ಓದಿ ಮುಗಿಸಿದ ಬಳಿಕ ತಾನು ಕುಳಿತ ಕುರ್ಚಿಯಿಂದೆದ್ದು ನಿಂತನು. ಆ ಮೇಲೆ ಪಾರ್ಚಮೆಂಟನನ್ನುದ್ದೇಶಿಸಿ:—"ಇಂದಿನ ವ್ಯಾಪಾರಗಳು ಒಂದಕ್ಕಿಂತೊಂದು ಅದ್ಭುತವೇ ಆಗಿವೆ. ಲಾರ್ಡ ಮೆಸಿಂಡೇಲನು ಅತಿ ತೀವ್ರವಾಗಿ ಬಂದು ತನ್ನನ್ನು ಕಾಣಬೇಕೆಂದು ಅಪೇಕ್ಷಿಸಿರುವನು ಅವನು ಏತಕ್ಕಾಗಿ ನನ್ನನ್ನು ಕರೆದಿರುತ್ತಾನೆಂಬದನ್ನು ನಾನು ಬಲ್ಲೆನು. ನಾನು ಅಲ್ಲಿಗೆ ಈಗಲೇ ಹೊರಡಬೇಕು ನಿಮ್ಮಿಂದ ಲಗುಬಗನೆ ಅಪ್ಪಣೆ ಹೊಂದಬೇಕಾಯಿತೆಂದು ನೊಂದುಕೊಳ್ಳಬೇಡಿ. ನೀವು ಪ್ರಕಟನೆಯನ್ನು ಪ್ರಕಟಿಸಬೇಡಿರಿ. ಕಿಲ್ಡೇಯಾರನನ್ನು ಆದಷ್ಟು ತೀವ್ರ ಶೋಧಿಸುವ ಭಾರವನ್ನು ನಾನು ಹೊತ್ತಿರುತ್ತೇನೆ. ಆತನ ಪತ್ತೆ ಹತ್ತುತ್ತಲೆ ನಾನು ನಿಮ್ಮ ಆಫಿಸಿಗೆ ಬಂದು ನಿಮ್ಮನ್ನು ಕಾಣುತ್ತೇನೆ. ಹೋಗಿ ಬರುವಿರಾ? ನಮಸ್ಕಾರ."

---

## ನಾವಿಬ್ಬರೂ ನಾಳೆಯೇ ಫ್ರಾನ್ಸಿಗೆ ಹೊರಡೋಣ.

ಲಾರ್ಡ ಮೆಸಿಂಡೇಲನ ದ್ವಾರರಕ್ಷಕನು ವಾಚನಾಲಯದೊಳಗೆ ಕುಳಿತುಕೊಂಡಿದ್ದ ಲಾರ್ಡ ಮೆಸಿಂಡೇಲನೆಡೆಗೆ ಹೋಗಿ:-"ಹುಜೂರರ ಕರೆಯ ಮೇರೆಗೆ

ಬಂದಿರುವ ರಾಬರ್ಟ ಬ್ಲೀಕರು ತಮ್ಮ ಭೇಟಿಗಾಗಿ ಹೊರಗಡೆ ಕಾದಿಕುತ್ತಾರೆ" ಎಂದು ತಿಳಿಸಿದನು.

ಮೆಸಿ:—"ಅವರನ್ನು ಇಲ್ಲಿಗೇ ಕಳಿಸಿಕೊಡು."

ಲಾರ್ಡಮೆಸಿಂಡೇಲನು ವಾಚನಾಲಯದಲ್ಲಿ ಬೆಂಕಿಯ ಅಗ್ಗಿಷ್ಟಿಗೆಯ ಹತ್ತರ ಕುಳಿತು ಏನನ್ನೋ ಯೋಚಿಸುತ್ತಿದ್ದನು ಆತನ ಮೋರೆಯು ತೀರ ಕಕ್ಕಾವಿಕ್ಕಿಯಾಗಿತ್ತು. ಬ್ಲೀಕನು ಆತನ ಹತ್ತರ ಬರುತ್ತಲೆ ಮೆಸಿಂಡೇಲನು ಎದ್ದು ಬಂದು ಅವನಿಗೆ ಶೇಕಹ್ಯಾಂಡ ಮಾಡಿದನು. ಆ ಮೇಲೆ ಅವನನ್ನು ಅಲ್ಲಿಯದೊಂದು ಕುರ್ಚಿಯ ಮೇಲೆ ಕೂರಿಸಿದನು.

ಲಾರ್ಡ ಮೆಸಿಂಡೇಲನು ಕ್ಷಣಕಾಲ ನಿಸ್ತಬ್ಧನಾಗಿದ್ದು ನಂತರ:-"ನೀವು ನನ್ನ ಕಾಗದ ಕಂಡೊಡನೆಯೇ ಬಂದುದಕ್ಕಾಗಿ ನಾನು ನಿಮಗೆ ಅತ್ಯಂತ ಖುಣಿ ಯಾಗಿರುತ್ತೇನೆ. ನಾನು ನನ್ನ ಮಗಳ ಸಂಬಂಧದಲ್ಲಿ ನಿಮ್ಮೊಡನೆ ಆಲೋಚಿಸ ಬೇಕಾಗಿರುತ್ತದೆ.

ಬ್ಲೀಕ:—ನಾನದನ್ನು ಮುಂಚೆಯೇ ತಿಳಿದಿರುತ್ತೇನೆ. ನೀವು ನಿಮ್ಮ ಮಗಳ ಸಲುವಾಗಿ ಬಹು ಕಷ್ಟಪಡಬೇಕಾಗಿದೆ, ಎಂಬದು ನನಗರಿಯದ ವಿಷಯವಾಗಿಲ್ಲ.

ಮೆಸಿಂಡೇಲ:-ಬ್ಲೀಕರೇ, ನನ್ನ ಮನಃಕಷ್ಟದ ಸಂಗತಿಯನ್ನು ನಿಮಗೆ ಇನ್ನೆಷ್ಟು ಹೇಳಲಿ? ನನ್ನ ಮನಸ್ಸಿಗೆ ಒಂದಿಷ್ಟೂ ಸುಖಶಾಂತಿಯಿಲ್ಲ. ನನಗೆ ಇವ ಳೊಬ್ಬಳೇ ಮಗಳು; ನಾನು ಇವಳ ಮೋರೆಯಕಡೆಗೆ ನೋಡಲಾರೆನು. ಡಾಫ ನಿಯು ಕಿಲ್ಡೇಯಾರನನ್ನು ಮರೆತಿರುವಳೆಂದು ನನಗನಿಸುತ್ತಿತ್ತು. ಆ ಬಗೆಯು ನನ್ನ ನಂಬಿಗೆಗೆ ಕಾರಣವೂ ಇತ್ತು. ಕಿಲ್ಡೇಯಾರನು ಕೆಂಪು ಸೈನ್ಯದೊಳಗಿನ ಚಾಕರಿ ಬಿಟ್ಟು ಫರಾರಿಯಾಗಲು, ಡಾಫನಿಯು ನನ್ನೆದುರಿಗೆ ಆ ಬಗ್ಗೆ ಎಂದೂ ಯಾವ ಮಾತೂ ತೆಗೆಯಲಿಲ್ಲ; ಆದರೆ ನಾನು ಅವರೀರ್ವರ ವಿವಾಹ ಸಂಬಂಧ ವನ್ನು ಕಡಿದೊಗೆಯಲು, ಅದರಿಂದ ಅವಳು ಒಮ್ಮೆಲೆ ರೋಗಪೀಡಿತ ಳಾದಳು. ಅವಳ ಹೃದ್ರೋಗಕ್ಕೆ ನಿರಾಶೆಯೇ ಕಾರಣವೆಂದು ಈಗ ನನಗನಿಸ ಹತ್ತಿದೆ. ಹವೆ ಬದಲಿಸಲಿಕ್ಕೆಂದು ನಾನು ಅವಳನ್ನು ದೇಶ-ವಿದೇಶಗಳಿಗೆ ಕರೆ ದೊಯ್ದಿದ್ದೆನು. ಅಲ್ಲಿ ಅವಳು ದೇಹಾರೋಗ್ಯದಿಂದಿದ್ದಳು. ಅದರಿಂದ ನಾವು ಗಳು ಲಂಡನ್ನಿಗೆ ಮರಳಿದೆವು; ಆದರೆ ಅವಳ ಮುಂಚಿನ ಮಿಂಚು ಬೇರೆ ಮತ್ತೆ ತೋರಲಿಲ್ಲ. ಕಳೆದ ಒಂದು ವರ್ಷದಿಂದಲೂ ಅವಳು ನಕ್ಕದ್ದನ್ನು ಯಾರೂ ಕಂಡಿಲ್ಲ. ಅವಳು ಯಾವ ಸಾಮಾಜಿಕ ಉತ್ಸವಗಳಲ್ಲೂ ಸಹಭಾಗಿಯಾಗು ವದಿಲ್ಲ. ನೃತ್ಯ-ಗೀತಗಳ ವಿಷಯದ ಅವಳ ಮೊದಲಿನ ಅನುರಾಗವು ಸಂಪೂರ್ಣ

ಲೋಪಿಸಿದೆ. ಲಗ್ನವಾದರೆ ಅವಳ ವಿಷಣ್ಣತೆಯೂ ಮಾನಸಿಕ ನಿರ್ಬಲತೆಯೂ ದೂರವಾದಾವೆಂದು ಬಗೆದು ನಾನು ಎಷ್ಟೋಜನ ಯೋಗ್ಯ ವರಗಳನ್ನು ಅವಳಿಗಾಗಿ ಆರಿಸಿವೆನು; ಆದರೆ ಡಾಫನಿಯು ಅವರಾರನ್ನೂ ವರಿಸಲಿಕ್ಕೆ ಸಮ್ಮತಿಸಲಿಲ್ಲ. ಇತ್ತೀಚಿಗೆ ಅವಳ ಸ್ವಾಸ್ಥ್ಯವು ಮತ್ತೆ ಕುಂದಿದೆ. ಕಿಲ್ಡೇಯಾರನನ್ನು ಕಾಣದಿರುವದೇ ಅವಳ ಮನಸ್ಸಿನ ಅಷ್ಟು ಕಷ್ಟಕ್ಕೆ ಕಾರಣವೆಂದು ನನಗನಿಸಹತ್ತಿದೆ."

ಲಾರ್ಡ ಮೆಸಿಂಡೇಲನು ಕ್ಷಣಕಾಲ ಸುಮ್ಮನಿದ್ದು ಮತ್ತೆ ಹೇಳತೊಡಗಿದನು:—"ಅಹುದು; ಅವರ ಹೊರತು ಅವಳ ಅಸುಖಕ್ಕೆ ಬೇರೆ ಕಾರಣವೇನಿದೆ, ಎಂಬದು ನನಗಂತೂ ತಿಳಿಯಲೊಲ್ಲದು. ಅವಳು ಯಾವಾಗಲೂ ಚಿಂತಾಕ್ರಾಂತಳು! ಊಟಕ್ಕೆ ಕುಳಿತರೆ ಏನನ್ನು ತಿನ್ನುವದಿಲ್ಲ. ಹಾಗೇಕೆಂದು ಕೇಳಿದರೆ 'ನನಗೆ ಹಸಿವೆ ಇಲ್ಲ' ಎಂಬದೊಂದೇ ನಿಶ್ಚಿತ ಉತ್ತರ. ಅದರಿಂದ ಅವಳ ದೇಹವು ದಿನದಿನಕ್ಕೆ ಕ್ಷೀಣವಾಗುತ್ತಲಿದೆ. ಇವಳು ಪ್ರಫುಲ್ಲ ಮನಸ್ಕಳಾಗಲು ಶಕ್ತಳಾಗದಿದ್ದರೆ ಇವಳಿಗೆ ಬೇರೆ ಏತರಿಂದಲೂ ಆರೋಗ್ಯಲಾಭವಾಗುವ ಆಶೆಯಿಲ್ಲೆಂದು ಡಾಕ್ಟರರು ಸ್ಪಷ್ಟವಾಗಿ ತಿಳಿಸಿರುತ್ತಾರೆ. ಡಾಕ್ಟರರು ದೈಹಿಕ ರೋಗಗಳಿಗೆ ಬೇಕಾದಂತಹ ಮದ್ದು ಮಾಡಬಲ್ಲರು; ಆದರೆ ಹೃದ್ರೋಗಕ್ಕೆ ಯಾವ ಡಾಕ್ಟರನೂ ಏನನ್ನೂ ಮಾಡಲಾಪನು."

ಅದಕ್ಕೆ ಬ್ಲೇಕನು:—"ಕಿಲ್ಡೇಯಾರನ ಅದರ್ಶನವೇ ಅವಳ ಮನೋರೋಗಕ್ಕೆ ಕಾರಣವೆಂಬದನ್ನು ನೀವು ನಿಃಸಂದೇಹವಾಗಿ ಹೇಳಬಲ್ಲಿರಾ?"

ಮೆಸಿ:—"ಖಂಡಿತವಾಗಿಯೂ ಅವೇ ಕಾರಣವು. ಅವನು ಮರಳಿ ಬಂದರೆ ಡಾಫನಿಯು ಕೂಡಲೆ ರೋಗಮುಕ್ತಳಾಗುವಳು. ಈ ನನ್ನ ಹತಭಾಗಿ ಕುವರಿಯು ಅವನನ್ನೇ ಬಯಸುವಳು!"

ಬ್ಲೇಕ:-"ನಿಮ್ಮ ಡಾಫನಿಯ ಪ್ರೇಮವು ಅತಿ ಗಭೀರವು; ಅತಿ ಪವಿತ್ರವು!

ಮೆಸಿ:—"ಆಕಾಶದಷ್ಟು ಗಭೀರವು! ಈ ಬಗೆಯ ನಾಟಕೀ ಪ್ರೇಮವನ್ನು ನಾನು ಸಹಿಸಲಾರೆನು. ಸ್ತ್ರೀಯರ ಹೃದಯವು ಕೇವಲ ನಿಸ್ಸಾರವು. ಅವರನ್ನು ಅದ್ಭುತ ಪಶುವೆಂದು ತಿಳಿಯದೆ ಮತ್ತೇನು?"

ಬ್ಲೇಕ:—"ಕಿಲ್ಡೇಯಾರನ ಬಗ್ಗೆ ನಿಮ್ಮ ಅಭಿಪ್ರಾಯವೇನಿದೆ?"

ಲಾರ್ಡ ಮೆಸಿಂಡೇಲನು ಉತ್ತೇಜಿತ ಕಂಠಸ್ವರದಿಂದ:—"ಆ ರಾಸ್ಕಲ್ಲನ ಬಗ್ಗೆ ನನ್ನ ಅಭಿಪ್ರಾಯವೇನೆಂಬದನ್ನು ನೀವು ಮತ್ತೆ ಕೇಳುವಿರಾ? ಆತನ ಯಾವ ಕುಕರ್ಮಗಳು ನಿಮಗೆ ಗೋಚರವಾಗಿಲ್ಲ? ಆತನು ತಾನಾಗಿ ಡಾಫನಿಗೆ ಯಾವ ತುಚ್ಛ ಕಾಣಿಕೆಗಳನ್ನು ಕೊಟ್ಟಿದ್ದನೋ, ನನ್ನ ಮನೆಯನ್ನು ಹೊಕ್ಕು

ಅವುಗಳನ್ನು ಕದ್ದೊಯ್ಯಲಿಕ್ಕೆ ಅವನಿಗೆ ನಾಚಿಕೆಯಾಗಲಿಲ್ಲವೇ? ಇದೇ ಏನು ಆತನ ಪ್ರೇಮದ ಪಡಿಕಟ್ಟು? ಮನುಷ್ಯನು ಇಷ್ಟರ ಮಟ್ಟಿಗೆ ಅಧಃಪತಿತನಾಗ ಬೇಕೆ? ಆತನ ದುಃಸ್ವಭಾವವನ್ನು ಕಂಡೇ ಅವನ ಸೋದರತ್ತೆಯು ತನ್ನ ಹೊಸ ಮೃತ್ಯುಪತ್ರದಲ್ಲಿ ಅವನಿಗೊಂದು ಫಾರ್ದಿಂಗು ಕೂಡ ಕೊಟ್ಟಿಲ್ಲ. ಆತನ ಸ್ವಭಾವದೋಷದಿಂದ ಅವನ ನೌಕರಿ ಹೋಯಿತು. ಇಂಥವನಿಗೆ ನಾನು ಸ್ವೇಚ್ಛೆಯಿಂದ ನನ್ನ ಕನ್ಯೆಯನ್ನು ಕೊಡುವೆನೋ? ನೀವಿದನ್ನು ನನಗೆ ಮತ್ತೆ ಏಕೆ ಕೇಳುತ್ತೀರಿ?"

ಬ್ಲೇಕ:—"ನೀವು ಅವನನ್ನಿಷ್ಟು ನಿಂದಿಸಬೇಡಿರಿ. ಅವನ ಸೋದರತ್ತೆಯು ಅವನನ್ನು ಅತ್ಯಂತ ವಂಚಿಸಿರುವಳು. ಆತನ ಪರಮ ಶತ್ರುವು ಅವನ ಬಂಧುವೆಂದಾಗಿ ಆತನನ್ನು ಸರ್ವ ರೀತಿಯಿಂದಲೂ ನಾಶಗೊಳಿಸಿರುತ್ತಾನೆ. ಅದೇ-ಆ ರಾಸ್ಕಲ್ಲ ನೇಭಿಲಹರಕೋರ್ಟನೇ ಕಿಲ್ಡೇಯಾರನಿಗೆ ಬಲವಾದ ಆಶೆ ದೋರಿ ಆತನನ್ನು ನಿರಾಶೆಗೊಳಿಸಿದನು."

ಲಾರ್ಡ ಮೆಸಿಂಡೇಲ:—"ಆ ಎಲ್ಲ ಸಂಗತಿಯನ್ನು ನಾನು ನಿಮ್ಮಿಂದ ಈ ಮೊದಲೇ ಕೇಳಿಕೊಂಡಿದ್ದೇನೆ; ಮತ್ತು ಅದನ್ನು ನಿಜವೆಂದೂ ನಂಬುತ್ತೇನೆ. ಆತನು ಸಮಾಜದ ದೃಷ್ಟಿಯಿಂದ ಇಷ್ಟು ಹೇಯನೂ ಹೀನನೂ ಆಗದಿದ್ದರೆ ಒಂದುವೇಳೆ ನಾನು ಆತನಿಗೆ...."ಇಷ್ಟೇ ಅಂದು ಅವನು ಸುಮ್ಮನಾದನು. ಆ ಮೇಲೆ ಕೆಲ ನಿಮಿಷ ಸುಮ್ಮನಿದ್ದು ಮತ್ತೆ:-"ಆವರೆ ಆತನು ಹೇಗೆಯೋ ಇರಲಿ, ನನ್ನ ಮಗಳನ್ನಂತೂ ನಾನು ಬದುಕಿಸಲೇ ಬೇಕು. ಅವಳ ಜೀವನವು ವಿಪನ್ನವಾಗಿ ಹೋಗಿದೆ. ನಾನು ನನ್ನ ಕಣ್ಣೆದುರಿಗೆ ಅವಳ ಮರಣವನ್ನು ಸಹಿಸಲಾರೆನು. ಅವಳು ಕಿಲ್ಡೇಯಾರನನ್ನೇ ಅಪೇಕ್ಷಿಸುತ್ತಾಳೆ. ನನ್ನ ಮಾನ-ಮನ್ನಣೆ ಇವುಗಳೆಲ್ಲ ಹೋದರೂ ಚಿಂತೆಯಿಲ್ಲ. ನಾನು ಡಾಫನಿಯ ಆಶೆಯನ್ನು ಪೂರ್ತಿಗೊಳಿಸುವೆನು; ಸಮಾಜದ ಉಪಹಾಸವನ್ನು ಸಹಿಸುವೆನು. ಏನಾದರೂ ನನ್ನ ಪ್ರೀತಿಯ ಡಾಫನಿಯು ಸುಖಿಯಾಗಲಿ! ನಾನು ಅವಳ ನಿಃಸಹಾಯ, ದರಿದ್ರ ಸ್ವಾಮಿಯನ್ನು ಪರಿಪೋಷಿಸಲಿಕ್ಕೆ ಸಮರ್ಥನಿರುತ್ತೇನೆ. ಆ ಯೋಗ್ಯತೆಯು ನನ್ನಲ್ಲಿದೆ."

ಬ್ಲೇಕ:—"ಆದರೆ ಬ್ರಾವುನ್ ಕಿಲ್ಡೇಯಾರನು ಈಗ ನಿಃಸಹಾಯಕ ದರಿದ್ರನಾಗಿಲ್ಲ. ಎಷ್ಟೋ ಮಂದಿ ಲಾರ್ಡ ಜನರಿಗಿಂತಲೂ ಆತನು ಧನವಂತನಾಗಿರುತ್ತಾನೆ."

ಮೆಸಿಂಡೇಲ:—"ಧನವಂತನೇ! ತಿರುಕನಿಗಿಂತಲೂ ಕಡೆಯಾದ ಕಿಲ್ಡೇಯಾರನು ಹಲವು ಲಾರ್ಡರಿಗಿಂತಲೂ ಧನವಂತನೇ? ಬ್ಲೇಕರೇ ನಿಮಗೇನು

ತಲೆ ಕೆಟ್ಟಿದೆಯೋ?"

ಬ್ಲೇಕ:"ಇಲ್ಲ; ನಾನು ನಿಜವನ್ನೇ ಹೇಳಿರುವೆನು· ನಾನು ಇಂವೇ ತಿಳಿದಿರ ವುವೇನಂದರೆ, ಮಿಸೆಸ್ ಓರಾಯನ್‌ಡೇನಳು ಸಾಯುವ ಮೊದಲು ಭ್ರಮ ದಿಂದ ತನ್ನ ನೂತನ ಮೃತುಪತ್ರ ಹರಿದೊಗೆದಿರುತ್ತಾಳೆಂದು; ಆದರೆ ಅವಳು ಕಿಲ್ಡೆ ಯಾರನಿಗೆ ಅನುಕೂಲವಾದ ಯಾವ ಮೃತ್ಯುಪತ್ರವನ್ನು ಮುಂಚೆ ಮಾಡಿದ್ದ ಳೋ ಅದೊಂದೇ ಈಗುಳಿದಿರುವ ಮೃತ್ಯುಪತ್ರವು. ಅವಳ ಎಟರ್ನಿಯಾದ ಪಾರ್ಚ ಮೆಂಟನು ಇಂದು ನನ್ನನ್ನು ಕಂಡು ಕಿಲ್ಡೇಯಾರನು ತನ್ನ ಸೋದರತ್ತೆಯ ಎಲ್ಲ ಆಸ್ತಿ-ಪಾಸ್ತಿಗಳಿಗೆ ಏಕಮಾತ್ರ ಉತ್ತರಾಧಿಕಾರಿಯಾದನೆಂದೂ ಅವನ ಭೂಮಿ-ಕಾಣೆಗಳ ಉತ್ಪತ್ತಿಯೇ ವರ್ಷಕ್ಕೆ ಹದಿನೈದು-ಇಪ್ಪತ್ತು ಸಾವಿರ ಪೌಂಡಿದೆಯೆಂದೂ ಅದರ ಹೊರತು ಬೇರೆ ಬೇರೆ ಬ್ಯಾಂಕುಗಳಲ್ಲಿರುವ ದುಡ್ಡಿ ಗಂತೂ ಮಿತಿಯೇ ಇಲ್ಲವೆಂದೂ ತಿಳಿಸಿರುತ್ತಾನೆ. ಅದುದರಿಂದ ಕಿಲ್ಡೇಯಾರನಷ್ಟು ಹಣವು ಹಲವು ಮಂದಿ ಲಾರ್ಡರಲ್ಲೂ ಇಲ್ಲೆಂಬ ಮಾತು ಸತ್ಯವು.—ಮೂರು ಮೂರು ಸಾರೆಯೂ—ಸತ್ಯವಾಗಿವೆ."

ಲಾರ್ಡ ಮೆಸಿಂಡೇಲನು ದುಡ್ಡಿಗಿಂತಲೂ ಚಾರಿತ್ರ್ಯಕ್ಕೆ ಹೆಚ್ಚು ಮಹತ್ವ ಕೊಡುತ್ತಿದ್ದನು. ಕಿಲ್ಡೇಯಾರನು ಒಮ್ಮೆಲೆ ಸಿರಿವಂತನಾದನೆಂದು ಅವನ ವಿಷಯದ ಮೆಸಿಂಡೇಲನ ಮತವು ಒಮ್ಮೆಲೆ ಪರಿವರ್ತಿತವಾದೀತೆಂತಲ್ಲ. ಆದರೂ ಆತನು:-"ಈ ಸಂಗತಿಯು ನಿಜವಿದ್ದರೆ ಇವಕ್ಕೆ ಸುಸಂವಾದವೇ ಅನ್ನ ಬೇಕು. ನಿಮ್ಮ ನುಡಿ ಕೇಳಿ ನಿನಗೆ ಸಂತೋಷವಾಯಿತು; ಆದರೆ ಕಿಲ್ಡೇಯಾ ರನ ಸುಚರಿತ್ರವನ್ನು ಕೇಳಿದರೆ ನನಗೆ ಇದಕ್ಕೂ ಹೆಚ್ಚು ಸಂತಸವಾದೀತು."

ಬ್ಲೇಕ:—"ದೊಡ್ಡ ಜನರ ಎಲ್ಲ ದೋಷಗಳೂ ಮುಚ್ಚಿಬಿಡುತ್ತವೆ. ಕಿಲ್ಡೇಯಾರನನ್ನೂ ಇನ್ನು ಮೇಲೆ ಜನರು ಸನ್ಮಾನಿಸುವರು; ಅವನನ್ನು ಹೊಗ ಳುವರು. ಅದೆಲ್ಲಿರಲಿ. ಈಗ ನೀವು ನನ್ನನ್ನೇನು ಮಾಡಹೇಳುವಿರಿ? ನಾನು ಅವನನ್ನು ಪತ್ತೆ ಹಚ್ಚಿಕೊಂಡು ಬರಬೇಕೆಂದು ನೀವು ಬಯಸುವಿರಾ?"

ಮೆಸಿ:—"ಹೌದು; ಅವನನ್ನು ಶೋಧಿಸಿ ಕರೆತನ್ನಿರಿ. ಡಾಫನಿಯನ್ನು ಅವನಿಗೆ ಧಾರೆಯೆರೆದು ಕೊಟ್ಟು ಅವಳನ್ನು ಬದುಕಿಸೋಣ."

ಬ್ಲೇಕ:—ನೀವು ಯೋಗ್ಯ ಸಂಕಲ್ಪವನ್ನೇ ಮಾಡಿರುವಿರಿ. ಹೀಗೆ ಮಾಡಿ ನೀವು ಅನುತಾಪ ಪಡಲಾರಿರೆಂದು ನನ್ನ ಭರವಸೆಯಿದೆ. ನಾನು ಆತ ನನ್ನು ತೀವ್ರವೇ ಪತ್ತೆ ಹಚ್ಚುವೆನೆಂಬ ನಂಬಿಗೆಯು ನನಗಿದೆ; ಆದರೂ ಒಂದು ವರ್ಷದಿಂದಲೂ ಅವನನ್ನು ಅದೆಲ್ಲೂ ಅದಾಡೂ ಕಂಡಿಲ್ಲ.

ಮೆಸಿಂಡೇಲ:—ಈ ಮಾತು ನಿಜವಲ್ಲ. ಕೆಲ ತಿಂಗಳುಗಳ ಹಿಂದೆ ಡಾಫ

ನಿಯು ಅವನನ್ನು ಕಂಡಿರುತ್ತಾಳೆ.

ತಾನು ಕಿಲ್ಡೇಯಾರನನ್ನು ಎಲ್ಲಿ ಹಾಗು ಹೇಗೆ ಕಂಡೆನೆಂಬದನ್ನು ಡಾಫನಿಯು ತನ್ನ ತಂದೆಗೆ ಮರೆ ಮಾಜದೆ ಹೇಳಿದ್ದಳು. ಮೆಸಿಂಡೇಲನು ಆ ಬಗ್ಗೆ ಮಗಳಿಂದ ಏನೇನು ಕೇಳಿಕೊಂಡಿದ್ದನೋ ಅದನ್ನೆಲ್ಲ ಬ್ಲೇಕನಿಗೆ ಹೇಳಿದನು. ನಮ್ಮ ವಾಚಕರಿಗೆ ಆ ಸಂಗತಿಯು ತಿಳಿದಿರುವದರಿಂದ ಅದನ್ನು ಮತ್ತೆ ಹೇಳುವ ಗೊಡವೆಗೆ ಹೋಗುವದಿಲ್ಲ.

ಬ್ಲೇಕನು ಎಲ್ಲವನ್ನೂ ಕೇಳಿಕೊಂಡು ವಿಸ್ಮಯಭರದಿಂದ:—ಡಾಫನಿಯ ಪ್ರೇಮವೆಷ್ಟು ಗಭೀರವಪ್ಪಾ! ನಿಮ್ಮ ಮಗಳು ರಾತ್ರಿಯ ವೇಳೆಯಲ್ಲಿ ಲಂಡನ್ನಿನ ದರಿದ್ರ ಹಳ್ಳಿಗಳಲ್ಲಿ ಕಾಲುನಡಿಗೆಯಿಂದ ಸಂಚರಿಸಿ ತನ್ನ ಪ್ರಿಯಕರನನ್ನು ಹುಡುಕಲಿಕ್ಕೆ ಪ್ರಯತ್ನಿಸಿದಳಲ್ಲವೇ? ಇದು ಅವರ್ಣನೀಯ ಸಂಗತಿಯೇ ಸರಿ.

ಮೆಸಿ:—ಆತನಿಗಾಗಿ ಅವಳು ತುಸ ಕಷ್ಟಪಟ್ಟಿಲ್ಲ. ಸುದೈವವಿತ್ತೆನ್ನಿ; ಇಲ್ಲದಿದ್ದರೆ ಅವಳು ಅಲ್ಲಿಯವರಾರಿಂದಲಾದರೂ ಆಕ್ರಮಿತಳಾಗಿದ್ದರೆ ಸಮಾಜದಲ್ಲಿ ನಾನು ಮೋರೆ ತೋರಿಸುವಂತಿರಲಿಲ್ಲ. ನಾನು ಅವಳನ್ನು ಹೆಚ್ಚಾಗಿ ಬೈದು ಅಂದು ಇನ್ನೊಮ್ಮೆ ಅಂಥ ಹುಚ್ಚುಚ್ಚಾರಕ್ಕೆ ಹೋಗಬೇಡೆಂದು ನಿಷೇಧಪಡಿಸಿದೆನು. ಆಗಿನಿಂದಲೇ ಅವಳ ಬೇನೆಯು ಹೆಚ್ಚಿತು.

ಬ್ಲೇಕ:—ಕಿಲ್ಡೇಯಾರನು ಎಲ್ಲಿಯೇ ಇರಲಿ; ನಾನು ಅವನನ್ನು ಹುಡುಕಿ ಕರೆತರುವೆನು. ಅವನಿಗೆ ಹಿರಿಯರ ಕೊಂಚ ವೃತ್ತಿಯೂ ಉಂಟು. ಆ ಹಣವನ್ನು ಅವನು ಎಲ್ಲಿಂದ ಪಡೆಯುವನೆಂಬದನ್ನು ತಿಳಕೊಳ್ಳುವದು ಕಠಿಣ ಕೆಲಸವಲ್ಲ.

ಮೆಸಿ:—ನಿಮಗೆ ಹೇಗೆ ಸಾಧ್ಯವೋ ಹಾಗೆ ನೀವು ಅವನನ್ನು ಶಕ್ಯವಾದಷ್ಟು ಬೇಗನೆ ಪತ್ತೆ ಹಚ್ಚಿರಿ. ನೀವು ಈಗ ಡಾಫನಿಯನ್ನೊಮ್ಮೆ ಕಾಣುವಿರಾ? ನಿಮ್ಮೊಡನೆ ಸಂಭಾಷಿಸಿದರೆ ಅವಳ ಮನಸ್ಸಿಗೆ ತುಸ ವಿರಾಮವಾದರೂ ಆದೀತು. ನಿಮ್ಮನ್ನು ಇಲ್ಲಿಗೆ ಬರ ಹೇಳಿದ ಸಂಗತಿಯು ಆಕೆಗೆ ತಿಳಿದಿದೆ.

ಡಾಫನಿ ಭಾರನನ್ನಳು ತನ್ನ ಮಲಗುವ ಕೋಣೆಯಲ್ಲಿ ಒಂದು ಆರಾಮ ಕುರ್ಚಿಯ ಮೇಲೆ ಅಡ್ಡಾಗಿದ್ದಳು. ಬ್ಲೇಕನು ಅವಳ ಕಂದಿದ ದೇಹ ಹಾಗು ಕಾಂತಿಹೀನ ಮುಖಗಳನ್ನು ಕಂಡು ಅತ್ಯಂತ ವ್ಯಥೆಗೊಂಡನು. ಅರಳಲಿದ್ದ ಕಮಲವು ಅಕಾಲದಲ್ಲೇ ಒಣಗಿ ಕಳಚತೊಡಗಿತ್ತು!

ಬ್ಲೇಕನು ತನ್ನ ತಂದೆಯೊಡನೆ ತನ್ನ ಕೋಣೆಗೆ ಬರುತ್ತಿರುವದನ್ನು ಕಂಡ ಡಾಫನಿಯು ಬಹು ಮೃದು ದನಿಯಿಂದ:—"ಬ್ಲೇಕರೇ, ನಮಸ್ಕಾರ. ನೀವು ಆರೋಗ್ಯದಿಂದಿರುವಿರಾ?"

ಬ್ಲೇಕ:—"ನಾನಂತೂ ಆರೋಗ್ಯದಿಂದಲೇ ಇದ್ದೇನೆ: ಆದರೆ ನೀನೆಷ್ಟು ಭಯಂಕರ ರೋಗಿಷ್ಟಳಾಗಿರುವೆಯಲ್ಲ! ನಿನ್ನ ತಂದೆಯಿಂದ ನಿನ್ನ ಬೇನೆಯ ಸಂಗತಿಯನ್ನು ಕೇಳಿ ಅತ್ಯಂತ ದುಃಖಿತನಾದೆನು. ನಿನ್ನೀ ಶೋಚನೀಯ ಸ್ಥಿತಿಯನ್ನು ಕಂಡು ನನ್ನ ಮನಸ್ಸಿನಲ್ಲಿ ಅದಕ್ಕಿಂತಲೂ ಹೆಚ್ಚು ವೇದನೆಯಾಗುತ್ತದೆ. ಪ್ರಸಿದ್ಧ ಡಾಕ್ಟರರು ಎಷ್ಟೋ ದಿನಗಳಿಂದ ಚಿಕಿತ್ಸೆ ಮಾಡುತ್ತಿದ್ದರೂ ನಿನಗೆ ಕೊಂಚವೂ ಗುಣವಾಗಿಲ್ಲ. ಇನ್ನು ನಾನೇ ಕೆಲ ದಿವಸ ನಿನ್ನ ಚಿಕಿತ್ಸೆಯ ಭಾರವನ್ನು ವಹಿಸಿ ನೋಡುತ್ತೇನೆ, ನಿನಗೆ ಅದರಿಂದ ಏನಾದರೂ ಫಲವಾಗುವದೋ ಇಲ್ಲವೋ ಎಂಬದನ್ನು. ನಿನ್ನ ತಂದೆಯೊಡನೆ ಆ ಸಂಬಂಧದ ಎಲ್ಲ ಮಾತು-ಕಥೆಗಳು ಆಗಿರುತ್ತವೆ. ನಾನು ಬೇಗನೆ ಬ್ರಾವುನ್ ಕಿಲ್ಡೇಯಾರನನ್ನು ಪತ್ತೆಹಚ್ಚಿಕೊಂಡು ಬರುತ್ತೇನೆ."

ಡಾಫನಿಯು ಕುಗ್ಗಿದ ದನಿಯಿಂದ:—"ಅಪ್ಪನು ಆ ಬಗ್ಗೆ ನಿಮಗೆ ಬಲವಂತಪಡಿಸಿರುವನೆ?"

ಮೆಸಿ:—"ಅಹುದವ್ವಾ ಅಹುದು. ನಾನು ಈ ಬಗ್ಗೆ ಬ್ಲೇಕರಿಗೆ ಬಲವಂತ ಪಡಿಸಿರುತ್ತೇನೆ. ಮಗಳಿಗಾಗಿ ನನ್ನ ಅಹಂಕಾರ-ಗರ್ವಗಳೆಲ್ಲವೂ ಪರಾಜಿತವಾದವು. ನಿನ್ನ ಜೀವನವೇ ನನಗೆ ಎಲ್ಲಕ್ಕಿಂತಲೂ ಹೆಚ್ಚು ಇಷ್ಟವಾದುದು. ನಿನ್ನಿಚ್ಛೆಯೇ ಈಡೇರಲಿ. ಕಿಲ್ಡೇಯಾರನು ದೊರೆತೊಡನೆಯೇ ನಿನ್ನನ್ನು ಅವನಿಗೆ ಅರ್ಪಿಸಿ ಬಿಡುತ್ತೇನೆ."

ಡಾಫನಿಯು ಮುದಿತಳಾಗಿ:—"ಅಪ್ಪಾ, ನಾನಿನ್ನು ಬೇಗನೆ ಗುಣ ಹೊಂದುವೆನೆಂದು ಅನಿಸುತ್ತದೆ. ನಾನು ನಿನ್ನನ್ನು ಸಂತಸಗೊಳಿಸಲೆಂದು ಆತನನ್ನು ಮರೆಯಲಿಕ್ಕೆ ಎಷ್ಟೋ ಪ್ರಯತ್ನಿಸಿದೆನು. ಮನಸ್ಸಿನೊಡನೆ ಒಂದೇ ಸವನೆ ಕಾದಿ ಕಾದಿ ಗಾಯಗೊಂಡೆನು, ಸೊರಗಿ ಸಾಯಲಾದೆನು; ಆದರೂ ಆತನನ್ನು ಮರೆಯಲಾಗಲಿಲ್ಲ."

ಬ್ಲೇಕ:—"ನೀನಿನ್ನು ನಿಶ್ಚಿಂತಳಾಗಿರು. ನಾನು ತೀವ್ರವೇ ಆತನನ್ನು ಕರೆತರುತ್ತೇನೆ. ಇನ್ನು ನಾನು ಹೊರಡುತ್ತೇನೆ; ಆದರೆ ಇಲ್ಲಿಂದ ಹೊರಡುವ ಮೊದಲು ನಿನಗೆ ಕಿಲ್ಡೇಯಾರನ ಸಂಬಂಧದ ಒಂದು ಸಂಗತಿ ತಿಳಿಸುವೆನು."

ಅದಕ್ಕೆ ಲಾರ್ಡ ಮೆಸಿಂಡೇಲನಂದನು:—"ಬೇಡ; ಈಗ ಹೇಳ ಬೇಡಿ. ನಾನದನ್ನು ಪ್ರಸಂಗವರಿತು ತಿಳಿಸುವೆನು. ಇವಳ ಈ ಬಗೆಯ ಕ್ಷೀಣ ದೇಹಕ್ಕೆ ಹೆಚ್ಚು ಉತ್ತೇಜನವು ಸಹನವಾಗಲಾರದು."

ಬ್ಲೇಕನು ಅವರಿಬ್ಬರಿಗೂ ಪೊಡಮೊಟ್ಟು ಮನೆಗೇನೋ ಹಿಂದಿರುಗಿದ್ದನು; ಆದರೆ ಆಗ ಆತನ ಮನಸ್ಸು ಚಿಂತಾರಹಿತವಾಗಿರಲಿಲ್ಲ. ಆತನು ಲಾರ್ಡ

ಮೆಸಿಂಡೇಲ ಮತ್ತು ಡಾಫನಿ ಭಾರನನ್ನರಿಗೆ ಕಿಲ್ಡೇಯಾರನನ್ನು ಬೇಗನೆ ಪತ್ತೆ ಹಚ್ಚಿ ಕರೆತರುವೆನೆಂದು ಆಶೆದೋರಿ ಬಂದಿದ್ದನು; ಆದ್ದರೆ ಅವನನ್ನೆಲ್ಲಿ ಪತ್ತೆ ಹಚ್ಚಲಿ? ನನ್ನ ಪ್ರಯತ್ನಕ್ಕೆ ಯಶವೆಂದು ದೊರೆಯುವದು? ಇದನ್ನು ಅನುಮಾನಿಸುವದೇ ಅವನಿಗೆ ದುಸ್ತರವಾಗಿ ಹೋಯಿತು.

§ § § §

ಬ್ರಾವುನ್ ಕಿಲ್ಡೇಯಾರನು ಒಂದು ವರ್ಷದ ಹಿಂದೆ 'ಈಸ್ಟ ಎಂಡ' ದಿಂದ ತನ್ನ ಅನುತಾಪ ಸಂಬಂಧದ ಕಾಗದವನ್ನು ಡಾಫನಿಗೆ ಕಳಿಸಿದ್ದನು; ಹಾಗು ಒಂದು-ಒಂದೂವರೆ ತಿಂಗಳ ಮುಂಚೆ ಹೊರಾಯಿಟ್ ಚ್ಯಾಂಪೇಲದ ಹತ್ತರ ಒಂದು ದಿನ ರಾತ್ರಿಯಲ್ಲಿ ದೈವಯೋಗದಿಂದ ಡಾಫನಿಗೆ ಆಕಸ್ಮಿಕವಾಗಿ ಆತನ ದರ್ಶನವಾಗಿತ್ತು. ಈ ಎಲ್ಲ ಸಂಗತಿಗಳನ್ನು ಮನದಂದು ಬ್ಲೇಕನು ನಿರ್ಧರಿಸಿದ್ದೇನಂದರೆ, ಕಿಲ್ಡೇಯಾರನು ಲಂಡನ್ನಿನ ಪೂರ್ವಭಾಗದ ದರಿದ್ರ ಹಳ್ಳಿಗಳಲ್ಲಿ ಯಾವುದೋ ಒಂದು ಬಗೆಯಿಂದ ಗೌಪ್ಯವಾಗಿ ವಾಸಿಸಿರು ತ್ತಾನೆ. ದರಿದ್ರರೊಳಗೆ, ದರಿದ್ರರ ವೇಷದಿಂದ, ತೀರ ಅಲ್ಪವಾದ ಹಿರಿಯರ ವೃತ್ತಿಯೊಳಗೆ ಆತನ ಊಟ-ವಸತಿಗಳ ನಿರ್ವಹಣವಾಗುತ್ತಿರಬೇಕು; ಆದರೆ ಇದೆಲ್ಲವೂ ಕೇವಲ ಅನುಮಾನವೇ. ದಾರಿದ್ರ್ಯದ ಝಳವನ್ನು ತಡೆಯಲಾರದೆ ಆತನು ಒಂದು ವೇಳೆ ಇಂಗ್ಲಂಡದಿಂದ ಬೇರೆ ಕಡೆಗೆ ಹೋಗಿದ್ದರೂ ಹೋಗಿರ ಬಹುದು; ಅಥವಾ ರೋಗಪೀಡಿತನಾಗಿ ಯಾವುದೊಂದು ದರಿದ್ರ ಚಪ್ಪರ ದಲ್ಲಿ ಆತನ ಅಂತವೂ ಆಗಿದ್ದೀತು. ಏನಾಗಿತ್ತೋ-ಯಾರು ಬಲ್ಲರು?

ಈ ಸಂಬಂಧದಲ್ಲಿ ವೃತ್ತಪತ್ರಗಳಲ್ಲಿ ಆತನ ವಿಷಯದ ಪ್ರಕಟನೆ ಪ್ರಕಟಿ ಸುವದೇ ಪ್ರಥಮ ಕರ್ತವ್ಯವೆಂದು ಬ್ಲೇಕನಿಗನಿಸಿತು; ಆದರೆ ಈತನೇ ಪಾರ್ಚ ಮೆಂಟನು ಹಾಗೆ ಮಾಡಬೇಕೆಂದಾಗ ನಿಷೇಧ ಮಾಡಿದವನು! ಎಷ್ಟೋ ಯೋಚಿಸಿದ ನಂತರ ಆತನು ಆ ಸಂಬಂಧವಾಗಿ ಅನೇಕ ದೈನಿಕ ಪತ್ರಗಳಲ್ಲಿ ಪ್ರಕಟಿಸಿದನು. "ಕಿಲ್ಡೇಯಾರನು|ಎಲ್ಲಿದ್ದರೂ ಅವನು ಎಟರ್ನಿ ಪಾರ್ಚಮೆಂಟ ರನ್ನು ಕೂಡಲೆಕಂಡರೆ ಅವರಿಂದ ಅವನಿಗೆ ತನ್ನ ವಿಷಯದ ಒಳ್ಳೇ ಸಂಗತಿಯು ತಿಳಿದೀತು" ಎಂಬುದೇ ಆ ಪ್ರಕಟನೆಯ ಸಾರವಾಗಿತ್ತು.

ಆದರೆ ಆತನು ಆ ಪ್ರಕಟನೆಯನ್ನು ವೃತ್ತಪತ್ರಗಳಿಗೆ ಕಳಿಸುವ ಮುನ್ನ ಬ್ಲೇಕನು ಕಿಲ್ಡೇಯಾರನ ತಂದೆಯ ಆಸ್ತಿಯಿದ್ದ ಸಮರಸೇಟ ಹೌಸಿಗೆ ಹೋಗಿ ಆತನ ತಂದೆಯ ಮೃತ್ಯುಪತ್ರವನ್ನು ನೋಡಿ ಬಂದನು. ಅದರಲ್ಲಿ ಕಿಲ್ಡೇಯಾರನಿಗೆ ವರ್ಷಕ್ಕೆ ಒಂದು ನೂರು ಪೌಂಡಿನ ವೃತ್ತಿಯು ಬರೆದಿತ್ತು. ಯಾವನು ಆ ಹಣವನ್ನು ಕಿಲ್ಡೇಯಾರನಿಗೆ ಕಳಿಸುತ್ತಿದ್ದನೋ ಆತನೊಬ್ಬ

ಎಟರ್ನಿ. ಆತನನ್ನು ರಾಜರ್ಸನ್ನನೆಂದೆನ್ನುವರು. ಬ್ಲೇಕನು ಆ ರಾಜರ್ಸನ್ನನನ್ನು ಕಂಡು ಕೇಳಲು, ವೆಥನಾಳ ಗ್ರೀನ ಲೇನಿನಲ್ಲಿ ಲಗನೇ ಮನೆಯಲ್ಲಿ ಕಿಲ್ಡೇಯಾರನು ವಾಸಿಸುತ್ತಾನೆಂದೂ, ಮೂರು-ಮೂರು ತಿಂಗಳಿಗೊಮ್ಮೆ ಇಪ್ಪತ್ತೈದು ಪೌಂಡುಗಳಂತೆ ಅವನಿಗೆ ಚೆಕ್ಕ ಕಳಿಸುತ್ತಿರುವೆನೆಂದೂ, ಇನ್ನು ಮುಂದಿನ ಚೆಕ್ಕನ್ನು ಇನ್ನೊಂದು ವಾರಕ್ಕೆ ಕಳಿಸಲಿರುವೆನೆಂದೂ ಆತನು ಹೇಳಿದನು.

ಬ್ಲೇಕನು ಅದನ್ನು ಕೇಳಿ ನಿರ್ಧಾಸ್ತನಾದನು. ತಾನು ಅಲ್ಲಿಗೆ ಹೋದ ಕೂಡಲೆ ತನಗೆ ಕಿಲ್ಡೇಯಾರನ ಭೆಟ್ಟಿಯು ಖಂಡಿತವಾಗಿಯೂ ಆಗುವದೆಂದು ತಿಳಿದನು. ಆಗಲೆ ಅವನು ಆ ಎಟರ್ನಿಯ ಆಫೀಸಿನಿಂದ ವೆಥನಾಳ ಗ್ರೀನ ಲೇನಿನ ಲಗನೇ ನಂಬರಿನ ಮನೆಗೆ ಹೋಗಿ ನೋಡುತ್ತಾನೆ, ಅಲ್ಲಿ ಆತನಿರಲಿಲ್ಲ.

ಆ ಮನೆಯ ಮಾಲಕಳಿಂದ ತಿಳಿದ ಸಂಗತಿಯಿಂದ ಬ್ಲೇಕನ ಕಣ್ಣುಗಳು ಬೆಳ್ಳಗಾಗಿ ಬಿಟ್ಟವು! ಅವಳು ಹೇಳಿದ್ದೇನಂದರೆ:—'ಕಿಲ್ಡೇಯಾರನೆಂಬ ಹೆಸರಿನವನಾವನೂ ಇಲ್ಲಿರಲಿಲ್ಲ. ಉಯಿಲ್‌ಸನ್ ಎಂಬ ಹೆಸರಿನ ಸುಮಾರು ೨೫ ವರ್ಷ ವಯಸ್ಸಿನ ಒಬ್ಬ ತರುಣನು ಕೆಲವು ತಿಂಗಳುಗಳಿಂದ ಇಲ್ಲಿ ಬಾಡಿಗೆಗೆ ಇದ್ದನು; ಆದರೆ ಸಾಧಾರಣವಾಗಿ ಒಂದು ತಿಂಗಳಿನಿಂದಲೂ ಅವನು ಕಾಣದಾಗಿದ್ದಾನೆ.' ಅವನು ಆಕೆಯ ಬಾಡಿಗೆಯನ್ನು ಚುಕ್ತಾ ಕೊಟ್ಟು ಹೋಗಿದ್ದನು; ಆದರೆ ಎಲ್ಲಿಗೆ ಹೋಗುತ್ತಿರುವೆನು, ಎಂದಿಗೆ ಮರಳಿ ಬರುವೆನು ಎಂಬ ಯಾವುದನ್ನೂ ಅವನು ಆಕೆಯೆದುರು ಹೇಳಿ ಹೋಗಿರಲಿಲ್ಲ.

ಬ್ಲೇಕನು ಮುಂಮೊಂದು ವಾರದ ವರೆಗೆ ಅಲ್ಲಲ್ಲಿ ಹುಡುಕಿದನು. ಅವನ ಪತ್ತೆಯು ಎಲ್ಲಿಯೂ ಹತ್ತಲಿಲ್ಲ. ದೈನಿಕ ಪತ್ರಿಕೆಯೊಳಗೆ ಪ್ರಕಟಿಸಿದ್ದ ಪ್ರಕಟನೆಯಿಂದಲೂ ಏನೂ ಪ್ರಯೋಜನವಾಗಲಿಲ್ಲ. ರಾಜರ್ಸನ್ನನು ಕಂತದ ಮೇರೆಗೆ ಇಷ್ಟರಲ್ಲಿ ತಾನು ಕಳಿಸತಕ್ಕ ೨೫ ಪೌಂಡು ಚೆಕ್ಕನ್ನು ಕಿಲ್ಡೇಯಾರನ ಅಡ್ರೆಸ್ಸಿಗೆ ಕಳಿಸಿದನು; ಆದರೆ ಅದು ಎಷ್ಟೋ ದಿನಗಳ ತರುವಾಯ ಹಿಂದಿರುಗಿ ಬಂತು. 'ಮಾಲಕನ ಪತ್ತೆಯಿಲ್ಲ' ಎಂದು ಆ ಕಡೆಯ ಬೀಟಿನ ಪೋಸ್ಟಮನ್ನನು ಆ ಲಕ್ಕೋಟಿಯ ಮೇಲೆ ಷರಾ ಬರೆದಿದ್ದನು.

ಆ ಚೆಕ್ಕು ತಿರುಗಿ ಬಂದುದನ್ನು ಕಂಡು ಬ್ಲೇಕನ ಮನಸ್ಸಿನಲ್ಲೊಂದು ಹೊಸ ಅನುಮಾನವುಂಟಾಯಿತು. ಆಗ ಆತನು ಸ್ಮಿಥನನ್ನು ಕುರಿತು ಹೇಳಿದನೇನಂದರೆ:—"ಕಿಲ್ಡೇಯಾರನ ವೃತ್ತಿಯ ಚೆಕ್ಕು ಮರಳಿ ಬಂತು; ಅದರಿಂದ ಆತನು ಈಗ ಲಂಡನ್ನಿನಲ್ಲಿಲ್ಲ; ಆದರೆ ಬರತಕ್ಕ ಹಣ ತಕ್ಕೊಳ್ಳುವ ವ್ಯವಸ್ಥೆ ಮಾಡದೆ ಆತನೆಲ್ಲಿಗೆ ಹೋಗಿದ್ದಾನು? ಆತನು ಯಾವುದೊಂದು ಸೈನ್ಯ

ಪಥಕದಲ್ಲಿ ಸೇರ್ಪಡೆ ಹೊಂದಿ ರಣಭೂಮಿಗೆ ಹೋಗಿರಬಹುದೆಂದು ನನಗನಿಸುತ್ತದೆ. ವೈರಿಗಳನ್ನೆದುರಿಸುವ ಸಲುವಾಗಿ ದೇಶದ ನಾಲ್ಕೂ ಕಡೆಗಳಲ್ಲೂ ದಂಡಾಳುಗಳನ್ನು ಸಂಗ್ರಹಿಸುತ್ತಿದ್ದಾರೆ. ಆತನಂತಹ ಸಾಹಸೀ ಸೈನಿಕ ತರುಣನು ಇಂಥ ಈ ಸುಯೋಗವನ್ನು ಕಳೆದುಕೊಳ್ಳುವನೇ? ಅಹುದು; ಅವನು ಖಂಡಿತವಾಗಿಯೂ ಯಾವುದೊಂದು ಬೇರೆ ಹೆಸರಿನಿಂದ ದಂಡಿನಲ್ಲಿ ಸೇರಿರುವನು. ಅವನು ಶಸ್ತ್ರಚಾಲನೆಯಲ್ಲಿ ನಿಪುಣನು. ಅವನಿಗೆ ದಂಡಿನ ಶಿಕ್ಷಣ ಕೊಡುವ ಆವಶ್ಯಕತೆಯಿಲ್ಲ. ಆತನು ಯಾವ ದಿವಸ ದಂಡಿನಲ್ಲಿ ಸೇರಿರುವನೋ, ಅಂದೇ ಅವನನ್ನು ರಣಭೂಮಿಗೆ ಕಳಿಸಿರಬಹುದು. ನಾನು ನನ್ನೀ ಅನುಮಾನವನ್ನೇ ನಂಬಿ ಇನ್ನು ಆತನ ಪತ್ತೆಗೆ ಹತ್ತುವೆನು. ನಾನು ಇಂದೇ ಡಾಫನಿಯನ್ನು ಕಂಡು ಅವಳಿಂದ ಕಿಲ್ಡೇಯಾರನು ಅವಳಿಗೆ ಕಳಿಸಿದ್ದ ಕಾಗದಗಳನ್ನು ಇಸಕೊಂಡು ಬರುತ್ತೇನೆ. ಅವರೀರ್ವರ ವಿವಾಹ ಸಂಬಂಧವು ನಿಶ್ಚಿತವಾದಾಗ ಆತನು ಭಾರನನ್ನಳಿಗೆ ನಿಜವಾಗಿಯೂ ಹಲವು ಕಾಗದಗಳನ್ನು ಕಳಿಸಿರಬೇಕು; ಡಾಫನಿಯೂ ಬಹುಶಃ ಅವನ್ನೆಲ್ಲ ಕಾದಿಟ್ಟಿರಬೇಕು."

ಬ್ಲೇಕನು ಮತ್ತೆರಡು ದಿನಗಳ ವರೆಗೆ ಕಿಲ್ಡೇಯಾರನ ಪತ್ತೆಯಲ್ಲಿ ತೊಡಗಿ ಮೂರನೇ ದಿನ ಸಾಯಂಕಾಲಕ್ಕೆ ಮನೆಗೆ ಹಿಂದಿರುಗಿದನು. ಆಗಿನ ಬ್ಲೇಕನ ಉಲ್ಲಸವನ್ನು ಕಂಡು ಸ್ಮಿತ್ಥನು:—'ಒಡೆಯಾ, ತಮ್ಮ ಮೋರೆಯ ಲಕ್ಷಣದಿಂದ ತಾವೇನಾದರೂ ಸುಸಂವಾದ ಹೊಂದಿರುತ್ತೀರೆಂದು ತಿಳಿಯುತ್ತದೆ.'

ಬ್ಲೇಕನು ಆರಾಮ ಖುರ್ಚಿಯ ಮೇಲೆ ಬಿದ್ದುಕೊಂಡು ಚಿರೂಟ ಸೇದುತ್ತ:—"ಅಹುದು; ನಿಜವಾಗಿಯೂ ಸುಸಂವಾದವನ್ನು ದೊರೆಕಿಸಿರುವೆನು. ನಾನು ಕಿಲ್ಡೇಯಾರನ ಪತ್ತೆ ಹಚ್ಚಿರುವೆನು. ನನ್ನ ಅನುಮಾನವು ಸುಳ್ಳಾಗಲಿಲ್ಲ. ನಾನು ಇಂದು ಅಪರಾಹ್ಣ ಕಾಲದಲ್ಲಿ ದಂಡಿನ ರಿಕ್ರೂಟನ ಬರಾಕಿಗೆ ಹೋಗಿದ್ದೆನು. ಕಳೆದ ಕೆಲ ವಾರಗಳಲ್ಲಿ ಯಾವ ಎಲ್ಲ ಸೈನಿಕರು ಅಲ್ಲಿ ಭರ್ತಿಯಾಗಿರುವರೋ, ಅವರ ಆ ಭರ್ತಿಯ ರೆಜಿಸ್ಟರು ತೆಗೆಸಿ ಪರೀಕ್ಷಿಸಿದೆನು. ಒಂದು ಕರಾರ ಪತ್ರವು ಕಿಲ್ಡೇಯಾರನ ಕೈಬರೆಹದಿಂದ ಬರೆದಿರುವಂತೆ ನನಗೆ ತೋರಿತು; ಆದರೆ ಅದರ ಕೆಳಗೆ 'ರಿಚರ್ಡ ಕನಪ್' ಎಂದು ಸಹಿಯಿದ್ದಿತು. ಬಳಿಕ ನಾನು ಭಾರನನ್ನಳಿಂದ ಯಾವ ಕಾಗದ ಇಸಕೊಂಡು ಬಂದಿದ್ದೆನೋ ಅದರೊಳಗಿನ ಅಕ್ಷರಗಳಿಗೂ ಆ ಅಕ್ಷರಗಳಿಗೂ ಒರೆಹಚ್ಚಿ ನೋಡಿದೆನು. ಆ ಲೇಖಕನೇ ಕಿಲ್ಡೇಯಾರನಾಗಿದ್ದನು. ಆತನು ರಿಚರ್ಡ ಕನಪ್‌ನೆಂಬ ಛದ್ಮನಾಮದಿಂದಲೇ ಸೈನ್ಯದಲ್ಲಿ ಪ್ರವೇಶ ಪಡೆದಿರುವನು. ಆತನು ಯಾವ ರೆಜಿಮೆಂಟಿನಲ್ಲಿ ಸೇರಿರುವನೋ, ಅದು 'ನಂ. ೧, ಮಿಡಲ್

ಸೆಕ್ಸ' ಎಂದಿವೆ. ಒಂದು ತಿಂಗಳ ಹಿಂದೆಯೇ ಆ ರೆಜಿಮೆಂಟು ಫ್ರಾನ್ಸ ದೇಶಕ್ಕೆ ಕಳಿಸಲಾಗಿದೆ."

ಸ್ಮಿತ್ಥ:—"ಇದು ಸುಸಂವಾದವೇ ಸರಿ. ಇಷ್ಟರಲ್ಲಿ ಆ ಒಡವನು ಜರ್ಮ್ಮನ್ನರ ಬಾಂಬಿಗೆ ತುತ್ತಾಗದಿದ್ದರೆ ಅದೇ ಕಲ್ಯಾಣಕರವು."

ಬ್ಲೇಕ:—"ಇಲ್ಲ; ಆತನು ಖಂಡಿತವಾಗಿಯೂ ಜೀವದಿಂದಿರುವನು. ಆ ಮಿಡಲ್ ಸಕ್ಸ ರೆಜಿಮೆಂಟನ್ನಿನ್ನೂ ಅಂಥ ಭಯಂಕರ ಯುದ್ಧ ರಣಭೂಮಿಗೆ ಕಳಿಸಿಲ್ಲ. ಆದ್ದರಿಂದ ಆತನಿನ್ನೂ ಸತ್ತಿಲ್ಲ. ತಾನು ಸಾಯಬೇಕೆಂದೇ ಆತನು ದಂಡಿಗೆ ಸೇರಿರುವನು. ಇದೊಂದೇ ಯೋಚನೆಯ ವಿಷಯ."

ಸ್ಮಿತ್ಥ:—"ಈಗೇನು ಮಾಡಬೇಕೆಂದಿರುವಿ? ನೀವು ಆತನಿಗೆ ಆತನ ಸೋದರತ್ತೆಯ ಧನ-ಸಂಪತ್ತುಗಳ ಲಾಭದ ವಿಷಯ ತಿಳಿಸಿದರೆ ಅವನು ತನ್ನ ಜೀವಕ್ಕಿಷ್ಟು ಉದಾರನಾಗಲಿಕ್ಕಿಲ್ಲ."

ಬ್ಲೇಕ:-"ಸ್ಮಿತ್ಥ, ಹಾಗಲ್ಲ; ನಾವಿಬ್ಬರೂ ಫ್ರಾನ್ಸದ ರಣಭೂಮಿಗೆ ಹೋಗಿ ಆತನನ್ನು ಕಾಣೋಣ. ಡಾಫನಿಯಿಂದಲೂ ಒಂದು ಕಾಗದ ಬರೆಯಿಸಿ ತರುತ್ತೇನೆ. ಅದನ್ನು ಕಂಡ ಮೇಲೆ ಆತನ ಮನೋವೇದನೆಯು ಬಹು ಮಟ್ಟಿಗೆ ಕಡಿಮೆಯಾಗುವದು. ನಾನು ಪ್ರಕಟಿಸಿದ ವೃತ್ತಪತ್ರದೊಳಗಿನ ಪ್ರಕಟನೆಯು ನಿಜವಾಗಿಯೂ ಆತನ ದೃಷ್ಟಿಗೆ ಬಿದ್ದಿಲ್ಲ. ಡಾಫನಿಯು ತನಗಾಗಿ ಎಷ್ಟು ವ್ಯಾಕುಲಳಾಗಿರುವಳೆಂಬದನ್ನು ಆತನರಿಯನು. ಇವೆರಡೂ ಶುಭವಾರ್ತೆಗಳು ಆತನಿಗೆ ಏಕಕಾಲದಲ್ಲಿಯೇ ಮೊರೆತರೆ, ಅವನು ಬದುಕಿರಲು ಇಚ್ಛಿಸುವನು. ನಾನು ಇಂದೇ ಲಾರ್ಡ ಮೆಸಿಂಡೇಲ ಹಾಗು ಡಾಫನಿಯರನ್ನು ಕಂಡು ಅವರಿಗೆ ಇದನ್ನೆಲ್ಲ ತಿಳಿಸುವೆನು. ಆ ಬಳಿಕ ನೇವ್ಹಿ ಆಫೀಸಿಗೆ ಹೋಗಿ ಕೆಲ ಸಂಗತಿ ತಿಳಕೊಂಡು ನಾಳೆಯೇ ನಾವಿಬ್ಬರೂ ಫ್ರಾನ್ಸಕ್ಕೆ ಹೊರಡೋಣ."

---

## ಎಲೋ, ವೈರಿಗಳು ಸೋತರು; ಮುನ್ನುಗ್ಗಿರಿ!

ರಿಚರ್ಡ ಕನಪ್‌ನು ಪ್ರಾಯವ್ಹೇಟ,-ಸಾಧಾರಣ ಕಾಲಾಳುಗಳ-ಪಥಕದಲ್ಲಿ ಸೇರಿದ್ದನು. ಅವನು ಅಂದು ಒಂದು ಸಾಮಾನ್ಯ ಕಂಬಳಿಯಿಂದ ಮೈಯನ್ನೆಲ್ಲ ಮುಚ್ಚಿಕೊಂಡು ತನ್ನ ರೈಫಲ್ಲನ್ನು ಹತ್ತರಿಟ್ಟುಕೊಂಡು ಟ್ರೆಂಚಿ=ನೆಲದಲ್ಲಿ ಅಗಿದ ತೆಗ್ಗಿ=ನಲ್ಲಿ ಮಲಗಿಕೊಂಡಿದ್ದನು. ಆಗ ಅವನಿಗೊಂದು ಇನಿಗನಸು ಬಿದ್ದಂತೆ ತೋರುತ್ತಿತ್ತು; ಯಾಕಂದರೆ ನಿದ್ರಾವಸ್ಥೆಯೊಳಗಿನ ಆತನ ಮುಖವು ಅತ್ಯಂತ ಪ್ರಫುಲ್ಲವೂ ಹಾಸ್ಯಮಯವೂ ಆಗಿತ್ತು. ಎಲ್ಲಿಯ ಕೆಂಪು ಸೈನ್ಯ

ದೊಳಗಿನ ಅತ್ಯಂತ ಮನ್ನಣೆಯ ಲೆಫ್ಟಿನೆಂಟ ಹಾಗು ಎಲ್ಲಿಯು ಹೆಸರು-ದೆಸೆಗಳಿಲ್ಲದ ಸಾಮಾನ್ಯ ಕಾಲಾಳು! ದೈವವು ವಿಫಲವಾದರೆ ಮನುಷ್ಯನು ಎಲ್ಲವನ್ನೂ ಸಹಿಸಬೇಕಾಗುವದು.

ಆವರ ಅಲ್ಪಾವಧಿಯಲ್ಲೇ ಯಾವದೊಂದು ದುಃಸ್ವಪ್ನವನ್ನು ಕಂಡ ರಿಚರ್ಡ ಕನರ್ಸ್‌ನು ನಿದ್ದೆಯಲ್ಲೇ ಚೀರಿಕೊಂಡನು. ಆ ಕೂಡಲೆ ನಿದ್ರಾಭಂಗವಾಗಲು ಅವನು ಚಟಕ್ಕನೆ ಎದ್ದು ಕುಳಿತನು. ಆತನ ಕನಸು ಮರೆಯಾಯಿತು. ತನ್ನ ಸದ್ಯದ ದುರವಸ್ಥೆಯು ನೆನಪಾಗಲು ಆತನು ಹತಾಶಭಾವದಿಂದೊಮ್ಮೆ ನಾಲ್ಕೂ ಕಡೆಗೆ ಹೊರಳಿ ನೋಡಿದನು. ಆಗ ರಾತ್ರಿಯು ಹರಿದು, ತೀರ ಬೆಳಗಾಗ ಬಂದಿತ್ತು. ಮೂಡಣ ದಿಕ್ಕಿನಲ್ಲಿ ಕೆಂಪು ಹರಿಯಹತ್ತಿತ್ತು. ನಿಶೆಯು ತನ್ನ ಕರೀ ಪಿಂಛಿಕೆಯನ್ನು ಮೆಲ್ಲ ಮೆಲ್ಲನೆ ಬಚ್ಚಿಡಹತ್ತಿದ್ದಳು.

ಖಾಕೀ ಡ್ರೆಸ್ಸಿನ ದಂಡಾಳುಗಳು ಗಾಢ ನಿದ್ರೆಯಿಂದ ಶ್ರಮ ಪರಿಹರಿಸಿಕೊಂಡು ಎದ್ದು ಕುಳಿತರು. ಕಳೆದ ಹನ್ನೆರಡು ದಿನಗಳಿಂದಲೂ ಅವರು ಆ ಟ್ರೆಂಚುಗಳಲ್ಲಿಯೇ ಆಶ್ರಯ ಪಡೆದಿದ್ದರು. ಅಲ್ಲಿ ಹಲವು ಅನಾನುಕೂಲತೆಗಳನ್ನು ಸಹಿಸಬೇಕಾಗುತ್ತಿದ್ದರೂ ಅವರೆಲ್ಲರೂ ಕೊಂಚವೂ ಅಸಂತೋಷವನ್ನು ವ್ಯಕ್ತಪಡಿಸುತ್ತಿರಲಿಲ್ಲ. ಯುದ್ಧಕ್ಕಾಗಿ ಅವರು ಸಂಪೂರ್ಣ ಸಿದ್ಧರಾಗಿದ್ದರು. ತಾವುಗಳು ಬೇಗನೆ ಯುದ್ಧಕ್ಕೆ ಅಣಿಯಾಗಬೇಕೆಂಬುದು ಅವರಿಗೆ ತಿಳಿದಿತ್ತು. ಹಲಕೆಲವರು ಪ್ರಾಯವ್ಹೇಟ ಕನರ್ಸನ ಬಳಿಗೆ ಬಂದು ಸಂಭಾಷಣೆಗೆ ಪ್ರಾರಂಭಿಸಿದರು; ಆದರೆ ಅವರ ಮಾತು ಆತನ ಕಿವಿಗೆ ಕೇಳಿಸಲಿಲ್ಲ. ಆತನು ಹಿಂಬದಿಯ ಗೋಡೆಗೆ ಆತು ಕುಳಿತುಕೊಂಡು, ತನ್ನ ಭಾಗ್ಯ ಪರಿವರ್ತನವನ್ನು ಕುರಿತು ಚಿಂತಿಸುತ್ತಿದ್ದನು.

ಆಗ ಅವನು ತನ್ನ ಮನದಲ್ಲೇ:—"ಡಾಫನಿಯು ನನ್ನನ್ನು ಈಗಲೂ ಪ್ರೀತಿಸುವಳೋ? ನಾನು ಅಧಃಪತನ ಹೊಂದಿರುವೆನು; ಹೆಸರು-ದೆಸೆ, ಮಾನ-ಮನ್ನಣೆ, ನೌಕರಿ-ಅಧಿಕಾರ ಇವುಗಳನ್ನೆಲ್ಲ ಕಳೆಕೊಂಡಿರುವೆನು; ಆದರೂ ಅವಳು ನನ್ನನ್ನು ಪ್ರೀತಿಸುವಳಲ್ಲವೇ? ನಾನವಳ ಅಲಂಕಾರಗಳನ್ನು ಕದ್ದಿರುವೆನು. ನನ್ನಾ ಅಪರಾಧವನ್ನು ಅವಳು ಮನ್ನಿಸಿರುವಳೇ? ಅಂದು ರಾತ್ರಿ ಅವಳು ಹೋರಾಯಿಟ ಚಾಂಪೇಲದ ಬಳಿಯಲ್ಲಿ ಕಾಲುನಡಿಗೆಯಿಂದ ಸಂಚರಿಸುತ್ತ ಖಂಡಿತವಾಗಿಯೂ ನನ್ನನ್ನೇ ಹುಡುಕ ಬಂದಿದ್ದಳು. ಬೇರೆ ಯಾವ ಉದ್ದೇಶಕ್ಕೆಂದು ಅವಳು ಅಲ್ಲಿಗೆ ಬರುವಳು? ಅಹಾ! ಅವಳು ಕೇವಲ ಸರಳೆಯು; ಪ್ರೇಮ ವಿಹ್ವಲ ಲಲನೆಯು. ನಾನು ಅಧಃಪತಿತ ಲಾಂಛಿತ, ತಿರಸ್ಕೃತ, ಸಮಾಜದೊಳಗಿಂದ ಹೊರದೂಡಲ್ಪಟ್ಟವನು. ಇಂಥ ನಾನು ಅವಳ ಪ್ರೇಮಕ್ಕೆ ಯೋ

ಗ್ಯನೇ? ಆದರೂ ಕೂಡ ಅವಳು ನನ್ನನ್ನು ಪ್ರೀತಿಸುವಳು. ಅಂದು ರಾತ್ರಿ ನಾನು ಅವಳಿಗೆ ನನ್ನ ಗುರ್ತ ಕೊಡಲಿಲ್ಲ; ಅವಳೊಡನೆ ಮಾತಾಡುವ ಪ್ರಸಂಗವನ್ನು ಬೇಕಾಗಿ ಕಳೆದನು. ಹಾಗೆ ಮಾಡಿದ್ದೇ ವಿಹಿತವಾಯಿತು. ಇಲ್ಲದಿದ್ದರೆ ಅವ-ಮನಸ್ಸಿನ ವೇದನೆಯನ್ನು ಹೆಚ್ಚಿಸಿದಂತಾಗುತ್ತಿತ್ತೇ ವಿನಃ ಮತ್ತೇನು ಲಾಭವಾಗುತ್ತಿತ್ತು? ನಮ್ಮಿರ್ವರಲ್ಲಿ ಈಗ ಊಹಿಸಲಾರದಷ್ಟು ಅಂತರವುಂಟಾಗಿದೆ ಆ ಅಂತರವು ಕಡಿಮೆಯಾಗುವ ಸಂಭವವೇನೂ ಇಲ್ಲ. ಅವಳೊಡನೆ ಪುನರ್ಮಿ-ಲನವಾಗುವ ಯಾವ ಆಶೆಯೂ ಇಲ್ಲ. ಇಷ್ಟೇ ಅಲ್ಲ; ಈ ಜೀವನದಲ್ಲಿ ಆಕೆಯನ್ನೆಂದೂ ಪಡೆಯಲಾರೆನೆಂಬುದು ಖಂಡಿತವು. ನನ್ನ ಎಲ್ಲ ಸುಖಗಳ ದೀಪವು ಆರಿ ಹೋಗಿದೆ. ಕತ್ತಲೆ, ನಾಲ್ಕೂ ಕಡೆಗೆ ಕಾರ್ಗತ್ತಲೆ!! ಆಗಿನ ಅನುಭವದ ನೆನಪು ವಿಸ್ಮೃತಿಯ ಅಂಧಕಾರದಲ್ಲಿ ಮುಳುಗಿ ಹೋದರೆ, ಅದರಿಂದಲಾದರೂ ಒಂದಿಷ್ಟು ಶಾಂತಿ ಹೊಂದೇನು, ಆದರೆ ಅದೂ ದುರ್ಲಭವು! ಹಾಗಾದರೆ ಮತ್ತಾವ ಆಶೆಗಾಗಿ ಜೀವಿಸಿರಲಿ? ಸಾಯಲಿಕ್ಕೆಂದೇ ರಣಭೂಮಿಗಾಗಿ ಹೊರಟು ಬಂದಿರುತ್ತೇನೆ. ಸ್ವದೇಶ ಹಿತಕ್ಕಾಗಿ ಈ ದೇಹವಿಸರ್ಜನ ಮಾಡಮೊರೆತರೆ, ಅದರಿಂದ ನನ್ನ ಪಾಪಕ್ಕೆ ಕೊಂಚವಾದರೂ ಪ್ರಾಯಶ್ಚಿತ್ತ ಘಟಿಸೀತು. ನಾನು ಇದುವರೆಗೆ ನನ್ನದೆಂಬುದೆಲ್ಲವನ್ನೂ ಕಳೆದುಕೊಂಡಿದ್ದೇನೆ; ಆದರೆ ಸಾಯುವ ಅಧಿಕಾರದಿಂದ ನನ್ನನ್ನಾರು ವಂಚಿಸುವರು? ಜರ್ಮನ್ನ ದಂಡಿನ ಒಂದು ಗುಂಡಿನಿಂದ ನನ್ನ ಎಲ್ಲ ದುಃಖಗಳೂ ಪರಿಹಾರವಾಗುವವು."

ಪ್ರಾಯಶ್ಚಿತ್ತೀಟ ಕನಪ್‌ನ ಕಣ್ಣುಗಳಲ್ಲಿ ನೀರು ತುಂಬಿದವು. ಹೃದಯದಲ್ಲಿ ತಾಗಿದ್ದ ವೇದನೆಗಳು ಆತನ ಅಂತಃಕರಣದೊಳಗಿಂದ ಹೊರಚಿಮ್ಮುತ್ತಿದವೆಂಬಂತೆ ತೋರುತ್ತಿತ್ತು. ಆದರೆ ಆತನು ಹೆಚ್ಚು ಪ್ರಯತ್ನದಿಂದ ತನ್ನ ಮನಸ್ಸಿನ ಭಾವವನ್ನು ಅಡಗಿಸಿ, ತನ್ನ ಜೊತೆಗಾರರ ಮಾತು-ಕಥೆಗಳಲ್ಲಿ ಭಾಗವಹಿಸಿದನು. ಒಂದಿಷ್ಟು ನಗೆ ನಗಲಿಕ್ಕೂ ಪ್ರಯತ್ನಿಸಿದನು, ಆದರೆ ಆತನ ಆ ಮ್ಲಾನಹಾಸ್ಯವೆಂದರೆ ಮೋಡದಿಂದ ಕೂಡಿದ ರಾತ್ರಿಯೊಳಗಿನ ಚಂದ್ರನ ಬೆಳಕೇ! ಬೆಳಗಾಯಿತು; ಆದರೆ ಸೂರ್ಯೋದಯದ ಯಾವ ಲಕ್ಷಣವೂ ಕಂಡು ಬರಲಿಲ್ಲ. ಇಡೀ ಆಗಸವು ಕಪ್ಪುಮೋಡಗಳಿಂದ ತುಂಬಿತ್ತು. ಅಲ್ಪಾವಕಾಶದಲ್ಲೇ ಆ ಎಲ್ಲ ದಂಡಾಳುಗಳ ಬೆಳಗಿನ ಊಟವಾಯಿತು. ಅಂದು ಯುದ್ಧಕ್ಕೆ ಹೊರಡದ ಹೊರ್ತು ಗತ್ಯಂತರವಿಲ್ಲೆಂಬ ಸುದ್ದಿ ಬಂದಿತು. ಅವರೆಲ್ಲರೂ ಅದೇ ಸುದ್ದಿಯನ್ನು ಕುರಿತು ಚರ್ಚಿಸುತ್ತಿದ್ದರು. ಶತ್ರುಗಳನ್ನು ಹಿಂದೂಡಿ ಅವರನ್ನು ಸ್ಥಾನಭ್ರಷ್ಟಗೊಳಿಸಲು ಅವರೆಲ್ಲರೂ ಸಿದ್ಧರಾದರು. ವೈರಿದಳವು ಬಂಡೆಗಲ್ಲಿನಂತೆ ಒತ್ತಟ್ಟಿಗೆ ತನ್ನ ಶಿಬಿರವನ್ನಿಕ್ಕಿಕೊಂಡು ಕುಳಿತಿತ್ತು.

ಅವರನ್ನು ಅಲ್ಲಿಂದ ಹೊಡೆದೋಡಿಸುವದು ಯಾರಿಗೆ ಸಾಧ್ಯ?

ಆದರೆ ಈ ಎಲ್ಲ ಬಗೆಯ ಶಿಕ್ಷಣ ಪಡೆದ ರಣಧುರಂಧರ ಬ್ರಿಟಿಶ ಸೈನ್ಯವು ಅದನ್ನು ಅಸಂಭವವೆಂದು ತಿಳಿಯಲಿಲ್ಲ. ೧ನೇ ನಂಬರಿನ ಮಿತ್ಲ ಸೆಕ್ಸ ರೆಜಿಮೆಂಟಿನ ಮೇಲೆಯೇ ಆ ಅಸಾಧ್ಯ ಸಾಧನದ ಭಾರವು ಬಿದ್ದಿತು. ಅವರು ಜೀವವಿರುವ ವರೆಗೂ ತಮ್ಮ ಸೇನಾಪತಿಯು ಅಪ್ಪಣೆ ಪಾಲಿಸಲಿಕ್ಕೆ ಕೃತ ಸಂಕಲ್ಪರಾದರು. ತಾನು ಇಂದು ಯುದ್ಧಕ್ಕೆ ಹೊರಡುವೆನೆಂದು ಪ್ರಾಯುವ್ಹೆಟ ಕನಪನು ಎಲ್ಲರಿಗಿಂತಲೂ ಉತ್ಸಾಹಗೊಂಡನು. ಸಾಯುವ ಸುಯೋಗವು ತನಗೆ ಇಷ್ಟು ಶೀಘ್ರ ದೊರಕೀತೆಂದು ಆತನು ಈ ಮೊದಲು ಕಲ್ಪಿಸಿರಲಿಲ್ಲ. ಆಗ ಆತನು ತನ್ನ ಮನದಲ್ಲೇ—'ಇಂದು ನನಗಾರೋ ನನ್ನದಿಂದೇ ಕಡೆಯ ದಿನವೆಂದು ಹೇಳುತ್ತಿರುವಂತೆ ಕೇಳಿಸುತ್ತದೆ. ಸೈನಿಕನು ಯಾವಾಗಲೂ ಬಯಸುತ್ತಿರುವ ಮೃತ್ಯುವನ್ನು ನಾನಿಂದು ಹೊಂದುತ್ತೇನೆ. ಇಂದು ನನ್ನ ಎಲ್ಲ ವೇದನೆಗಳ ಕೊನೆಯಾಗುವದು. ದೇಶದ ಗೌರವ ಕಾಯುವ ಸಲುವಾಗಿ ರಣಕ್ಷೇತ್ರದಲ್ಲಿ ಪ್ರಾಣವನ್ನರ್ಪಿಸಿದನೆಂಬ ವಾರ್ತೆಯನ್ನು ಕೇಳಿ ಡಾಫನಿಯು ಒಂದು ವೇಳೆ ನನ್ನಲ್ಲಿ ಕೊಂಚ ಶ್ರದ್ಧೆ ವಹಿಸದವಳೂ ವಹಿಸಬಹುದು, ನನ್ನ ನೆನಪೆಂದರೆ ಅವಳಿಗಷ್ಟು ತುಚ್ಛವೆನಿಸಲಾರದು ಅದೇ ನನಗೆ ಸಮಾಧಾನವು.”

ಬ್ರಿಟಿಶರ ದಂಡು ಯುದ್ಧಕ್ಕೆ ಅಣಿಯಾಗಿದೆಯೆಂಬುದನ್ನು ವೈರಿಗಳ ಕಡೆಯವರು ತಿಳಿದಿರಲಿಲ್ಲ. ಅವರ ಸೇನೆಯು ಯಾವ ಮುಖಂಡನು ಎತ್ತರ ಪ್ರದೇಶದಲ್ಲಿ ಕುಳಿತು ಬ್ರಿಟಿಶರ ದಂಡಿನ ಚಲನವಲನಗಳನ್ನು ನಿರೀಕ್ಷಿಸುತ್ತಿದ್ದನೋ ಆತನಿಗೂ ಅದು ತಿಳಿಯಲಿಲ್ಲ. ಅಷ್ಟು ಗೌಪ್ಯವಾಗಿಯೇ ಬ್ರಿಟಿಶ ದಂಡಿನ ಆಂದಿನ ಯುದ್ಧದ ಸಿದ್ಧತೆಯು ನಡೆದಿತ್ತು. ಕ್ರಮವಾಗಿ ಒಂದು ಪ್ರಹರವು ಕಳೆಯಿತು. ಆಗಲೂ ಕೂಡ ದಟ್ಟವಾದ ಮಂಜಿನಿಂದ ಎಲ್ಲೆಲ್ಲೂ ಅಂಧಕಾರವೇ. ಅಷ್ಟರಲ್ಲಿ ಕಪ್ತಾನನ ಆಜ್ಞೆ ಹೊರಟಿತು. ಮಿತ್ಲ ಸೆಕ್ಸ ರೆಜಿಮೆಂಟಿನ ಹುರುಪಿನ ದಂಡಾಳುಗಳು ಆ ಆಜ್ಞೆಯನ್ನು ಕೇಳಿದ ಕೂಡಲೆ ಒಡ್ಡು ಒಡೆದ ಹಳ್ಳದಂತೆ ಭರದಿಂದ ತಂತಮ್ಮ ಟ್ರೆಂಚುಗಳೊಳಗಿಂದ ಹೊರಬಿದ್ದು ಬಂದರು. ನೂರಾರು ಸೈನಿಕ ತರುಣರು ಉತ್ಸಾಹದಿಂದ ಹರ್ಷಧ್ವನಿಗೈಯುತ್ತ ಬೈಲುಪ್ರದೇಶದೊಳಗಿಂದ ವೈರಿಸೈನ್ಯಕ್ಕಭಿಮುಖವಾಗಿ ಭರದಿಂದ ಸಾಗಹತ್ತಿದರು. ಅವರು ಕೆಲವು ಮಾರ್ಗವನ್ನು ಆತಂಕವಿಲ್ಲದೆ ಕ್ರಮಿಸಿದ ಬಳಿಕ ವೈರಿ ದಂಡಾಳುಗಳಿಂದ ಅಸಂಖ್ಯ ರೈಫಲ್ಲು ಹಾಗು ಭಯಂಕರವಾದ ಮಶಿನ್‌ಗನ್ನುಗಳ ಮೂಲಕ ಜ್ವಾಲಾನಲದಂತೆ ಅಗ್ನಿವರ್ಷಣವಾಗಲಿಕ್ಕಾರಂಭವಾಯಿತು. ಬ್ರಿಟಿಶ ಸೈನ್ಯದ ಮೇಲೆ ನಡುನಡುವೆ ಗುಂಡುಗಳು

ಬೀಳಹತ್ತಿದವು. ತೋಫುಗಳ ಗಂಭೀರವಾದ ಸಪ್ಪಳವು ಆಗಾಗ್ಗೆ ಆಗಿ ಕಿವಿ ಗಳು ಗಡಚಿಕ್ಕಿದವು. ಒಮ್ಮೆಲೆ ನೂರಾರು ಸಿಡಿಲುಗಳ ಸಪ್ಪಳದಿಂದ ಪ್ರಲಯ ಕಾಲದ ಭೂಕಂಪನದಂತೆ ನಾಲ್ಕೂ ದಿಕ್ಕುಗಳು ನಡುಗಿದವು. ಆಕಾಶ-ಪಾತಾ ಳಗಳಲ್ಲಿ ಮತ್ತೆ ಅವೇ ಪ್ರತಿಧ್ವನಿಯಾಗಹತ್ತಿತು. ಆ ಭೀಷಣ ದೃಶ್ಯವು-ಮಹಾಕಾಲನ ಆ ಕರಾಳಸಂಹಾರಮೂರ್ತಿಯು-ಬಣ್ಣಿಸಲಶಕ್ಯವಾಗಿತ್ತು!

ಬರಬರುತ್ತ ಗುಂಡುಗಳ ಸುರಿಮಳೆಯು ಹೆಚ್ಚಿತು. ಎದುರಿನಲ್ಲಿ ಅಗ್ನಿಯ ಮರಣಪ್ರವಾಹವು ಭರದಿಂದ ಹರಿಯುತ್ತಿದೆ. ಹಾಗೆಯೇ ಮುಂದೆ ಹೋದರೆ ಆ ಕರಾಲ ಪ್ರವಾಹದಲ್ಲಿ ಸಿಕ್ಕು ಪ್ರಾಣ ಕಳಕೊಳ್ಳುವದು ಖಂಡಿತವು! ಆದರೂ ಕೂಡ ಆ ನವ ಸಾಹಸಿಗಳಾದ ಬ್ರಿಟಿಶ ವೀರರು ಹಿಂಜರಿಯ ಲಿಲ್ಲ. ಒಂದು ಕ್ಷಣ ಕೂಡ ಅವರು ತಡೆದು ನಿಲ್ಲಲಿಲ್ಲ. ಅವರು ಯಾವ ಬಗೆಯಿಂದ ವೀರವಿಕ್ರಮರಾಗಿ ನಾಲುಗೊಂಡು ಹೋಗುತ್ತಿದ್ದರೋ, ಅದೇ ರೀತಿಯಿಂದ ಮುಂದೆ ನಡೆದರು. ಆ ದಾರುಣವಾದ ಸಂಕಟದಲ್ಲಿ ಪ್ರಾಣದಾಶೆಗೆ ಬಲಿಯಾಗಿ ಯಾವನೂ ಒಂದು ಕ್ಷಣ ಕೂಡ ಹಿಂತಿರುಗಿ ನೋಡಲಿಲ್ಲ. ಗುಂಡುಗಳ ಅತ್ಯಾಕ್ರಾಂತ ಸುರಿಮಳೆಯನ್ನು ನಿರ್ಭೀತ ಅಂತರಂಗದಿಂದಲೂ ಪ್ರಸನ್ನಮುಖಮಂಡಲದಿಂದಲೂ ವರ್ಷಾಕಾಲದ ಮಳೆಯ ನೀರಿನಂತೆ ತಲೆ ಯಲ್ಲಿ ಧರಿಸಿ ಬ್ರಿಟಿಶ ವೀರಪುತ್ರರು ಮುಂದೆ ಸಾಗಿದರು. ಶತ್ರುಗಳ ವ್ಯೂಹ ಭೇದಮಾಡಿ, ಅವರನ್ನು ಛಿನ್ನಭಿನ್ನರಾಗುವಂತೆ ಹೊಡೆದೋಡಿಸುವದೇ ಅವರ ಹೆಗ್ಗುರಿಯು! ಆ ಗುರಿಸಾಧನೆಗಾಗಿಯೇ ಆ ಮೃತ್ಯುಪ್ರವಾಹದಲ್ಲಿ ಅವರು ಮುಂದುವರಿಯುತ್ತಿದ್ದರು. ಜರ್ಮನ್ ಸೈನಿಕರ ತೋಫುಗಳಿಂದ ಹಾರಿ ಸ್ಪಡುತ್ತಿದ್ದ ಅಗ್ನಿಮಯವಾದ ಗುಂಡುಗಳು ಹಲವು ಮಂದಿ ಸಾಹಸೀ ಬ್ರಿಟಿಶ ದಂಡಾಳುಗಳಿಗೆ ಬಡಿದವು. ಅವರುಗಳ ನೆತ್ತರದ ನದಿಯಿಂದ ರಣಭೂಮಿಯು ಕಿಚಿಕಿಚಿಯಾಗಹತ್ತಿತು; ಆದರೆ ಸ್ವದೇಶಪ್ರೇಮಿಗಳಾದ ಬ್ರಿಟಿಶ ವೀರರು ಅದಕ್ಕೆ ಅಂಜಲಿಲ್ಲ. ಅದಾವನೂ ಹೇಡಿಯಂತೆ ವೈರಿಗಳಿಗೆ ಬೆನ್ನು ತೋರಿಸಿ ವೀರರ ಹೆಸರಿಗೆ ಕಲಂಕ ಹಚ್ಚಲಿಲ್ಲ; ಆದರೆ ಆ ರಣಚಂಡಿ ಬ್ರಿಟಿಶ ವೀರರ ನಿರರ್ಥಕ ಹ್ರಾಸವನ್ನು ಕಂಡು ಅವರ ಸೇನಾಪತಿಯ ಹೃದಯವು ನಡುಗಿತು; ನಿರರ್ಥಕ ಬಲಕ್ಷಯಮಾಡಿಕೊಳ್ಳುವದರಿಂದ ಯಾವ ಲಾಭವೂ ಇಲ್ಲೆಂದುತಿಳಿದು,ಆವನು ದಂಡಾಳುಗಳಿಗೆ ತಮ್ಮ ನಿವಾಸದ ಕಡೆಗೆ ಹಿಂದಿರುಗಲು ಅಪ್ಪಣೆ ಮಾಡಿದನು. ಅಲ್ಲಿಂದ ಮರಳುವ ಸಲುವಾಗಿ ಯಾವ ಬಿಗುಲಿನ ಧ್ವನಿಯಾಯಿತೋ ಪ್ರಾಯವ್ಹೇಟ ಕನವ್‌ನು ಅದಕ್ಕೆ ಕಿವಿಗೊಡಲಿಲ್ಲ. ಸತ್ತು ಕೆಟ್ಟು ಉಳಿದಿದ್ದ ದಂಡು ಹಿಂದಿರುಗಿತು; ಆದರೆ ಆತನು ರಣಭೂಮಿಯಲ್ಲಿ ಸತ್ತುಬಿದ್ದಿದ್ದ

ದಂಡಾಳುಗಳ ಮಧ್ಯದಲ್ಲಿ ವೈರಿ ದಂಡಿನ ಕಡೆಗೆ ಭರದಿಂದ ಓಡಿದನು. ರಣಭೂಮಿಯಲ್ಲೇ ದೇಹವಿಸರ್ಜನಗೊಳಿಸಲು ಆತನು ಕೃತಸಂಕಲ್ಪಿಯಾಗಿದ್ದನು. ಅವನು ಹಾಗೆ ಮುಂವರಿಯುತ್ತಿದ್ದುದನ್ನು ಕಂಡು ಅವನ ಜೊತೆಯಲ್ಲಿದ್ದ ಸೈನಿಕರು ಹಿಂದಿರುಗುವ ಸಲುವಾಗಿ ಆತನನ್ನು ಬಲವಂತಪಡಿಸಹತ್ತಿದರು; ಆದರೆ ಆಗ ಆತನು:-"ನಾನು ವೈರಿಗಳಿಗೆ ಅಲ್ಪವಾದರೂ ದಂಡಿಸದೆ ಹಿಂದಿರುಗೆನು." ಎಂದು ಸಿಕ್ಷುಣ್ಣವಾಗಿ ತಿಳಿಸಿದನು.

ಏನಾದರೂ ಕನಪ್‌ನು ಹಿಂದಿರುಗಲೇ ಇಲ್ಲ. ಆಗ ಆತನು ತನ್ನ ಬಗ್ಗೆ, ಡಾಫನಿಯ ಬಗ್ಗೆ, ತನ್ನ ಅವಮಾನ, ಕಲಂಕ, ಅಗೌರವ ಮುಂತಾದುದೆಲ್ಲವನ್ನೂ ಮರೆತಿದ್ದನು. ಆತನ ಜೊತೆಗಾರರು ವಿಸ್ಮಯಭರದಿಂದ ಅವನ ಕಡೆಗೆ ನೋಡುತ್ತ ನಿಂತರು. ಅವರು ಅವನೇನು ಮಾಡುವನೆಂಬದನ್ನು ನೋಡತೊಡಗಿದರು. ವೈರಿಪಕ್ಷದವರು ಆಗಲೂ ತೋಫು ಹಾರಿಸುವವನ್ನು ಬಿಟ್ಟಿರಲಿಲ್ಲ. ಆ ಅಗ್ನಿವೃಷ್ಟಿಯ ಮಧ್ಯದೊಳಗಿಂದ ಆತನು ತನ್ನ ಬಂದೂಕಿನಿಂದ ಗುಂಡುಗಳನ್ನು ಹೊಡೆ ಹೊಡೆಯುತ್ತಲೇ ಮುಂದಾದನು! ಇವನ ಗುಂಡುಗಳು ಶತ್ರುಪಕ್ಷದ ಟ್ರಂಚಿನೊಳಗೆ ಹೋಗಿ ಬೀಳಹತ್ತಿದವು. ವೈರಿಯ ಕಡೆಯ ಗುಂಡುಗಳು ಬರಹತ್ತಿದ ಕೂಡಲೆ ಕನಪ್‌ನು ನೆಲಕ್ಕೆ ಮಲಗುವನು; ಆ ಮೇಲೆ ಮತ್ತೆ ಎದ್ದು ತಾನು ಗುಂಡು ಹೊಡೆಯುವನು; ಮತ್ತು ಹಾಗೆಯೇ ಮುಂದರಿಯುವನು. ಅವನು ಆ ರೀತಿ ಮಹಾ ಮಹಿಮ ರಣದೇವತೆಯಂತೆ ಬಹು ಪರಾಕ್ರಮದಿಂದ ಯುದ್ಧವೆಸಗಹತ್ತಿದನು. ಕಟ್ಟಕಡೆಗೆ ಆತನು ಒಮ್ಮೆಲೆ ಗಟ್ಟಿಯಾಗಿ ಚೀರಿ:—"ಅತ್ತ ನೋಡಿರಿ, ವೈರಿಗಳು ಹಿಂಜರಿಯ ಹತ್ತಿದ್ದಾರೆ. ಎಲೈ ಮಿತ್ರರೆ, ಈ ಸುಯೋಗದಲ್ಲಿ ನಾವೆಲ್ಲರೂ ಕೂಡಿ ಅವರನ್ನು ಆಕ್ರಮಿಸೋಣ ಬನ್ನಿರಿ." ಎಂದನು

ತೋಫುಗಳ ಹೊಗೆಯಿಂದಾದ ಕತ್ತಲಲ್ಲಿ ಏನೂ ಕಾಣಿಸುತ್ತಿರಲಿಲ್ಲ. ತಮ್ಮಗಳ ಗುಂಡಿನ ವರ್ಷಣಕ್ಕಂಜಿ ಬಹು ಸಂಖ್ಯಾಕ ಬ್ರಿಟಿಶ ಸೈನ್ಯವು ತಮಗಳಿಂದ ಹಿಂದೆ ಸರಿಯಿತೆಂದು ಮನಸ್ಸಿನಲ್ಲಿ ಯೋಚಿಸಿ, ಜರ್ಮನ್ನರು ತಮ್ಮಗಳ ಮಶಿನ್‌ಗನ್ನುಗಳನ್ನು ತಡೆದು ಹಿಂದಿರುಗಿದರು. ಅವರು ಓಡಹತ್ತಿದರೆಂದು ಮಿಡ್ಲಸೆಕ್ಸಿನ ರೆಜಿಮೆಂಟು ಉನ್ಮಾದದಿಂದ ರಣಗೀತವನ್ನು ಹಾಡುತ್ತ ಪ್ರಾಯವ್ಹೇಟ ಕನಪ್‌ನನ್ನನುಸರಿಸಿತು; ಆದರೆ ಅಷ್ಟರೊಳಗೆ ಆ ರಿಚರ್ಡ ಕನಪ್‌ನೊಬ್ಬನೇ ಐದು ಮಂದಿ ಜರ್ಮನ್ನ ಸೈನಿಕರನ್ನು ಆಕ್ರಮಿಸಿ ಅವರು ಓಡಿಹೋಗುತ್ತಿರುವ ದಾರಿಯನ್ನು ಕಟ್ಟು ಮಾಡಿದ್ದನು! ಅಷ್ಟರಲ್ಲಿ ವೈರಿಗಳಿಂದ ಹೊಡೆಯಲ್ಪಟ್ಟ ಒಂದು ಗುಂಡು ಬಂದು ಅವನ ಹೆಗಲಲ್ಲಿ ನೆಟ್ಟಿತು!

ಆತನ ಅಪೂರ್ವ ಸಾಹಸ ವೀರತ್ವಗಳಿಂದ ಅಂದು ಬ್ರಿಟಿಶರು ಗೆದ್ದರು. ವೈರಿ ದಳದ ದಂಡಗಳೆಲ್ಲವೂ ಇವರಿಂದ ಆಶ್ರಯಿಸಲ್ಪಟ್ಟವು. ಎಷ್ಟೋ ಜನ ವೈರಿದಂಡಾಳುಗಳು ಸೆರೆಸಿಕ್ಕರು; ಆದರೆ ಪ್ರಾಯವ್ಹೇಟ ರಿಚರ್ಡ ಕನಪ್ಪನ ನೆತ್ತರವು ಹೆಚ್ಚು ಹರಿದುದರಿಂದ, ಆತನು ಎದ್ದು ನಿಲ್ಲಲಿಕ್ಕೆ ಶಕ್ತನಾಗಲಿಲ್ಲ. ಅವನು ಶಕ್ತಿಗುಂದಿದವನಾಗಿ, ತನ್ನ ಸೇನಾಪತಿಯ ಮುಂಭಾಗದಲ್ಲಿ ಮೂರ್ಛೆಗೊಂಡು ಬಿದ್ದನು!

---

## ಕಾಲಸರ್ಪನ ಕೊನೆಯ ಹೊಂಚು

ರಣಭೂಮಿಯ ಆಸ್ಪತ್ರೆಯ ಡಾಕ್ಟರನು ಆಸ್ಪತ್ರೆಯ ಬಾಗಿಲಲ್ಲಿ ನಿಂತುಕೊಂಡು ಬ್ಲೇಕನನ್ನು ಕುರಿತು:—"ಆತನು ಹೋದನು" ಎಂದು ಹೇಳಿದನು.

ಬ್ಲೇಕನು ಭಯದಿಂದ:—"ಸರ್ವನಾಶವಾಯಿತಲ್ಲ! ನೀವು ಏನು ಹೇಳುತ್ತಿರುವಿರಿ? ಅವನು ಸತ್ತನೆ? ನಮ್ಮಗಳ ಪ್ರಿಪ್ರಯತ್ನ, ಯತ್ನ, ಪರಿಶ್ರಮಗಳೆಲ್ಲ ವ್ಯರ್ಥವಾದವೇ?"

ಡಾಕ್ಟರ: —"ಅಲ್ಲಲ್ಲ; ಅವನು ಸಾಯುವನೇಕೆ? ಪ್ರಾಯವ್ಹೇಟ್ ಕನಪ್‌ನ ಜೀವಕ್ಕೇನೂ ಅಪಾಯವಿಲ್ಲ. ಅವನ ಹೆಗಲಲ್ಲೊಂದು ಗುಂಡು ಹೊಕ್ಕಿತ್ತು. ನಿನ್ನೆ ಅದನ್ನು ಹೊರಗೆ ತೆಗೆಯಲಾಯಿತು. ಇಂದು ಬೆಳಗಿನ ವರೆಗೂ ಆತನನ್ನು ಆಸ್ಪತ್ರೆಯಲ್ಲಿಯೇ ಇರಿಸಿದ್ದೆವು. ಆ ಮೇಲೆ ಶುಶ್ರೂಷೆಗೆಂದು ಅವನನ್ನು ರೋಯಿಯಾಯಿಗೆ ಕಳಿಸಲಾಗಿದೆ."

ಹೀಗೆಂದು ಹೇಳಿ ಡಾಕ್ಟರನು ಕ್ಷಣಕಾಲ ಸುಮ್ಮನಿದ್ದು, ಮತ್ತೆ:—"ಬ್ಲೇಕರೇ, ನೀವು ಇನ್ನೊಂದು ಸಂಗತಿ ತಿಳಿದಿಲ್ಲವೆ? ಆ ನೀಚನು ಕಡೆಗೆ ಕಾಲಸರ್ಪನಂತೆಯೇ ಮಾಡಿದನಲ್ಲ!"

ಬ್ಲೇಕ:—"ನೀವು ಏನು ಅನ್ನುವಿರೋ ತಿಳಿಯದಾಗಿದೆ. ಕನಪ್‌ನು ಕಾಲಸರ್ಪನಂತೆ ವರ್ತಿಸಿದನೆ? ಇದು ಪರಮ ವಿಸ್ಮಯದ ಸಂಗತಿಯೇ ಸರಿ."

ಡಾಕ್ಟರ:—ಅಲ್ಲಲ್ಲ; ಕನಪ್‌ನು ಹಾಗೆ ವರ್ತಿಸಿಲ್ಲ. ಒಂದಾನೊಂದು ಕಾಲದಲ್ಲಿ ಆತನ ಪರಮ ಹಿತಕರ್ತೃವೂ ಆಪದ್ಬಂಧುವೂ ಆಗಿದ್ದ ಆ ನೀಚ ಕಳ್ಳ ನೇಭಿಲ ಹರಕೋರ್ಟನು, ಯಾವನನ್ನು ನೀವು ಕಳವಿನ ಮಾಲು ಸಹಿತ ಹಿಡಿದು ಕೊಟ್ಟು ದೀರ್ಘಕಾಲದ ಸಶ್ರಮ ಶಿಕ್ಷೆ ಮಾಡಿಸಿರಲಿಲ್ಲವೇ ಅವನು ಇತ್ತೀಚೆಗೆ ಆತನು ಕ್ಷಮೆಯಾಚಿಸಿ ತಾನು ರಿಕ್ರೂಟಿಗೆ ಭರ್ತಿಯಾಗುವೆನೆಂದು ಸರಕಾರಕ್ಕೆ ಬಿನ್ನವಿಸಿದನು. ಈಗ ಬ್ರಿಟಿಶರಿಗೆ ಹೇಗೂ ಸಿಕ್ಕಷ್ಟು ದಂಡಾಳುಗಳು ಬೇಕೇ ಬೇಕಾಗಿರುತ್ತವೆ. ಅದರಿಂದ ಅವರು ನೇಭಿಲ್ಲನ ಶಿಕ್ಷೆಯನ್ನು ಕಡಿಮೆ ಮಾಡಿಸಿ ಆತನನ್ನು ಇಲ್ಲಿಗೆ ಕಳಿಸಿದರು. ಸೈನ್ಯಾಧಿಕಾರಿಯು ಅವನು ಸೈನ್ಯದಲ್ಲಿ ಸೇರ

ಲಿಕ್ಕೆ ದೇಹಮಾನದಿಂದ ತಕ್ಕವನಿಲ್ಲೆಂದು ನಿರ್ಧರಿಸಲು, ಅವನನ್ನು ಗಾಯ
ಗೊಂಡವರ ಶುಶ್ರೂಷೆಗೆಂದು ಶುಶ್ರೂಷಾಲಯಕ್ಕೆ ಕಳಿಸಿದರು. ಆ ರೀತಿಯಾಗಿ
ಕೆಲ ದಿನಗಳಿಂದ ಆತನು ನಮ್ಮ ಆಸ್ಪತ್ರೆಯಲ್ಲಿ ಒಬ್ಬ ನರ ಕರ್ಮಚಾರಿಯಾಗಿ
ದ್ದನು. ಮೊನ್ನೆಯ ದಿನ-ಪ್ರಾಯವ್ಹೇಟ ರಿಚರ್ಡ ಕನಪ್ಪನು ರಣಭೂಮಿಯಲ್ಲಿ
ಶೌರ್ಯ ತೋರಿ ಪ್ರಖ್ಯಾತನಾದುದನ್ನು ಕೇಳಿ ನೇಭಿಲನು ಅವನ ಬಗ್ಗೆ ಒಳ
ಗೊಳಗೇ ಅಸೂಯೆಪಡತುತ್ತಿದನು; ಆದರೆ ಅದು ಯಾರ ಲಕ್ಷ್ಯವಲ್ಲೂ ಬರ
ಲಿಲ್ಲ. ನಿನ್ನೆಯ ದಿವಸ ಕನಪ್ಪನು ಇಲ್ಲಿಗೆ ಶುಶ್ರೂಷೆಗೆಂದು ಬರಲು, ಇಲ್ಲಿ ಆತನ
ಪೆಗಲೊಳಗಿನ ಗುಂಡು ತೆಗೆದೊಗೆದು ಅವನನ್ನು ಇಲ್ಲಿಯೇ ಇಟ್ಟುಕೊಂಡಿ
ದ್ದೆವು; ಆದರೆ ಈ ನೇಭಿಲ ಹರಕೋರ್ಟನು ತನ್ನ ಹುಟ್ಟು ಸ್ವಭಾವದಂತೆ ಆ
ರಿಚರ್ಡಕನಪ್ಪನು ತನ್ನ ವೇದನೆಗಳಿಂದ ಸ್ಮೃತಿವಿಲ್ಲಿ ಬಿದ್ದಿರುವಾಗ ಅವನು
ಕೇಳಿದಾಗೆಲ್ಲ ಬರ್ಫದ ನೀರು ಮಾತ್ರ ಕೊಡಬೇಕೆಂದು ನಾನು ಶುಶ್ರೂ
ಷಾಲಯದೊಳಗಿನ ಎಲ್ಲರಿಗೂ ತಿಳಿಸಿರಲಕ್ಕೆ ಈ ಕಾಲಸರ್ಪನು ತನ್ನ ಮೊದ
ಲಿನ ಕುನಸನ್ನು ತೀರಿಸಿಕೊಳ್ಳುವದಕ್ಕೆಂದು ನೀರಿನ ಬದಲು ಈ ಆಸ್ಪತ್ರೆಯೊಳ
ಗಿನ ಒಂದು ತೀಕ್ಷ್ಣವಿಷದ ದ್ರಾವಕವನ್ನು ಆತನಿಗೆ ಕೊಟ್ಟನು. ತಾನು ಅದನ್ನು
ಕೊಡುವಾಗ ಹತ್ತರ ಯಾರೂ ಇಲ್ಲವೆಂದೇ ಆತನ ಗ್ರಹಿಕೆಯಿತ್ತು; ಆದರೆ ಕರ್ಮ
ಧರ್ಮ ಸಂಯೋಗದಿಂದ ನಾನು ನನ್ನ ಕೋಣೆಯೊಳಗಿನ ಒಂದು ರಂಧ್ರದ
ಮೂಲಕ ದಿನಾಲು ನೋಡುತ್ತಿರುವಂತೆ ಆಗಲೂ ಆ ವಾರ್ಡಿನೊಳಗೆ ಇಣಿಕಿ
ನೋಡಿದೆನು. ಹರಕೋರ್ಟನು ಬರ್ಫದ ನೀರನ್ನು ಚೆಲ್ಲಿ ಆ ವಿಷದ್ರಾವಕವನ್ನು
ಗ್ಲಾಸಿಗೆ ಸುರುವಲಿಕ್ಕೂ ನಾನು ಅತ್ತ ಇಣಿಕಿ ನೋಡಲಿಕ್ಕೂ ಗಂಟೇಬಿತ್ತು. ಕೂ
ಡಲೆ ನಾನು ನನ್ನ ಡ್ರೆಸ್ಸುಕೂಡ ಪೂರಾ ಹಾಕದೆ ಇಲ್ಲಿಗೆ ಬರಲಿಕ್ಕೂ ನೇಭಿಲನು ಆ
ಗ್ಲಾಸನ್ನು ಕನಪ್ಪನ ತುಟಿಗೆ ಹಿಡಿಯಲಿಕ್ಕೂ ಗಂಟೇ ಬಿತ್ತು. ಆ ಕೂಡಲೆ ನಾನು
ಅವನ್ನು ಕಸಿದುಕೊಂಡೆನಲ್ಲದೆ, ಆಗಲೆ ಸೈನ್ಯಾಧಿಕಾರಿಯನ್ನು ಕರೆಯಿಸಿ, ಆ
ಕಾಲಸರ್ಪ ನೇಭಿಲ್ಲನ ದುಷ್ಕೃತ್ಯದ ರುಜುವಾತ ಮಾಡಿದೆನು. ಅದನ್ನು ಕಂಡು
ಸೈನ್ಯಾಧಿಕಾರಿಯು ಅತ್ಯಂತ ರೋಷಗೊಂಡನು. ಯಾವನ ಶೌರ್ಯ ಸಾಹಸ
ಗಳಿಂದ ತಮ್ಮ ಬ್ರಿಟಿಶದಂಡಿಗೆ ಅಂದು ಜಯದೊರೆತಿತ್ತೋ ಅಂತಹನಿಗೆ ವಿಷ
ವುಣಿಸಿ ಕೊಲ್ಲುವ ಆ ಹರಕೋರ್ಟ ಪ್ರಾಣಿ ಯಾರೆಂದು ಆತನು ವಿಚಾರಿಸಿದನು.
ನಾನು ಅವನಿಗೆ ಆತನ ಈ ಮೊದಲಿನ ಚರಿತ್ರವನ್ನೆಲ್ಲ ತಿಳಿಸಲು, ಅವನು 'ಇಂಥ
ಕಾಲಸರ್ಪನನ್ನು ಈ ಲೋಕದಲ್ಲಿರಿಸುವುದೇ ತಪ್ಪು' ಎಂದೆಂದು, ಆ ನೇಭಿಲ್ಲ
ಹರಕೋರ್ಟನಿಗೆ ಆಗಿಂದಾಗ ಗುಂಡು ಹಾಕಿಸಿ ಕೊಲ್ಲಿಸಿದನು! ಇದೇ ಆ ಕಾಲ
ಸರ್ಪನ ಸಂಗತಿಯು.

ಬ್ಲೇಕ:—ವಿಹಿತವೇ ಆಯಿತು. ಅಂಥವರಿಗೆ ಹಾಗೆ ಆದರೇ ಲೋಕಕ್ಕೆ ಹಿತವಾದೀತು. ಆ ಸೀಜನು ಪಾಪ! ಸರಳ ಸ್ವಭಾವದ ಆ ತರುಣನನ್ನು ಯಾವ ಪಂಥಕ್ಕೆ ಹುಟ್ಟಿಸಿರುವನೆಂಬದನ್ನು ನೋಡಿರಿ.

ಡಾಕ್ಟರ:—ಅಹುದು; ಅಂಥವರ ಗತಿಯು ಹಾಗೆಯೇ ಆಗುವದು.

ಬ್ಲೇಕ:—ಕನಸ್ಪನು ಈಗ ಹೇಗಿರುತ್ತಾನೆ?

ಡಾಕ್ಟರ: ಈಗ ಅವನಿಗೆ ತುಸ ಜ್ವರಬಂದಿದೆ. ದೇಹದೊಳಗಿನ ಗುಂಡು ತೆಗೆ ಸೆಗೆದ ಮೇಲೆ ಹೀಗೆಯೇ ಆಗುತ್ತಿರುತ್ತದೆ. ಅದಕ್ಕಾಗಿ ಅಂಜುವ ಕಾರಣವಿಲ್ಲ. ಜ್ವರವು ಬೇಗನೆ ಕಡಿಮೆಯಾಗುವದು. ಮೊನ್ನಿನ ಯುದ್ಧದಲ್ಲಿ ಅವನು ಎಷ್ಟು ಶೌರ್ಯತೋರಿಸಿದನೆಂಬದನ್ನು ನೀವು ತಿಳಿದಿರುವಿರಾ?

ಬ್ಲೇಕ:-ಕೆಲಮಟ್ಟಿಗೆ ಕೇಳಿರುವೆನು. ಆ ದಂಡಿನ ಕರ್ನಲ್ಲನೇ ಹೇಳಿದನು. ಆತನ ರಣ ಶೌರ್ಯದಿಂದಲೇ ತಮಗೆ ಅಂದು ಜಯವಾಯಿತೆಂದೂ ತಾವು ಶತ್ರುಗಳ ಟ್ರೆಂಚಗಳನ್ನು ಸ್ವಾಧೀನಪಡಿಸಿಕೊಂಡೆವೆಂದೂ ಹೇಳಿ ಕನಸ್ಪನ ಅಲೌಕಿಕ ವೀರತ್ವವನ್ನು ಹೊಗಳಿದನು. ಆತನ ಆ ಶೌರ್ಯಕ್ಕಾಗಿ ಅವನಿಗೆ "ವ್ಹಿಕ್ಟೋರಿಯಾ ಕ್ರಾಸ್" ಕೊಡಲಿರುವರೆಂದೂ ಕೇಳಿರುತ್ತೇನೆ.

ಡಾಕ್ಟ:-"ಹಾಗಲ್ಲವೇ! ತಮ್ಮ ಮಾತು ಕೇಳಿ ನನಗೆ ಅತ್ಯಂತ ಸಂತೋಷವಾಯಿತು. ಆತನು ಅಂದು ನಿಜವಾಗಿಯೂ ಅಸಾಧ್ಯಸಾಧನವನ್ನೇ ಮಾಡಿದನು.

ಸ್ಮಿತ್ಥನು ಬ್ಲೇಕನ ಮೋಟರಿನಲ್ಲಿ ಕುಳಿತು ಒಂದು ಕಿವಿಯಿಂದ ಡಾಕ್ಟರನೊಡನೆ ತಮ್ಮ ಒಡೆಯನು ನಡೆಸಿದ್ದ ಸಂಭಾಷಣ ಕೇಳುತ್ತಿದ್ದನು; ಬೇರೆ ಕಿವಿಯಿಂದ ರಣಭೂಮಿಯಲ್ಲಿ ಹಾರುತ್ತಿರುವ ಭೀಷಣ ತೋಫುಗಳ ಗರ್ಜನೆಯನ್ನೂ ಅವರೊಳಗಿಂದ ಹಾರಿದ ಗುಂಡುಗಳು ಒಡೆದು ಚಲ್ಲಾಪಿಲ್ಲಿಯಾಗುವಾಗ ಆಗುವ ಸುಗಂಭೀರ ನಿನಾದವನ್ನೂ ಕೇಳುತ್ತಿದ್ದನು. ಅಂದು ಬೆಳಗಿನಲ್ಲೇ ಬ್ರಿಟಿಶ ಸೈನ್ಯವು ವೈರಿಸೈನ್ಯದೊಡನೆ ಕಾದುತ್ತಿತ್ತು. ಆಗ ಇಳಿಹೊತ್ತಾಗ ಬಂದಿದ್ದರೂ ಆ ಯುದ್ಧವು ಒಂದೇರೀತಿಯಲ್ಲಿ ನಡೆದಿತ್ತು. ಜರ್ಮನ್ನ ದಂಡನ್ನು ಹಿಂದೂಡಬೇಕೆಂದು ಬ್ರಿಟಿಶರು ಬಹು ಶೌರ್ಯದಿಂದ ನುಗ್ಗುತ್ತಿದ್ದರು. ಜರ್ಮನ್ನರು ಬ್ರಿಟಿಶರ ವಶದೊಳಗಿನ ಕೆಲ ಭಾಗವನ್ನು ತಮ್ಮ ಭೀಷಣ ತೋಫುಗಳ ಮೂಲಕ ಹಾರಿಸಿ ಬಿಡಲಿಕ್ಕೆ ಪ್ರಯತ್ನಿಸುತ್ತಿದ್ದರು. ಅದೆಷ್ಟೋಮಂದಿಗಾಯಗೊಂಡ ಸೈನಿಕರು ರಣಭೂಮಿಯಿಂದ ರಣಕ್ಷೇತ್ರಕ್ಕೆ ಸಮೀಪದಲ್ಲಿದ್ದ ಆಸ್ಪತ್ರೆಗೆ ಕಳಿಸಲ್ಪಟ್ಟಿದ್ದರು. ಕಳಿಸಲ್ಪಡುತ್ತಿದ್ದರು; ಹಾಗು ಈಗಲೂ ಆಯಿಡೋಫಾರ್ಮಿನ ಉಗ್ರ ವಾಸನೆಯಿಂದ ಸಮೀಪದ ಪ್ರದೇಶದೊಳಗಿನ ವಾಯುವೆಲ್ಲ

ತುಂಬಿಹೋಗಿತ್ತು. ಆಸ್ಪತ್ರೆಯೊಳಗಿನ ನರ್ಸ ಮತ್ತು ವಾರ್ಡಬಾಯಗಳಿಗೆ ಕೊಂಚವೂ ವಿರಾಮವಿರಲಿಲ್ಲ. ಅವರ ಉಡಿಗೆ ತೊಡಿಗೆಗಳು ಗಾಯಪಟ್ಟವರ ಗಾಯಗಳಿಂದ ಹೊರಚಿಮ್ಮುತ್ತಿದ್ದ ರಕ್ತದಿಂದ ಮುಣುಗಿದ್ದವು. ಆ ಡಾಕ್ಟರನಿ ಗಾವರೂ ಹೆಚ್ಚು ಹೊತ್ತು ಮಾತಾಡಲಿಕ್ಕೆ ಅವಕಾಶವಿರಲಿಲ್ಲ. ಆತನು ಆಸ್ಪತ್ರೆಯೊಳಗೆ ಹೋಗಲನುವಾಗಿ ಬ್ಲೇಕನನ್ನು ಕುರಿತು:-ನೀವು ಹೋಗಬೇಕೆಂದು ಇಚ್ಛಿಸುತ್ತಿದ್ದರೆ ರೇಜಿನದ ರೇಲ್ವೇ ಸ್ಟೇಶನ್ನಿಗೆ ಹೋದರೆ ಪ್ರಾಯಷ್ಟೆಟ ಕನಪ್ಪನನ್ನು ಕಾಣಬಹುದು. ಅಲ್ಲಿಗೆ ಹೋಗುವ ರೈಲು ಬರಲಿಕ್ಕೆ ಇನ್ನೂ ಅವಕಾಶವಿದೆ.

ಬ್ಲೇಕ:—ರೆಜಿನದ ಸ್ಟೇಶನ್ನು ಇಲ್ಲಿಂದ ಎಷ್ಟು ದೂರವಿದೆ?

ಡಾಕ್ಟ:—ಸಮೀಪದಲ್ಲೇ ಇದೆ. ಇಲ್ಲಿಂದ ಎರಡು-ಮೂರು ಮೈಲುಗಳಿಗಿಂತ ಹೆಚ್ಚಿಲ್ಲ.

ಬ್ಲೇಕ:—ಮಹಾಶಯರಿಗೆ ಧನ್ಯವಾದಗಳು. ನಾನು ಅಲ್ಲಿಗೇ ಹೊರಡುವೆನು; ನಮಸ್ಕಾರ!"

"ನಮಸ್ಕಾರ-ಮಹಾಶಯ" ಎಂದೆಂದು ಡಾಕ್ಟರನು ಬ್ಲೇಕನ ಅಪ್ಪಣೆ ಪಡೆದು ಆಸ್ಪತ್ರೆಯೊಳಗೆ ನಡೆದನು. ಬ್ಲೇಕನಾದರೂ ತನ್ನ ಮೋಟರಿನಲ್ಲಿ ಕುಳಿತು ಸ್ಟೇಅರಿಂಗನ್ನು ತಿರುಗಿಸಹತ್ತಿದನು. ಭೊಂ ಭೊಂ ಶಬ್ದ ಮಾಡುತ್ತ ಅವನ ಮೊಟರು ವಾಯುವೇಗದಿಂದ ರೇಜಿನದ ಮಾರ್ಗವನ್ನು ಕ್ರಮಿಸತೊಡಗಿತು. ಸ್ಮಿತ್ಥನು ಬ್ಲೇಕನ ಪಕ್ಕದಲ್ಲಿ ಕುಳಿತು, ಯುದ್ಧಕ್ಷೇತ್ರದ ಕಡೆಗೆ ಟಕಮಕವೆಂದು ನೋಡಹತ್ತಿದನು. ಆಗ ರಣಭೂಮಿಯ ಮೇಲಿನ ಆಕಾಶವು ತೋಪಿನ ಹೊಗೆಯಿಂದ ತುಂಬಿ ಅಂಧಕಾರವಾಗಿ ಬಿಟ್ಟಿತ್ತು.

ಸ್ಮಿತ್ಥ:—ನಮಗೆ ರಣಭೂಮಿಯಲ್ಲೇ ಕಿಲ್ಡೇಯಾರನ ಭೇಟಿಯಾದೀತೆಂದು ನನಗನಿಸಿತ್ತು. ಹಾಗಾಗಿದ್ದರೆ ಆ ಸಂಧಿಯಲ್ಲಿ ಕೆಲ ಹೊತ್ತು ಯುದ್ಧವನ್ನಾದರೂ ಪ್ರತ್ಯಕ್ಷ ನೋಡಲು ದೊರೆಯುತ್ತಿತ್ತು. ಇದುವರೆಗೂ ನನಗೆ ಇಂಥ ದೊಡ್ಡ ಯುದ್ಧವು ನೋಡಲಿಕ್ಕೆ ದೊರೆತಿಲ್ಲ.

ಬ್ಲೇಕ:—ಈ ಸಾರೆಯೂ ನಿನಗಾ ಸಂಧಿಯು ದೊರಕದು. ಇಂದು ಸಂಜೆಯೊಳಗಾಗಿಯೇ ನಾವು ರೆಜಿನರಕ್ಕೆ ಹೋಗಲೇಬೇಕು.

ಸ್ಮಿತ್ಥ:—ಅಲ್ಲಿಂದ ನಾವುಗಳೇನು ನೆಟ್ಟಗೆ ಲಂಡನ್ನಿಗೇ ಹಿಂದಿರುಬೇಕೆ?

ಬ್ಲೇಕ:—ಹಾಗೆಯೇ ಆದೀತು. ಆ ಬಗ್ಗೆ ಈಗಲೇ ನಿಶ್ಚಿತವಾಗಿ ಹೇಬರುವಂತಿಲ್ಲ.

ಮೋಟರು ತ್ವರಿತವಾಗಿ ಓಡಹತ್ತಿತು. ದೂರದಲ್ಲಿ ತೋಫು-ಬಂದೂಕು ಮಶಿನ್ನಗನ್ನಗಳ ಸಪ್ಪಳವು ಪ್ರಳಯಕಾಲದ ಮೇಘಗರ್ಜನೆಯಂತೆ ಗರ್ಜಿಸುತ್ತಿರು ವದು ಅವರ ಕಿವಿಗೆ ಕೇಳಿಸುತ್ತಿತ್ತು. ಗಾಯಗೊಂಡ ಸೈನಿಕರನ್ನು ಹೊತ್ತು ಕೊಂಡು ಬರುತ್ತಿದ್ದ ಅಂಬ್ಯುಲನ್ಸಕಾರುಗಳು ಇವರ ಅಕ್ಕಪಕ್ಕಗಳಲ್ಲೇ ಓಡು ತ್ತಿದ್ದವು. ಆ ಕಾರುಗಳು ಯುದ್ಧಭೂಮಿಯೊಳಗೆ ಗಾಯಗೊಂಡ ದಂಡಾಳು ಗಳನ್ನು ಆಸ್ಪತ್ರೆಗೆ ತಂದು ಹಾಕುತ್ತಿದ್ದವು. ಮದ್ದು-ಗುಂಡಿನ ಗಾಡಿಗಳೂ ಇವರ ಗಾಡಿಯ ಹತ್ತರದಿಂದಲೇ ಓಡಾಡುತ್ತಿದ್ದವು. ರಣಸಾಹಿತ್ಯವನ್ನು ಆ ಗಾಡಿಗಳ ಮೂಲಕ ಯುದ್ಧಕ್ಷೇತ್ರದೊಳಗಿನ ದಂಡಾಳುಗಳಿಗೆ ತಲುಪಿಸು ತ್ತಿದ್ದರು. ಖಾದ್ಯಪೇಯ ಪದಾರ್ಥಗಳ ಗಾಡಿಗಳು ಬ್ರಿಟಿಶ ಸೈನಿಕರು ತಂಗಿದ್ದ ಟ್ರೆಂಚದ ಕಡೆಗೆ ಹೋಗಿ ಅವರಿಗೆಲ್ಲ ಪಾನಾಹಾರಗಳನ್ನು ಕಾಲಕಾಲಕ್ಕೆ ತಲು ಪಿಸುತ್ತಿದ್ದವು. ಯಾರಿಗೂ ಯಾವದರ ಕೊರತೆಯೂ ಇರಲಿಲ್ಲ. ಆದರಿಂದ ಎಲ್ಲರ ಬಾಯಲ್ಲೂ ಉತ್ಸಾಹಭರಿತ ಶಬ್ದಗಳೇ; ಯಾರೂ ಅಸಂತುಷ್ಟರಿರಲಿಲ್ಲ. ಆಲಸ್ಯ, ಜಾಡ್ಯ, ಸಂಕೋಚ, ಭಯ ಇವೆಲ್ಲವುಗಳೂ ಆ ಭಾಗದಿಂದ ಪಲಾ ಯನ ಹೇಳಿಸಿದ್ದವು. ಮೃತ್ಯುವೇ ಮೃತ್ಯುಂಜಯಿಯಾದ ಅಮೃತ ಭಾಂಡ ವನ್ನು ಕೈಯಲ್ಲಿ ಹಿಡಿದುಕೊಂಡು ಬ್ರಿಟನ್ನಿನ ಸಾಹಸೀ ವೀರ ದಂಡಾಳು ಗಳಿಗೆ ರಣಸಮುದ್ರದಲ್ಲಿ ಅಮೃತಕ್ಕೆ ಅಧಿಕಾರಿಗಳಾಗುವಂತೆ ಹುರುಪು ಕೊಡು ತ್ತಿತ್ತು. ಮನೆಯೊಳಗಿನ ಸೌಖ್ಯ, ಆಪ್ತೇಷ್ಟರ ಸ್ನೇಹ ಸಂಬಂಧ, ಗಾರ್ಹಸ್ಥ್ಯ ಜೀವನದ ಶಾಂತಿ-ಸಮಾಧಾನ ಮುಂತಾದವುಗಳು ಪ್ರಚಂಡವೂ ಉದ್ದಾಮವೂ ಆದ ಆ ರಣಮದಿರೆಯ ಮಾನದಿಂದ ಎಷ್ಟು ತುಚ್ಛವು? ಪ್ರೇಮದ ಮನೋಹರ ವಾದ ಕೊಳಲಿನ ಧ್ವನಿಯು ರಣಕ್ಷೇತ್ರದ ದುಂದುಭಿಯ ಮತ್ತು ರಣಭೇರಿಯ ಧ್ವನಿಯ ಮಾನದಿಂದ ಎಷ್ಟು ಅಲ್ಪವು? ಎಂಬದನ್ನು ಸ್ಮಿತ್ಥನು ಮೋಟರಿನಲ್ಲಿ ಕುಳತೇ ಮನಸ್ಸಿನಲ್ಲಿ ಭಾವಿಸಿದನು. ಮುಂದೆ ಅಲ್ಪಾವಧಿಯಲ್ಲೇ ಬ್ಲೇಕನ ಮೋಟರು ರೇಜಿನ ಗ್ರಾಮದೊಳಗಿಂದ ಹಾಯ್ದು ಅದರಾಚೆಗಿದ್ದ ರೇಲ್ವೇಸ್ಟೇಶ ನ್ನಿಗೆ ಹೋಯಿತು ಸ್ಟೇಶನ್ನಿನಲ್ಲಿ ಕಾಲಿಟ್ಟ ಕೂಡಲೆ ಅವರು ಯಾವ ನೋಟ ವನ್ನು ಕಂಡರೋ ಅಂಥ ದೃಶ್ಯವನ್ನು ಅವರು ಅದು ಮೊದಲೆಂದೂ ಕಂಡಿರಲಿಲ್ಲ. ಅಂಥ ನೋಟವನ್ನು ನೋಡಬಹುದೆಂಬ ಕಲ್ಪನೆಯನ್ನು ಕೂಡ ಅವರೆಂದೂ ಮಾಡಿರಲಿಲ್ಲ.

ಆ ರೇಲ್ವೇ ಸ್ಟೇಶನ್ನಿನ ಪ್ಲ್ಯಾಟಫಾರ್ಮಿನಲ್ಲಿ ನೂರುಗಟ್ಲೆ ಗಾಯಗೊಂಡ ದಂಡಾಳುಗಳು ಬಂದು ಬಿಟ್ಟಿದ್ದರು. ಕೆಲವರು ನೆರಳಿನಲ್ಲಿ ಕುಳಿತಿರುವರು; ಬೇರೆ ಹಲವರಿಗೆ ನೆರಳು ದೊರೆಯದ್ದರಿಂದ ಬಿಸಿಲಲ್ಲೇ ಬಿದ್ದುಕೊಂಡಿರುತ್ತಾರೆ.

ಎತ್ತ ನೋಡಿದತ್ತೆಲ್ಲ ಗಾಯಗೊಂಡ ಸೈನಿಕರ ಗುಂಪುಗಳೇ ಗುಂಪು. ಅವರೆಲ್ಲರೂ ರೈಲಿಗಾಗಿ ಕಾದಿದ್ದರು. ಯಾರು ವಿಶೇಷ ಗಾಯಗೊಂಡಿದ್ದರೋ ಅವರನ್ನು ರೈಲಿನ ಮೂಲಕ ಸಮೀಪದ ಯಾವದೊಂದು ಆಸ್ಪತ್ರೆಗೆ ಒಯ್ಯಲಾಗುತ್ತಿತ್ತು. ಯಾರಿಗೆ ಅಲ್ಪಗಾಯಗಳಾಗಿದ್ದವೋ ಅವರಿಗೆ ರಣದ ಆಸ್ಪತ್ರೆಯಲ್ಲೇ ಕಳಿಸಲಾಗುತ್ತಿತ್ತು. ಆಸ್ಪತ್ರೆಗೆ ಹೋಗುವ ಮೊದಲು ಅವರುಗಳ ಸೇವಾ ಶುಶ್ರೂಷಣಕ್ಕೆ ಯಾವ ವ್ಯವಸ್ಥೆಯೂ ಆಗುತ್ತಿರಲಿಲ್ಲ. ಯಾವ ರೈಲು ಬರುತ್ತಿತ್ತೋ ಅವೇ ಗಾಡಿಯಲ್ಲಿ ಅವರೆಲ್ಲರಿಗೂ ಒಮ್ಮೆಲೆ ಸ್ಥಳ ಸಿಗುತ್ತಿರಲಿಲ್ಲ. ಯಾರಿಗೆ ರೈಲಿನಲ್ಲಿ ಸ್ಥಳ ದೊರೆಯುತ್ತಿರಲಿಲ್ಲವೋ ಅವರು ಬೇರೆ ರೈಲು ಬರುವವರೆಗೂ ಹಾಗೆಯೇ ಆ ಪ್ಲ್ಯಾಟಫಾರ್ಮಿನಲ್ಲಿ ಬಿದ್ದು ನಿರೀಕ್ಷಿಸುತ್ತಿರಬೇಕಾಗುತ್ತಿತ್ತು;ಆದರೆ ಅವಕ್ಕಾಗಿ ಅವರಾರೂ ಕೊಂಚವೂ ಅಧೀರರಾಗುತ್ತಿದ್ದಿಲ್ಲ. ಅಥವಾ ಅವರ ಬಾಯಿಂದ ಅಸಂತೋಷದ ಮಾತುಗಳಾಗಲಿ, ತಿರಸ್ಕಾರದ ಬೈಗಳುಗಳಾಗಲಿ ಕೇಳಬರುತ್ತಿರಲಿಲ್ಲ. ಅವರ ಸಂಯಮವು ಆಶ್ಚರ್ಯಕರವಾದದ್ದು! ಅವರ ಧೈರ್ಯವು ಅದ್ಭುತವಾದದ್ದು! ಅಂಥ ಸಹನಶೀಲತೆಯಿಂದ ಅವರ ತಮ್ಮ ಆ ಅಸಹ್ಯ ವೇದನೆಗಳನ್ನು ಸಹಿಸುತ್ತಿದ್ದರು. ರೆಡ್ ಕ್ರಾಸಿನ ಇಪ್ಪತ್ತು-ಮೂವತ್ತು ಪರಿಚಾರಿಕೆಯರು ಆಡ್ಡಾಡಿ ಅಡ್ಡಾಡಿ ರಕ್ತಸ್ರಾವದಿಂದ ಬೆಚ್ಚಗಾಗಿ ನರಳುತಿದ್ದ ವೀರರಿಗೆ ಕುಡಿಯುವ ನೀರನ್ನು ಒದಗಿಸಿ ಕಾಪಾಡುತ್ತಿದ್ದರು. ದಾರುಣವಾದ ನೀರಡಿಕೆಯಿಂದ ತಮ್ಮ ಗಂಟಲೊಣಗಿ ಹೋಗುತ್ತಿದ್ದರೂ ತಮಗೆ ಮೊದಲು ನೀರು ಕೊಡಬೇಕೆಂದು ಆದಾರೂ ಆ ಪರಿಚಾರಿಕೆಯರಿಗೆ ಪೀಡಿಸಿ ಕಾಡಿಸುತ್ತಿರಲಿಲ್ಲ. ಕೆಲಕೆಲವು ಗಾಯಗೊಂಡ ಮಂಡಳಿಗಳು ಭಯಂಕರ ಜ್ವರದಿಂದ ತಲೆ ನಡುಗಿಸುತ್ತಿದ್ದರು. ಕೇವಲ ಕರುಣಾಮೂರ್ತಿಗಳಾದ ಆ ಪರಿಚಾರಿಕೆಯರು ಅಂಥವರ ತಲೆ-ಹಣೆಗಳ ಮೇಲೆ ಕೋಲನ್ ವಾಟರಿನ ಪಟ್ಟಿಗಳನ್ನು ಹಾಕುತ್ತಿದ್ದರು, ಹಾಗು ಅವರ ಯಾತನೆಗಳನ್ನು ಪ್ರಶಮನಗೊಳಿಸಲು ಪ್ರಯತ್ನಿಸುತ್ತಿದ್ದರು.

ಆ ಹೃದಯವಿದಾರಕ ನೋಟವನ್ನು ನೋಡಿ ಸ್ಮಿತ್ ಮತ್ತು ಬ್ಲೇಕರಿಬ್ಬರೂ ಬೆರಗಾಗಿ ಬಿಟ್ಟರು. ಅವರು ವಿಸ್ಮಯಭರದಿಂದ ಗಾಯಪಟ್ಟ ಸೈನಿಕರ ಕಡೆಗೆ ನೋಡಹತ್ತಿದರು. ಅವರು ಆ ರೇಲ್ವೆ ಸ್ಟೇಶನ್ನಿನ ಪ್ಲ್ಯಾಟಫಾರ್ಮಿನೊಗಿನ ಎಲ್ಲ ಸೈನಿಕರ ಮುಖವನ್ನು ನಿರಕಿಸಿ ನಿರಕಿಸಿ ನೋಡುತ್ತ ನಾಗಿ, ಕೊಗೊಮ್ಮೆ ಛದ್ಮನಾಮಧಾರಿಯಾದ ಕಿಲ್ಡೇಯಾರನ ಎದುರಿಗೆ ಹೋಗಿ ನಿಂತರ

ಪ್ರಾಯವೇಟ ರಿಚರ್ಡ ಕನಪ್ (ಬ್ರಾವುನ್‌ಕಿಲ್ಡೇಯಾರ)ನು ಬ್ಲೇಕ ಸ್ಮಿತ್ಥರನ್ನು ಕಂಡಾಕ್ಷಣವೇ ಗುರ್ತಿಸಿದನು. ಅವರನ್ನು ಆ ವಿದೇಶದಲ್ಲಿ, ತ

ಜೀವನದ ಆ ಮಹಾಸಂಕಟಗ್ರಸ್ತ ಪ್ರಸಂಗದಲ್ಲಿ ಕಂಡ ಕೂಡಲೆ ಆತನ ಈ ಮೊದಲಿನ ವಿಷಣ್ಣಕರವಾದ ವದನವು ಪ್ರಫುಲ್ಲಿತವಾಯಿತು. ಆತನು ನಿಟ್ಟುಸಿರು ಗರೆದು, ಅಸ್ಫುಟ ದನಿಯಿಂದ:—ಮಹಾನುಭಾವ ಬ್ಲೇಕರೇ! ತಾವು ಇಲ್ಲಿಗೇಕೆ ಬಂದಿರಿ? ನನಗೇನು ಕನಸು-ಗಿನಸು ಬಿದ್ದಿದೆಯೋ?"

ಬ್ಲೇಕನು ಅವನ ತಲೆಯ ಹತ್ತರ ಕುಳಿತುಕೊಂಡು ಮೆಲ್ಲನೆ:—ಕಿಲ್ಡೇಯಾರ, ಇದು ಕನಸಲ್ಲ. ನಾವು ನಿಜವಾಗಿಯೂ ಇಲ್ಲಿಗೆ ಬಂದಿರುತ್ತೇವೆ. ನಿನ್ನನ್ನು ಹುಡುಕಿಕೊಂಡೇ ಬಂದಿದ್ದೇವೆ. ಬಹು ದಿನಗಳಿಂದಲೂ ನಿನ್ನ ಪತ್ತೆ ಹತ್ತಿರಲಿಲ್ಲ. ಇಷ್ಟು ದಿನಗಳ ನಂತರ ನಮ್ಮ ಶ್ರಮಸಾಫಲ್ಯವಾಯಿತು.

ಕಿಲ್ಡೇ:—"ನನ್ನನ್ನು ಹುಡುಕ ಬಂದಿರುವಿರಾ? ನನ್ನನ್ನು ಹುಡುಕುವ ಉದ್ದೇಶವೇನು? ಈಗ ನನ್ನನ್ನು ಕಂಡರೂ ಕಾಣದಂತೆಯೇ ಸರಿ. ಸಮಾಜದ ದೃಷ್ಟಿಯಿಂದ ನಾನು ಸತ್ತಿರುತ್ತೇನೆ. ಜೀವನದ ಎಲ್ಲ ಆಶೆಗಳಿಗೂ ವಂಚಿತನಾಗಿ, ನನ್ನ ಕಲಂಕಿತ, ತಿರಸ್ಕೃತ ಜೀವನವನ್ನು ಪೂರೈಸುವ ಸಲುವಾಗಿಯೂ ಮರಣದ ಶಾಂತಿಮಯ ಕಂಕುಳದಲ್ಲಿ ಆಶ್ರಯ ಹೊಂದುವ ಸಲುವಾಗಿಯೂ ನಾನೀ ವಿದೇಶಕ್ಕೆ ಬಂದಿರುತ್ತೇನೆ. ಈ ಪ್ರಸಂಗದಲ್ಲಿ ನಿಮಗೆ ನನ್ನ ಅಗತ್ಯವೋ? ನನ್ನ ಗತಿಸಿದ ಜೀವನವು ನನಗೀಗ ಕೇವಲ ಕನಸು!

ಬ್ಲೇಕನು ಸ್ನೇಹ ಭರದಿಂದ 'ಕಿಲ್ಡೇಯಾರ, ಇಷ್ಟೇಕೆ ಹತಾಶನಾಗುತ್ತೀ? ನಿನ್ನ ಭಾಗ್ಯಾಕಾಶದಲ್ಲಿ ವಿಪತ್ತಿನ ಮೇಘಗಳು ಕವಿದಿರುತ್ತವೆಂದೂ ಆ ಮೇಘಗಳೆಂದೂ ಸರಿಯಲಾರವೆಂದೂ ನೀನು ತಿಳಿದಿರುತ್ತೀಯಾ? ಹಾಗು ಇನ್ನು ಮೇಲೆ ನೀನೆಂದೂ ಸುಖದ ದಿನಗಳನ್ನು ಕಾಣಲಾರೆಯಾ? ತಪ್ಪು; ಕಿಲ್ಡೇಯಾರ, ಇದು ನಿನ್ನ ದೊಡ್ಡ ತಪ್ಪು! ನಾನು ನಿನಗೆ ಎಷ್ಟೋ ಸಂಗತಿಗಳನ್ನು ತಿಳಿಸಬೇಕಾಗಿದೆ; ಆದರೆ ನಿನ್ನೀ ಅವಸ್ಥೆಯನ್ನು ಕಂಡು ನಿನಗೆ ಅವನ್ನೆಲ್ಲ ಈಗಲೇ ತಿಳಿಸುವ ಸಾಹಸವಾಗುವದಿಲ್ಲ. ಅದಿರಲಿ; ಈಗ ನಿನಗೆ ಹೇಗೆನಿಸುತ್ತದೆ?"

ಕಿಲ್ಡೇ:—"ಹೆಗಲಲ್ಲಿ ನೆಟ್ಟಿದ್ದ ಗುಂಡನ್ನು ಡಾಕ್ಟರನು ತೆಗೆದಿರುವನು; ಆದರೆ ವೇದನೆಗಳು ಮಾತ್ರ ಮೊದಲಿನಂತೆಯೇ ಇವೆ. ಇಂದು ತುಸ ಜ್ವರವೂ ಬಂದಿದೆ. ಆದರೂ ಒಟ್ಟಿನಲ್ಲಿ ಗುಣಮುಖವೆಂದೇ ಹೇಳಬಹುದು."

ಬ್ಲೇಕನು ಕ್ಷಣ ಹೊತ್ತು ಸುಮ್ಮನಿದ್ದು, ನಂತರ:—"ನಿನ್ನ ಅಸಾಮಾನ್ಯ ಶೌರ್ಯಕ್ಕಾಗಿ ನಿನಗೆ 'ವ್ಹಿಕ್ಟೋರಿಯಾ ಕ್ರಾಸ' ಕೊಟ್ಟು ಮನ್ನಿಸುವರು."

ಕಿಲ್ಡೇಯಾರನು ನಿರಾಶೆಯ ನಗೆ ನಕ್ಕು:—"ಅಹುದು; ಇಂದು ಬೆಳಿಗ್ಗೆ ನಮ್ಮ ಕರ್ನಲ್ಲನು ಹಾಗೆ ಹೇಳಿದ್ದನ್ನು ಕೇಳಿರುವದೇನೋ ಸರಿ: ಅಲ್ಲದೆ ನನಗೆ ದಂಡಿನಲ್ಲಿ ಒಳ್ಳೇ ಪ್ರಮೋಶನ್ ಕೂಡ ಸಿಗುವದೆಂದೂ ತಿಳಿದಿದ್ದೇನೆ; ಆದರೆ

ನನಗೆ ವ್ಹಿಕ್ಟೋರಿಯಾ ಕ್ರಾಸಿನಿಂದಲೂ ಲಾಭವಿಲ್ಲ; ಪ್ರಮೋಶನಕ್ಕೂ ನಾನು ಹಪಾಪಿಸಿಲ್ಲ. ನಾನು ಯಾವಾಗ ನನ್ನ ದಂಡಿನಿಂದ ಹೊರಟು ಹೋಗಿ ಜರ್ಮನ್ನರ 'ಟ್ರೆಂಚು'ಗಳನ್ನು ಆಕ್ರಮಿಸಿದೆನೋ, ಆಗ ನನ್ನಲ್ಲಿ ಈ ಯಾವ ಲೋಭಗಳ ಆಕಾಂಕ್ಷೆಯು ಕೊಂಚವೂ ಇರಲಿಲ್ಲ. ಹೆಸರು ಪಡೆಯಲೋಸುಗವೂ ನಾನು ಆ ದುಃಸಾಹಸದ ಕಾರ್ಯಕ್ಕೆ ಪ್ರವೃತ್ತನಾಗಿರಲಿಲ್ಲ. ಸಾಯಲು ಸಂಪೂರ್ಣ ಸಿದ್ಧನಾಗಿಯೇ ನಾನಾ ಕೆಲಸಕ್ಕೆ ತೊಡಗಿದ್ದೆನು. ನಾನು ಹಾಗೆ ವೈರಿಗಳ ದಂಡಿನೆದುರು ಹೋದರೆ, ಅವರಿಂದ ಬಿಡಲ್ಪಟ್ಟ ಗುಂಡುಗಳಿಂದ ನನಗೆ ಕೂಡಲೆ ಮರಣವೊದಗುವದೆಂದು ಹೊರಟಿದ್ದೆನು; ಆಗ ನನ್ನ ಮುಖ್ಯ ಹಂಬಲವು ಮೃತ್ಯುವೇ ಆಗಿತ್ತು; ಆದರೆ ಅರಿಗಳ ಗುಂಡಿನಿಂದ ಗಾಯಗೊಂಡರೂ ನಾನು ಸಾಯಲಿಲ್ಲ; ಆ ಗಾಯವು ಪ್ರಾಣಾಂತಿಕವಾಗಲಿಲ್ಲ. ಯಾವನಿಗೆ ಜೀವಿಸಿರುವ ಯಾವ ಪ್ರಲೋಭನವೂ ಇಲ್ಲವೋ, ಯಾವನಿಗೆ ಮರಣವೆಂದರೇ ಶಾಂತಿ-ಸಕಲ ಸಂತಾಪಗಳ ನಿವೃತ್ತಿಯೋ ಅಂಥವನು ಯಾವ ಆಸೆಗಾಗಿರಬೇಕು?"

ಬ್ಲೇಕ:—ಕಿಲ್ಟೀಯರ, ಇಷ್ಟೇಕೆ ನಿರಾಶನಾಗಿರುವೆ? ಜೀವಿಸಲು ನಿನಗೆ ಹಲವು ಪ್ರಲೋಭನಗಳಿವೆ. ತೀರ ಕಡಿಮೆಯೆಂದರೂ ವರ್ಷಕ್ಕೆ ಹದಿನೈದು-ಇಪ್ಪತ್ತು ಸಾವಿರ ಪೌಂಡುಗಳ ಆದಾಯ ಮತ್ತು ಕೆರೀ ಜಿಲ್ಹೆಯೊಳಗಿನ ಅರಮನೆಯಂತಹ ಮನೆ ಇವು ಯಾವುದೊಂದು ವ್ಯಕ್ತಿಯು ಜೀವನಧಾರಣಕ್ಕೆ ಸಾಕಷ್ಟು ಪ್ರಲೋಭನಗಳಲ್ಲವೇನು?"

ಕಿಲ್ಟೀ:—"ಇದು ನಿಜವೆ? ನನ್ನ ಸೋದರತ್ತೆಯು ತೀರಿಕೊಂಡಳೆಂದು ನೀವನ್ನುತ್ತೀರಾ? ಸಾಯುವಾಗ ಅವಳು ಈ ಮೊದಲು ನನ್ನಲ್ಲಿ ಮಾಡಿದ್ದ ದುರ್ವ್ಯವಹಾರದ ಬಗ್ಗೆ ಪಶ್ಚಾತ್ತಾಪಪಟ್ಟು, ನನಗೆ ತನ್ನ ಸಂಪತ್ತನ್ನೆಲ್ಲ ಕೊಟ್ಟು ಬಿಟ್ಟಿರುವಳೆ? ಆದರೆ ಈ ಬಗೆಯ ಚೇಷ್ಟೆಯಿಂದ ಪ್ರಯೋಜನವಿಲ್ಲ. ಭೂಮಿಯೊಳಗಿನ ಯಾವ ಸಂಪತ್ತೂ ನನ್ನನ್ನಿನ್ನು ಮೋಹಿಸಲಾರದು. ಸಂಪತ್ತು ಭೋಗಿಸುವ ಇಚ್ಛೆಯೇ ನನಗಿಲ್ಲ; ಆದರೂ ಸಾಯುವಾಗ ನನ್ನ ಸೋದರತ್ತೆಯ ಮತಿಪರಿವರ್ತನವಾದದ್ದೊಂದು ಆಶ್ಚರ್ಯಕರವೇ ಸರಿ."

ಬ್ಲೇಕ:—"ನಿನ್ನ ಸೋದರತ್ತೆಯು ನಿನ್ನಲ್ಲಿ ಪ್ರೀತಿಯಿಟ್ಟು ನಿನ್ನನ್ನು ತನ್ನ ಸಂಪತ್ತಿಗೆ ಉತ್ತರಾಧಿಕಾರಿಯನ್ನಾಗಿ ಮಾಡಿರುವಳೆಂದು ತಿಳಿಯಬೇಡ. ದೇವರೇ ನಿನಗೆ ಒಲಿದಿರುವನು; ಅಂದಮೇಲೆ ಅವನ ಇಚ್ಛೆಗೆ ಅದಾರು ವಿರೋಧಿಗಳಾಗುವರು? ಅವಳು ನಿನ್ನನ್ನು ವಂಚಿಸುವ ಮೃತ್ಯುಪತ್ರವನ್ನು ಬರೆಸಿದ್ದಳು; ಹಾಗು ಅದನ್ನು ಮುಂಚಿನ ಮೃತ್ಯುಪತ್ರದ ಜೊತೆಗೇ ಇಟ್ಟಿದ್ದಳು. ಸಾಯುವದಕ್ಕೆ ಕೊಂಚ ಮುಂಚೆ ಅವಳು ಮೊದಲನೇ ಮೃತ್ಯುಪತ್ರವನ್ನು

ಹರಿದು ಸುಡುವದಕ್ಕೆ ಬದಲು ಭ್ರಮೆಯಿಂದ ಎರಡನೆಯದನ್ನೇ ಹರಿದು ಸುಟ್ಟುಬಿಟ್ಟಳು! ಈಗ ಆ ಎರಡನೇ ಪತ್ರವು ಹಾಜರಿಲ್ಲ; ಆದ್ದರಿಂದ ಮೊದಲ ನೇ ಮೃತ್ಯುಪತ್ರವೇ ವ್ಯರ್ಥವಾಯಿತು. ಇದನ್ನು ಯಾರೂ ಖೊಟ್ಟಿಮಾಡರು."

ಕಿಲ್ಡೇಯಾರನು ಸೋಜಿಗದಿಂದ:—'ಆದರೆ ನನ್ನಂತಹ ಅವಸ್ಥೆಯ ಜನರು ಸಂಪತ್ತು ಕಟ್ಟಿಕೊಂಡು ಮಾಡುವವೇನು? ದುಡ್ಡು ಕೊಟ್ಟು ಸುಖ ಶಾಂತಿಗಳನ್ನು ಕೊಳ್ಳಲಾಗುವವೇ? ಸಮಾಜದಲ್ಲಿ ನನಗೆ ಸ್ಥಾನವಿಲ್ಲ; ನನ್ನ ಒಳ್ಳೇ ಹೆಸರಿಗೆ ದುರುಳತನದ ಕಲಂಕವು ಅಂಟಿಕೊಂಡಿದೆ. ದುಡ್ಡಿನಿಂದ ಆ ಕಲಂಕವೇನಾದರೂ ದೂರವಾಗುವದೆ?"

ಬ್ಲೇಕ:—ನೀನು ಸ್ವತಃ ನಿನ್ನನ್ನು ಎಷ್ಟು ತುಚ್ಛ-ಕಲಂಕಿತನೆಂದುಕೊಳ್ಳುವೆಯೋ ಸಮಾಜವು ನಿನ್ನನ್ನು ನಿಜವಾಗಿಯೂ ಅಷ್ಟು ಹೇಯ ಹಾಗು ಕೆಲಸಕ್ಕೆಬಾರದ ಪ್ರಾಣಿಯೆಂದು ತಿಳಿದಿಲ್ಲ. ನೀನು ನಿನ್ನ ಸ್ವಂತ ಅಪರಾಧ ದಿಂದಲೇ ಸುಖ-ಸೌಭಾಗ್ಯಗಳಿಗೆ ಎರವಾಗಿರುವೆ; ಅವುಗಳನ್ನು ನಿನಗೆ ಮತ್ತೆ ದೊರೆಕಿಸಿ ಕೊಡಲಿಕ್ಕೆಂದು ನಾನು ಇಂಗ್ಲಂಡದಿಂದ ನಿನ್ನನ್ನು ಹುಡುಕುತ್ತ ಇಲ್ಲಿಯವರೆಗೆ ಬಂದಿರುತ್ತೇನೆ.

ಕಿಲ್ಡೇಯಾರನು ಮುಖವನ್ನೆತ್ತಿ ಬ್ಲೇಕನ ಕಡೆಗೆ ಟಕಮಕವೆಂದು ನೋಡುತ್ತ:-ನಾನು ಸ್ವಯಮಪರಾಧ ಹಾಗು ಬುದ್ಧಿಗೇಡಿತನಗಳಿಂದ ಯಾವ ಸುಖ ಸೌಭಾಗ್ಯಗಳನ್ನು ಕಾಲಿನಿಂದ ಮೆಟ್ಟಿ, ತುಚ್ಛವೂ ಕಲಂಕಿತವೂ ಆದ ಜೀವನವನ್ನು ತಕ್ಕೊಂಡು ಈ ವಿದೇಶದ ರಣಭೂಮಿಗೆ ಸಾಯಲಿಕ್ಕೆಂದು ಬಂದಿರುತ್ತೇನೋ ಆ ಸುಖ, ಸೌಭಾಗ್ಯ, ಆನಂದ, ತೃಪ್ತಿ ಮುಂತಾದವುಗಳನ್ನು ನೀವು ನನಗೆ ಮತ್ತೆ ದೊರಕಿಸಿ ಕೊಡಲು ಬಂದಿರುವಿರಾ? ನೀವು ನನ್ನೊಡನೆ ಖಂಡಿತವಾಗಿಯೂ ಪರಿಹಾಸ ಮಾಡುವದಿಲ್ಲ. ಆದರೂ ನನಗೆ ನಿಮ್ಮ ಮರ್ಮ ತಿಳಿಯದಾಗಿದೆ.

ಬ್ಲೇಕ:—ಡಾಫನೀ ಭಾರನನ್ನಳು ಈಗಲೂ ನಿನ್ನನ್ನು ಪ್ರೀತಿಸುತ್ತಾಳೆ.

ಕಿಲ್ಡೇಯಾರ:—ಅದನ್ನು ಬಲ್ಲೆನು. ನಾನು ತೀರ ಅಧಮ, ತೀರ ನೀಚ. ನಾನು ಅತ್ಯಂತ ಹತಭಾಗಿ. ಅವಳೊಡನೆ ನಾನು ಪಶುವಿನಂತೆ ವರ್ತಿಸಿರುತ್ತೇನೆ. ಅದನ್ನು ತಿಳಿದೂ ತಿಳಿದು ಆಕೆಯು ಈ ಕಃಪದಾರ್ಥನನ್ನು ಪ್ರೀತಿಸುವಳೇ? ಅವಳ ಹೃದಯವು ಅತ್ಯಂತ ಶ್ರೇಷ್ಠವು; ಅವಳ ಪ್ರೇಮಕ್ಕೆ ಬೇರೆ ಉಪಮೆಯಿಲ್ಲ; ಆದರೆ ಅವಳ ತಂದೆಯು ನನಲ್ಲಿ ರೋಷಗೊಂಡಿರುವನು. ಅದರಿಂದ ಆತನು ನನ್ನ ಮೋರೆ ಕೂಡ ನೋಡಲಾರನು.

ಬ್ಲೇಕ:—ಈಗ ಆತನ ಮನೋಭಾವವೂ ಬದಲಿಸಿದೆ. ಡಾಫನಿಯು ನಿನ್ನ ವಿರಹದಿಂದ ಅತ್ಯಂತ ಕಾತರಳೂ ಅತ್ಯಂತ ಅಶಕ್ತಳೂ ಆಗಿರುತ್ತಾಳೆ.

ಅವಳು ದಿನದಿನಕ್ಕೆ ಹೆಚ್ಚೆ-ಹೆಚ್ಚು ಸೊರಗಹತ್ತಿದ್ದಾಳೆ; ನಿನ್ನನ್ನು ಬಿಟ್ಟರೆ ಅವಳ ಜೀವರಕ್ಷಣಕ್ಕೆ ಅನ್ಯ ಉಪಾಯವಿಲ್ಲೆಂದು ತಿಳಿದು, ಲಾರ್ಡ ಮೆಸಿಂಡೇಲನು ತನ್ನ ನಚ್ಚಿನ ಮಗಳ ಜೀವವನ್ನು ಬದುಕಿಸುವ ಹಾಗು ಅವಳನ್ನು ಸುಖಿಸುವ ಸಂಕಲ್ಪ ಮಾಡಿರುವನು. ನಿಮ್ಮಗಳ ಮಿಲನಕ್ಕೆ ಅವನಿನ್ನು ಅಡ್ಡಿಯನ್ನುಂಟು ಮಾಡುವದಿಲ್ಲ. ಆತನು ಡಾಫನಿಯನ್ನು ನಿನಗರ್ಪಿಸುವವಕ್ಕೆಂದು ಉತ್ಸುಕ ನಾಗಿ ನಿನ್ನನ್ನು ಪತ್ತೆ ಹಚ್ಚಿ ತರಲಿಕ್ಕೆಂದು ನನ್ನನ್ನು ಇಲ್ಲಿಗೆ ಕಳಿಸಿ ಕೊಟ್ಟಿರು ತ್ತಾನೆ. ಡಾಫನಿಯಾದರೂ ನಿನಗೊಂದು ಕಾಗದವನ್ನಿತ್ತಿರುತ್ತಾಳೆ.

ಬ್ಲೇಕನ ಆ ನುಡಿ ಕೇಳಿ ಕಿಲ್ಡೇಯಾರನ ಕಣ್ಣುಗಳು ಒಮ್ಮೆಲೆ ತೆರೆದವು. ಮುಖಮಂಡಲವು ಆನಂದದಿಂದ ಉಜ್ವಲವಾಯಿತ.. ಉಸಿರು ವೇಗದಿಂದ ಆಡಹತ್ತಿತು. ಅವನು ಅತಿ ಕಷ್ಟದಿಂದ ಕತ್ತನ್ನೆತ್ತಿ ತನ್ನ ಎರಡೂ ಕೈಗಳಮೇ ಲಿಟ್ಟುಕೊಂಡು:—"ಬ್ಲೇಕರೇ, ತಮ್ಮ ಮಾತು ನಿಜವೇ? ಲಾರ್ಡ ಮೆಸಿಂಡೇ ಲನು ನನ್ನನ್ನು ಕರೆತರಲೆಂದು ನಿಮ್ಮನ್ನು ನಿಜವಾಗಿಯೂ ಕಳಿಸಿರುವನೇ? ಅವನು ಡಾಫನಿಯನ್ನು ನನಗರ್ಪಿಸುವನೇ? ನನ್ನ ಗತಾಯುಷ್ಯದ ಎಲ್ಲ ಕಷ್ಟ ಗಳೂ ಮುಚ್ಚಿ ಹೋಗುವವೇ? ಗತಿಸಿದ ಸುಖದ ದಿನಗಳು ಮತ್ತೆ ತಿರುಗಿ ಬರು ವವೇ? ಇದೇನು ಶಕ್ಯವೋ? ಇದೇನು ಸತ್ಯವೋ? ಬ್ಲೇಕರೇ, ನಿಮ್ಮ ಮಾತು ಕೇಳಿ ನನಗೆ ಮತ್ತೆ ಬದುಕುವ ಮನಸ್ಸಾಗುತ್ತದೆ. ಅಂಧಕಾರಮಯವಾದ ಭೂಮಿಯು ಮತ್ತೆ ಸೂರ್ಯಪ್ರಕಾಶದಿಂದ ಬೆಳಗಹತ್ತಿತು. ಮೊದಲಿನಂ ತೆಯೇ ಸುಖ, ಶಾಂತಿ, ಆನಂದಗಳು ದೊರೆಯುವವೆಂದು ಅನಿಸುತ್ತದೆ. ದೇವಾ, ಈ ಹತಭಾಗಿ, ಅಪದಾರ್ಥ ನರಾಧಮನ ಮೇಲೆ ನಿನ್ನ ಕರುಣೆ ಯೆಷ್ಟಪ್ಪಾ! ನನ್ನಂತಹ ಮಹಾ ಪಾಪಿಯನ್ನು ಕೂಡ ನೀನು ಕ್ಷಮಿಸಿದೆ ಯಲ್ಲವೆ? ದಯಾಮಯ; ನಿನ್ನ ದಯೆಗೆ ಮೇರೆಯೇ ಇಲ್ಲ!"

ಆಗ ಕಿಲ್ಡೇಯಾರನ ಎರಡೂ ಕಣ್ಣುಗಳಿಂದ ಅಶ್ರುಗಳು ಧಾರೆಗಟ್ಟಿ ಸುರಿಯಹತ್ತಿದವು; ಅವನು ಆಗ ಮತ್ತೇನನ್ನೂ ನುಡಿಯದಾದನು. ಆಕಸ್ಮಿಕ ವಾಗಿ ಆತನ ಕೈ ಮೇಲಿನ ತಲೆಯು ನೆಲಕ್ಕೆ ಬಿತ್ತು. ಆತನ ಉಸಿರು ಕಟ್ಟ ತೊಡಗಿತು. ದುರ್ಬಲ ಶರೀರಕ್ಕೆ, ಹಗುರಾದ ಮನಸ್ಸಿಗೆ ಅಂಥ ವಿಪುಲ ಆನಂ ದದ ವೇಗವನ್ನು ಸಹಿಸುವದಶಕ್ಯವಾಗಿ ಹೋಯಿತು. ಆತನ ಆ ಮೂರ್ಛಿತ ಸ್ಥಿತಿಯನ್ನು ಕಂಡು ಬ್ಲೇಕನು ಅಂಜಿದನು. ಅಷ್ಟರಲ್ಲೊಬ್ಬ ಪರಿಚಾರಿಕೆಯು ಅಲ್ಲಿಗೆ ಬಂದು ಅವನಿಗೊಂದಿಷ್ಟು ಬ್ರ್ಯಾಂಡಿ ಕುಡಿಸಿದಳು.

ಅದರಿಂದ ಅಲ್ಪಾವಧಿಯಲ್ಲೇ ಕಿಲ್ಡೇಯಾರನು ಹುಷಾರಾದನು. ಬಳಿಕ ಆತನು ಬ್ಲೇಕನನ್ನು ಕುರಿತು:—"ಡಾಫನಿಯು ಕೊಟ್ಟ ಪತ್ರವೆಲ್ಲಿದೆ? ಅದನ್ನು

ತೆಗೆಯಿರಿ ನೋಡೋಣ."

ಬ್ಲೇಕನು ಕೊಟ್ಟ ಆ ಪತ್ರವನ್ನಿಸಕೊಂಡು ಕಿಲ್ಡೇಯಾರನು ಅದನ್ನು ಪೂರಾ ಓದಿ ನೋಡಿದ ಬಳಿಕ ಉಲ್ಲಸಿತ ದನಿಯಿಂದ:—ಬ್ಲೇಕರೇ, ಈಗ ಮಾತ್ರ ನಿಮ್ಮ ಮಾತು ನಿಜವೆಂದು ಅನಿಸಿತು. ಭಲೆ! ದೇವರು ನನ್ನದೈವದಲ್ಲಿ ಇಷ್ಟು ಸುಖವನ್ನು ಬರೆದಿರುವನಲ್ಲವೇ?"

ಕಿಲ್ಡೇಯಾರನ ಮಾತು ಮುಗಿಯುವಷ್ಟರಲ್ಲಿ ಆಸ್ಪತ್ರೆಯ ಟ್ರೇನು ಸ್ಟೇಶನ್ನಿನ ಪ್ಲಾಟ್ಫಾರ್ಮಿನಲ್ಲಿ ಬಂದು ನಿಂತಿತು. ಆ ಟ್ರೇನಿನೊಳಗೆ ಗಾಯ ಗೊಂಡವರ ಸಲುವಾಗಿ ಅತಿ ಶುಭ್ರವೂ ದಪ್ಪವೂ ಆದ ಹಾಸಿಗೆಗಳು ಹಾಸ ಲ್ಪಟ್ಟಿದ್ದವು. ಪ್ರತಿಯೊಂದು ಡಬ್ಬಿಯಲ್ಲಿ ಎಷ್ಟೋ ಜನ ಪರಿಚಾರಿಕೆಯರೂ ಪರಿಚಾರಕರರೂ ಇರುತ್ತಿದ್ದರು. ಗಾಯಗೊಂಡ ಸೈನಿಕರ ವಿರಾಮಕ್ಕೂ ಕಷ್ಟನಿವಾರಣಕ್ಕೂ ಎಷ್ಟು ಹೆಚ್ಚು ವ್ಯವಸ್ಥೆ ಮಾಡಬಹುದಿತ್ತೋ ಅಷ್ಟಕ್ಕೆ ಅಲ್ಲಿ ಕೊರತೆಯಿರಲಿಲ್ಲ. ಟ್ರೇನು ಬಂದ ಕೂಡಲೆ ಗಾಯಗೊಂಡ ದಂಡಾಳುಗಳ ನ್ನೆತ್ತಿ ಬೇರೆ ಬೇರೆ ಡಬ್ಬಿಗಳಿಗೊಯ್ದು ಪ್ರತ್ಪ್ರತ್ಯೇಕಗಳಾದ ಹಾಸಿಗೆಗಳ ಮೇಲೆ ಮಲಗಿಸಿದರು. ಬ್ಲೇಕನೂ ಸ್ಮಿತ್ಥನೂ ಸೇರಿ ಕಿಲ್ಡೇಯಾರನನ್ನೊಂದು ಹಾಸಿಗೆಗೊಯ್ದು ಮಲಗಿಸಿದರು. ಆ ಮೇಲೆ ಅವನಿಂದ ಅಪ್ಪಣೆಪಡೆಯು ವಾಗ ಬ್ಲೇಕ:—"ಇಂದು ಸಂಜೆಗೆ ರೋಯಾರದಲ್ಲಿ ಮತ್ತೆ ನಿನ್ನನ್ನು ಕಾಣು ವೆನು. ದೇವರು ನಿನಗೆ ಕಲ್ಯಾಣ ಮಾಡಲಿ."

ಟ್ರೇನು ಸಕಾಲದಲ್ಲಿ ಸ್ಟೇಶನ್ನು ಬಿಟ್ಟು ಹೊರಟಿತು. ಕೂಡಲೆ ಬ್ಲೇಕ ನು ಸ್ಮಿತ್ಥನೊಡನೆ ತನ್ನ ಮೊಟರನ್ನೇರಿ ವಾಯುವೇಗದಿಂದ ಸಿನ್ ನದೀ ದಡ ದಲ್ಲಿ ಪ್ರಾಕೃತಿಕ ಸೌಂದರ್ಯಗಳ ಲೀಲಾನಿಕೇತನದಂತಿರುವ ರೋಯಾರ ಪಟ್ಟಣಕ್ಕಭಿಮುಖವಾಗಿ ಸಾಗಿದನು. ರಣಭೂಮಿಯೊಳಗಿನ ಕೋಲಾಹಲ ಶಬ್ದವೂ, ತೋಫು-ತುಬಾಕಿಗಳ ಸುಗಂಭೀರ ಸಪ್ಪಳವೂ, ಮೇಘಗಳೇ ಗಡ್ಡೆ ಗಟ್ಟಿರುವಂತೆ ತೋರುವ ಹೊಗೆಯೂ ಅವರಿಂದ ಬಹು ಹಿಂದೆ ಉಳಿದವು.

ಆಗ ಸ್ಮಿತ್ಥನು ಬ್ಲೇಕನನ್ನು ಕುರಿತು:—"ನಾವು ರೋಯಾರದಲ್ಲೆಷ್ಟು ದಿನವಿರಬೇಕು?"

ಬ್ಲೇಕ:—"ಕಿಲ್ಡೇಯಾರನು ಸಂಪೂರ್ಣ ಗುಣ ಹೊಂದುವವರೆಗೆ. ಅವನು ಗುಣ ಹೊಂದಿ ಆಸ್ಪತ್ರೆಯಿಂದ ಬಿಡುಗಡೆ ಹೊಂದುವ ವರೆಗೂ ನಾವು ರೋಯಾರದಲ್ಲೇ ಇರಬೇಕಾಗುವದು. ಆತನಿಗೆ ತೀವ್ರವೇ ಗುಣವಾಗಬಹು ದೆಂದೆನಿಸುತ್ತವೆ.

———

# ಉಪಸಂಹಾರ.

ಮುಂದೆ ಕೆಲವು ದಿನಗಳಲ್ಲೇ ಬ್ರಾವುನ್ ಕಿಲ್ಡೇಯೂರನು ಸಂಪೂರ್ಣ ಆರೋಗ್ಯ ಪಡೆದು ಇಂಗ್ಲಂಡಕ್ಕೆ ಮರಳಿದನು. ಲಂಡನ್ನಿಗೆ ಬಂದು ನೋಡು ತ್ತಾನೆ, ಅಲ್ಲಿಯವರೆಲ್ಲರೂ ತನ್ನ ಶೌರ್ಯ-ಸಾಹಸಗಳ ಬಗ್ಗೆ ಹೆಚ್ಚಾಗಿ ಹೊಗ ಳುತ್ತಿದ್ದಾರೆ. ಯಾರು ಸ್ವತಃ ವೀರರೋ ಅವರೇ ಎಲ್ಲಕ್ಕೂ ಮೊದಲು ವೀರರನ್ನು ಸನ್ಮಾನಿಸುವರು. ಇಂಗ್ಲಂಡೇಶ್ವರನು ಕಿಲ್ಡೇಯೂರನ ಶೌರ್ಯ-ಸಾಹಸಗಳ ಪುರಸ್ಕಾರರೂಪದ ಸರ್ವಸಾಧನವಾದ ವ್ಹಿಕ್ಟೋರಿಯಾ ಕ್ರಾಸನ್ನು ಸ್ವಹಸ್ತದಿಂದ ಆತನ ಎವೆಯ ಮೇಲೆ ತೂಗಗಟ್ಟಿದನು; ಹಾಗು ಆತನ ಸದ್ಯ ಸ್ಥಿತಿಯನ್ನು ತಿಳಿದು, ಅವನನ್ನು ಆತನಿದ್ದ ದಂಡಿನ ಕಪ್ತಾನನನ್ನಾಗಿ ಮಾಡಿ ದನು. ಮುಂದೆ ಕೆಲ ದಿನಗಳ ಮೇಲೆ ಲಾರ್ಡ ಮೆಸಿಂಡೇಲನು ಡಾಫನಿ ಭಾರನನ್ನಳನ್ನು ಅವನಿಗೆ ಕೊಟ್ಟು ಮದುವೆ ಮಾಡಿದನು.

ವಿವಾಹದ ನಂತರ ಕಿಲ್ಡೇಯೂರನು ಮಡದಿಯೊಡನೆ ತನ್ನ ಸರೇ ಜಿಲ್ಲೆ ಯೊಳಗಿನ ಸೋದರತ್ತೆಯ ಮನೆಗೆ ಹೋದನು. ಆ ಪ್ರಚಂಡವಾದ ಮನೆ-ಮಠ, ವಿಸ್ತೀರ್ಣಗಳಾದ ಹೊಲ-ಗದ್ದೆ ಹಾಗು ತನ್ನದಾಗಿದ್ದ ಎಲ್ಲ ಧನ-ಸಂ ಪತ್ತನ್ನು ನಿರೀಕ್ಷಿಸಿದನು. ಈಗ ಬ್ರಾವುನ್ ಕಿಲ್ಡೇಯೂರನು ಲಕ್ಷಾಧಿಪತಿಯಾಗಿ ದ್ದನು!

ಆದರೆ ಆ ಅತ್ಯಂತ ಸುಖದ ದಿನಗಳಲ್ಲೂ ಕಿಲ್ಡೇಯೂರನು ತನ್ನ ಸ್ವದೇಶ ವಿಷಯಕ ಕರ್ತವ್ಯವನ್ನು ಮರೆಯಲಿಲ್ಲ. ಸುಖ, ಐಶ್ವರ್ಯ, ಲಗ್ನವಾದ ಹೆಂಡ ತಿಯ ಹೃದಯಭರಿತವಾದ ಪ್ರೇಮ ಇವೆಲ್ಲವುಗಳನ್ನು ಉಪೇಕ್ಷಿಸಿ, ಲಗ್ನವಾದ ಕೆಲ ದಿನಗಳಲ್ಲೇ ಆತನು ತನ್ನ ರೆಜಿಮೆಂಟನ್ನು ಕೂಡಿಕೊಳ್ಳಲಿಕ್ಕೆಂದು ಫ್ರಾನ್ಸ ದೇಶಕ್ಕೆ ಹೊರಟನು. ಯಾವ ಅನೇಕ ಮಂದಿ ಸೈನ್ಯಾಧಿಕಾರಿಗಳು ಫ್ರಾನ್ಸದ ರಣ ಭೂಮಿಯಲ್ಲಿ ಅಪೂರ್ವ ಶೌರ್ಯವನ್ನು ಪ್ರದರ್ಶಿಸಿ ವೀರಜನರಿಂದ ಹೊಗಳಿಸಿ ಕೊಂಡಿರುವರೋ, ಬ್ರಾವುನ್ ಕಿಲ್ಡೇಯೂರನು ಅವರಲ್ಲೊಬ್ಬನು. ಆ ಮಹಾ ಯುದ್ಧದಲ್ಲಿ ಶೌರ್ಯ ಸಾಹಸಗಳನ್ನು ತೋರಿಸಿದ ಬಗ್ಗೆ ಯಾರ ಯಾರ ಹೆಸರು ಗಳು ಇತಿಹಾಸದಲ್ಲಿ ಸುವರ್ಣಾಕ್ಷರಗಳಿಂದ ಬರೆಯಲ್ಪಡಬಹುದೋ ನಮ್ಮ ಬ್ರಾವುನ್ ಕಿಲ್ಡೇಯೂರನು ಅವರುಗಳಲ್ಲಿ ಅಗ್ರೇಸರನು; ಆದರೆ ಆತನ ಈಗಿನ ಹೆಸರನ್ನು ಪ್ರಕಟಿಸುವ ಅಧಿಕಾರವು ನಮಗಿಲ್ಲದಾಗಿದೆ. ಅಸ್ತು.

---

— ಸಂಪೂರ್ಣ —